# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 01
ಸದಸ್ಯರ ಹೆಸರು : ಶ್ರೀ ಸೋಮನಗೌಡ ಬಿ. ಪಾಟೀಲ್ (ಸಾಸನೂರು) (ದೇವರ ಹಿಪ್ಪರಗಿ)
ಉತ್ತರಿಸುವ ಸಚಿವರು : ಕಂದಾಯ ಸಚಿವರು
ಉತ್ತರಿಸುವ ದಿನಾಂಕ : 01.02.2021

*********

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಹೊಸದಾಗಿ ರಚನೆಯಾದ ದೇವರ ಹಿಪ್ಪರಗಿ ತಾಲ್ಲೂಕಿನಲ್ಲಿ ಮಿನಿವಿಧಾನಸೌಧ ಕಟ್ಟಡವನ್ನು ಯಾವಾಗ ನಿರ್ಮಿಸಲಾಗುವುದು; | ದೇವರ ಹಿಪ್ಪರಗಿ ನೂತನ ತಾಲ್ಲೂಕಿನಲ್ಲಿ ಮಿನಿವಿಧಾನಸೌಧ ಕಟ್ಟಡ ನಿರ್ಮಾಣಕ್ಕಾಗಿ ಲೋಕೋಪಯೋಗಿ ಇಲಾಖೆಗೆ ಸೇರಿರುವ ರಿ.ಸ.ನಂ.203/ಬ ರಲ್ಲಿನ 6-ಎ 14ಗುಂಟೆ ಜಮೀನನ್ನು ಕಂದಾಯ ಇಲಾಖೆಗೆ ಹಸ್ತಾಂತರಿಸುವ ಪ್ರಕ್ರಿಯೆ ಚಾಲ್ತಿಯಲ್ಲಿರುತ್ತದೆ.<br>ಮಿನಿ ವಿಧಾನಸೌಧ ಕಟ್ಟಡ ಕಾಮಗಾರಿಗೆ ಜಮೀನು ಹಸ್ತಾಂತರಿಸುವ ಅಂತಿಮ ಪ್ರಕ್ರಿಯೆ ಪೂರ್ಣಗೊಂಡ ನಂತರ, ಮಿನಿ ವಿಧಾನಸೌಧ ಕಟ್ಟಡ ನಿರ್ಮಿಸಲು ಜಿಲ್ಲಾಧಿಕಾರಿಗಳಿಂದ ಸವಿವರ ಅಂದಾಜು ಪಟ್ಟಿ ಪಡೆದು ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ ಕ್ರಮವಹಿಸಲಾಗುತ್ತದೆ. |
| ಆ) | ಮಿನಿ ವಿಧಾನಸೌಧ ಕಟ್ಟಡವನ್ನು ನಿರ್ಮಿಸಲು ಬೇಕಾಗಿರುವ ಸ್ಥಳದ ಲಭ್ಯತೆ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | |
| ಇ) | ಬಂದಿದ್ದಲ್ಲಿ, ಲಭ್ಯವಿರುವ ಜಮೀನನ್ನು ಕಟ್ಟಡ ನಿರ್ಮಾಣಕ್ಕಾಗಿ ವಶಕ್ಕೆ ಪಡೆಯಲಾಗಿದೆಯೇ; ಹಾಗಿದ್ದಲ್ಲಿ, ಜಮೀನಿನ ವಿಸ್ತೀರ್ಣವೆಷ್ಟು; (ಸರ್ವೆ ನಂಬರ್ ಸಹಿತ ವಿವರ ನೀಡುವುದು) | |
| ಈ) | ಮಿನಿ ವಿಧಾನಸೌಧ ನಿರ್ಮಿಸಲು ಈಗಾಗಲೇ ಅನುದಾನ ಮೀಸಲಿರಿಸಲಾಗಿದೆಯೇ; ಹಾಗಿದ್ದಲ್ಲಿ, ಮೀಸಲಿರಿಸಲಾಗಿರುವ ಅನುದಾನವೆಷ್ಟು? (ವಿವರ ನೀಡುವುದು) | ಹೊಸದಾಗಿ ರಚನೆಯಾದ ತಾಲ್ಲೂಕುಗಳಲ್ಲಿ ರೂ.10.00 ಕೋಟಿಗಳ ವೆಚ್ಚದಲ್ಲಿ ಎಲ್ಲಾ ಮೂಲಭೂತ ಸೌಲಭ್ಯಗಳನ್ನೊಳಗೊಂಡಂತೆ, ಮಿನಿ ವಿಧಾನಸೌಧ ನಿರ್ಮಿಸಲು ಸರ್ಕಾರದ ಸುತ್ತೋಲೆ ಸಂಖ್ಯೆ:ಕಂಇ100ಡಬ್ಲ್ಯೂಬಿಆರ್ 2017, ದಿನಾಂಕ:31.10.2017 ರಲ್ಲಿ ಅವಕಾಶ ಕಲ್ಪಿಸಲಾಗಿದೆ. |

ಕಂಇ 14 ಡಬ್ಲ್ಯೂಬಿಆರ್ 2021

(ಆರ್. ಅಶೋಕ)
ಕಂದಾಯ ಸಚಿವರು

# ಕರ್ನಾಟಕ ವಿಧಾನಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 3 |
| ಸದಸ್ಯರ ಹೆಸರು | : | ಶ್ರೀ ಆನಂದ್ ಸಿದ್ದು ನ್ಯಾಮಗೌಡ (ಜಮಖಂಡಿ) |
| ಉತ್ತರಿಸುವ ಸಚಿವರು | : | ಕಂದಾಯ ಸಚಿವರು |
| ಉತ್ತರಿಸುವ ದಿನಾಂಕ | : | 01.02.2021 |

********

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಜಮಖಂಡಿ ನಗರದಲ್ಲಿ ನಿರ್ಮಾಣವಾಗಿರುವ ಮಿನಿ ವಿಧಾನಸೌಧ ಕಟ್ಟಡದ 3ನೇ ಹಂತದ ಕಾಮಗಾರಿಗೆ ಯಾವಾಗ ಮಂಜೂರಾತಿ ನೀಡಲಾಗುವುದು; | ಜಮಖಂಡಿ ನಗರದಲ್ಲಿ ನಿರ್ಮಾಣವಾಗಿರುವ ಮಿನಿ ವಿಧಾನ ಸೌಧ ಕಟ್ಟಡದ 3ನೇ ಹಂತದ ಕಾಮಗಾರಿಗೆ ಆಡಳಿತಾತ್ಮಕ ಮಂಜೂರಾತಿ ನೀಡುವ ಬಗ್ಗೆ ಸಚಿವ ಸಂಪುಟದ ಸಭೆಯ ಚರ್ಚೆಯ ನಂತರ ಸಕ್ಷಮ ಪ್ರಾಧಿಕಾರದ ಅನುಮೋದನೆ ಪಡೆಯದೇ ಕಟ್ಟಡದ ಕಾಮಗಾರಿಯನ್ನು ಕೈಗೊಂಡ ಕುರಿತು ತನಿಖೆ ನಡೆಸಿ, ಸಂಬಂಧಿಸಿದ ಅಧಿಕಾರಿಗಳ ವಿರುದ್ಧ ಜವಾಬ್ದಾರಿ ನಿಹಿತಗೊಳಿಸಿ, ಮರು ಮಂಡಿಸಲು ಸೂಚಿಸಿರುವುದರಿಂದ, ಈ ಬಗ್ಗೆ ಪ್ರಾದೇಶಿಕ ಆಯುಕ್ತರು, ಬೆಳಗಾವಿ ವಿಭಾಗ ಇವರಿಂದ ವರದಿ ಕೋರಲಾಗಿದ್ದು, ಸದರಿ ವರದಿ ಸ್ವೀಕೃತವಾದ ನಂತರ ಜಮಖಂಡಿ ಮಿನಿ ವಿಧಾನ ಸೌಧ 3ನೇ ಹಂತದ ಕಾಮಗಾರಿಗೆ ಮಂಜೂರಾತಿ ನೀಡುವ ಬಗ್ಗೆ ಕ್ರಮ ವಹಿಸಲಾಗುತ್ತದೆ. |
| ಆ) | ಜಮಖಂಡಿಯು ಬಾಗಲಕೋಟೆ ಜಿಲ್ಲೆಯಲ್ಲಿ ಅತೀ ದೊಡ್ಡ ಉಪವಿಭಾಗವಾಗಿದ್ದು ಜಮಖಂಡಿ, ಮುಧೋಳ, ಬೀಳಗಿ, ರಬಕವಿ – ಬನಹಟ್ಟಿ ತೇರದಾಳ ಎಲ್ಲಾ ತಾಲ್ಲೂಕುಗಳು ಸೇರಿ ಇರುವುದರಿಂದ ಕಛೇರಿ ಕಟ್ಟಡದ 3ನೇ ಹಂತದ ಕಾಮಗಾರಿಗೆ ಮಂಜೂರಾತಿ ನೀಡುವುದು ಅತೀ ಅವಶ್ಯಕವಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ? | |

ಕಂಇ 12 ಡಬ್ಲ್ಯೂಬಿಆರ್ 2021

(ಆರ್. ಅಶೋಕ)
ಕಂದಾಯ ಸಚಿವರು

# ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 6 |
| ಸದಸ್ಯರ ಹೆಸರು | : | ಶ್ರೀ ಸುಬ್ಬಾರೆಡ್ಡಿ. ಎಸ್.ಎನ್ (ಬಾಗೇಪಲ್ಲಿ) |
| ಉತ್ತರಿಸುವ ದಿನಾಂಕ | : | 01.02.2021. |
| ಉತ್ತರಿಸುವ ಸಚಿವರು | : | ಉಪಮುಖ್ಯಮಂತ್ರಿ<br>ಲೋಕೋಪಯೋಗಿ ಇಲಾಖೆ |

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| ಅ | ಕಳೆದ ಮೂರು ವರ್ಷಗಳಲ್ಲಿ ಬಾಗೇಪಲ್ಲಿ ವಿಧಾನಸಭಾ ಕ್ಷೇತ್ರದಲ್ಲಿ ಸಿ.ಆರ್.ಎಫ್. ಯೋಜನೆಯಡಿ ಯಾವ ಯಾವ ಕಾಮಗಾರಿಗಳನ್ನು ಕೈಗೆತ್ತಿಕೊಳ್ಳಲಾಗಿದೆ; (ವಿವರ ನೀಡುವುದು) | ಬಾಗೇಪಲ್ಲಿ ವಿಧಾನಸಭಾ ಕ್ಷೇತ್ರದಲ್ಲಿ ಸಿ.ಆರ್.ಎಫ್. ಯೋಜನೆಯಡಿ ಈ ಕೆಳಕಂಡ 2 ಕಾಮಗಾರಿಗಳನ್ನು ಕೈಗೊಳ್ಳಲಾಗಿದೆ. (ವಿವರ ಕೆಳಗಿನ ಕೋಷ್ಟಕದಲ್ಲಿ) |
| ಆ | ಈ ಕಾಮಗಾರಿಗಳ ನಿರ್ವಹಣೆಯನ್ನು ಯಾವ ಸಂಸ್ಥೆಗೆ ಗುತ್ತಿಗೆ ನೀಡಲಾಗಿದೆ; | |
| ಇ | ಈ ಕಾಮಗಾರಿಗಳು ಯಾವ ಹಂತದಲ್ಲಿವೆ;(ವಿವರ ನೀಡುವುದು) | |

| ಕಾಮಗಾರಿ ವಿವರ | ಅಂದಾಜು ಮೊತ್ತ ಲಕ್ಷಗಳಲ್ಲಿ | ಗುತ್ತಿಗೆ ನೀಡಲಾದ ಸಂಸ್ಥೆ | ಕಾಮಗಾರಿ ಹಂತ |
|---|---|---|---|
| 1) ಚಿಕಬಳ್ಳಾಪುರ ಜಿಲ್ಲೆಯ ಗುಡಿಬಂಡೆ ತಾಲ್ಲೂಕು ಗುಡಿಬಂಡೆ– ಚನ್ನರಾಯನಹಳ್ಳಿ ರಸ್ತೆ ಅಗಲಿಕರಣ ಮತ್ತು ರಸ್ತೆ ಅಭಿವೃದ್ಧಿ ಕಾಮಗಾರಿ ಕಿಮಿ. 0.00 ದಿಂದ 6.00 ರವರೆಗೆ | 500.00 | ಮುಕಾಂಭಿಕ ಕನ್ಸಸ್ಟ್ರಕ್ಷನ್ಸ್ ಪ್ರೈವೇಟ್ ಲಿಮಿಟೆಡ್ ವಿಜಯನಗರಂ, ಆಂದ್ರಪ್ರದೇಶ | ಕಾಮಗಾರಿ ಪೂರ್ಣ ಗೊಂಡಿದೆ |
| 2) ಬಾಗೇಪಲ್ಲಿಯಿಂದ ಮಾರ್ಗಾನುಕುಂಟೆ (ಬಾಗೇಪಲ್ಲಿ – ಗೂಳೂರು– ತಿಮ್ಮಂಪಲ್ಲಿ ರಸ್ತೆ) ಕಿ.ಮೀ. 0.00 ಯಿಂದ 10.00 ವರೆಗೆ (ಆಯ್ದ ಭಾಗಗಳು) ಮತ್ತು ರಾಜ್ಯ ಹೆದ್ದಾರಿ–5 ಚಿಂತಾಮಣಿ ಬಾಗೇಪಲ್ಲಿ ರಸ್ತೆಯಿಂದ ರಾಷ್ಟ್ರೀಯ ಹೆದ್ದಾರಿ–7 ರ ವರೆಗೆ ಕಿ.ಮೀ. 0.00 ಯಿಂದ 10.00 ವರೆಗೆ (ಆಯ್ದ ಭಾಗಗಳು) ರಸ್ತೆ ಅಬಿವೃದ್ಧಿ ಕಾಮಗಾರಿ. | 800.00 | ಮೆ// ಸತ್ಯ ಗಣಪತಿ ಕನ್ಸಸ್ಟ್ರಕ್ಷನ್ಸ್, ಬೆಂಗಳೂರು | 1.80 ಕಿ.ಮೀ ಬಿ.ಸಿ. ಪೂರ್ಣಗೊಂಡಿದೆ ಮತ್ತು 0.80 ಕಿಮೀ ಡಿ.ಬಿಎಂ ವರೆಗೆ ಪೂರ್ಣಗೊಂಡಿದೆ |

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| ಈ | ಈ ಕಾಮಗಾರಿಗಳನ್ನು ಪೂರ್ಣಗೊಳಿಸಲು ಬೇಕಾಗುವ ಸಮಯಾವಕಾಶವೆಷ್ಟು; (ವಿವರ ನೀಡುವುದು) | ಜೂನ್ 2021 ರ ಅಂತ್ಯದೊಳಗೆ ಪೂರ್ಣಗೊಳಿಸಲು ಕ್ರಮ ಕೈಗೊಳ್ಳಲಾಗುವುದು. |
| ಉ | 2020–21ನೇ ಸಾಲಿನಲ್ಲಿ ಸಿ.ಆರ್.ಎಫ್. ಯೋಜನೆಯಡಿ ಯಾವ ಯಾವ ಕಾಮಗಾರಿ ಗಳನ್ನು ಪ್ರಸ್ತಾಪಿಸಲಾಗಿದೆ; ಪ್ರಸ್ತಾವನೆಯು ಪ್ರಸ್ತುತ ಯಾವ ಹಂತದಲ್ಲಿದೆ? (ವಿವರ ನೀಡುವುದು) | 1) ಬಂಗಾರಪೇಟೆ–ಬಾಗೇಪಲ್ಲಿ ಸರಪಳಿ 87.70 ರಿಂದ 97.00 ಕಿ.ಮೀ ವರೆಗೆ ರಸ್ತೆ ಅಗಲೀಕರಣ ಮತ್ತು ರಸ್ತೆ ಅಬಿವೃದ್ಧಿ ಕಾಮಗಾರಿ. ಉದ್ದ:9.30 ಕಿ.ಮೀ ಅಂದಾಜು ಮೊತ್ತ ರೂ.1000.00 ಲಕ್ಷಗಳು.<br><br>2) ಬಂಗಾರಪೇಟೆ–ಬಾಗೇಪಲ್ಲಿ ಸರಪಳಿ 100.50 ರಿಂದ 103.50 ಕಿ.ಮೀ ವರೆಗೆ ಚತುಷ್ ಪಥ ರಸ್ತೆಯಾಗಿ ಅಗಲೀಕರಣ ಮತ್ತು ರಸ್ತೆ ಅಬಿವೃದ್ಧಿ ಕಾಮಗಾರಿ. ಉದ್ದ:3.00 ಕಿ.ಮೀ ಅಂದಾಜು ಮೊತ್ತ ರೂ.500.00 ಲಕ್ಷಗಳು. ಕಾಮಗಾರಿಗಳ ಪ್ರಸ್ತಾವನೆ ಸ್ವೀಕೃತವಾಗಿದ್ದು ಪರಿಶೀಲನೆಯಲ್ಲಿದೆ. |

ಲೋಇ 8 ಸಿಆರ್‌ಎಫ್ 2021 (ಇ)

(ಗೋವಿಂದ ಎಂ. ಕಾರಜೋಳ)
ಉಪಮುಖ್ಯಮಂತ್ರಿ
ಲೋಕೋಪಯೋಗಿ ಇಲಾಖೆ.

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 7
ಸದಸ್ಯರ ಹೆಸರು : ಶ್ರೀ ಸುಬ್ಬಾರೆಡ್ಡಿ ಎಸ್.ಎನ್. (ಬಾಗೇಪಲ್ಲಿ)
ಉತ್ತರಿಸುವ ದಿನಾಂಕ : 01-02-2021
ಉತ್ತರಿಸುವ ಸಚಿವರು : ಕಂದಾಯ ಸಚಿವರು

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಬಾಗೇಪಲ್ಲಿ ಕ್ಷೇತ್ರಕ್ಕೆ ಅಕ್ರಮ ಸಾಗುವಳಿ ಸಕ್ರಮೀಕರಣ ಸಮಿತಿಯನ್ನು ರಚನೆ ಮಾಡದಿರಲು ಕಾರಣಗಳೇನು; | ಬಾಗೇಪಲ್ಲಿ ವಿಧಾನಸಭಾ ಕ್ಷೇತ್ರಕ್ಕೆ ಬಗರ್ ಹುಕುಂ ಸಕ್ರಮೀಕರಣ ಸಮಿತಿ ರಚನೆ ಮಾಡಲು ಜಿಲ್ಲಾಧಿಕಾರಿಗಳು, ಚಿಕ್ಕಬಳ್ಳಾಪುರ ಜಿಲ್ಲೆ ಇವರಿಂದ ಪ್ರಸ್ತಾವನೆಯು ಸ್ವೀಕೃತವಾಗಿದ್ದು, ಪ್ರಸ್ತಾವನೆಯು ಸರ್ಕಾರದ ಹಂತದಲ್ಲಿ ಪರಿಶೀಲನೆಯಲ್ಲಿದೆ. |
| ಆ) | ಇದರಿಂದ ನಮೂನೆ 50, 53, 57 ರಲ್ಲಿ ಅರ್ಜಿ ಸಲ್ಲಿಸಿದ ರೈತರಿಗೆ ಭೂ ಮಂಜೂರು ಮಾಡಲು ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಇ) | ಬಂದಿದ್ದಲ್ಲಿ, ಸದರಿ ಸಮಿತಿಯನ್ನು ಯಾವಾಗ ರಚನೆ ಮಾಡಲಾಗುವುದು; (ವಿವರ ನೀಡುವುದು) | ಕ್ರಮವಹಿಸಲಾಗುತ್ತಿದೆ. |
| ಈ) | ನಮೂನೆ 57ರ ಅರ್ಜಿ ಸಲ್ಲಿಕೆಗೆ ಮತ್ತೊಮ್ಮೆ ಅವಕಾಶ ನೀಡಲಾಗುವುದೇ? (ವಿವರ ನೀಡುವುದು) | ನಮೂನೆ 57 ರಲ್ಲಿ ಅರ್ಜಿ ಸ್ವೀಕರಿಸಲು ಮತ್ತೊಮ್ಮೆ ಕಾಲಾವಕಾಶ ನೀಡುವ ಬಗ್ಗೆ ಸರ್ಕಾರದ ಹಂತದಲ್ಲಿ ಪರಿಶೀಲನೆಯಲ್ಲಿದೆ. |

**ಸಂಖ್ಯೆ: ಆರ್‌ಡಿ 05 ಎಲ್‌ಜಿಕ್ಯೂ 2021 (ಇ)**

**(ಆರ್.ಅಶೋಕ)**
**ಕಂದಾಯ ಸಚಿವರು**

## ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 8
ಸದಸ್ಯರ ಹೆಸರು : ಶ್ರೀ ಸುಬ್ಬಾರೆಡ್ಡಿ ಎಸ್.ಎನ್. (ಬಾಗೇಪಲ್ಲಿ)
ಉತ್ತರಿಸುವ ದಿನಾಂಕ : 01-02-2021
ಉತ್ತರಿಸುವ ಸಚಿವರು : ಕಂದಾಯ ಸಚಿವರು

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಸರ್ಕಾರಿ ಜಮೀನಿನಲ್ಲಿ ಅಕ್ರಮವಾಗಿ ಕಟ್ಟಡ ನಿರ್ಮಾಣ ಮಾಡಿ ಕೊಂಡಿರುವುದನ್ನು ಸಕ್ರಮ ಮಾಡಲು ಈ ಹಿಂದೆ 94ಸಿಸಿ ಅಡಿಯಲ್ಲಿ ಅರ್ಜಿ ಸಲ್ಲಿಕೆಗೆ ಅವಕಾಶ ಕಲ್ಪಿಸಲಾಗಿದ್ದು, ಮಾಹಿತಿ ಕೊರತೆಯಿಂದ ಅನೇಕರು ಅರ್ಜಿಸಲ್ಲಿಸದೇ ಇರುವ ಕಾರಣ ಮತ್ತೊಮ್ಮೆ ಅರ್ಜಿ ಸಲ್ಲಿಕೆಗೆ ಅವಕಾಶ ನೀಡಲಾಗುವುದೇ; (ವಿವರ ನೀಡುವುದು) | ಸರ್ಕಾರಿ ಜಮೀನಿನಲ್ಲಿ ಅನಧಿಕೃತವಾಗಿ ನಿರ್ಮಿಸಿರುವ ವಾಸದ ಮನೆಗಳನ್ನು ಸಕ್ರಮಗೊಳಿಸಲು ಕರ್ನಾಟಕ ಭೂ ಕಂದಾಯ ಕಾಯ್ದೆ, 1964 ರ ಕಲಂ 94ಸಿ ಮತ್ತು 94ಸಿಸಿ ರಡಿಯಲ್ಲಿ ಅವಕಾಶ ಕಲ್ಪಿಸಲಾಗಿದ್ದು, ಅರ್ಜಿ ಸಲ್ಲಿಸಲು ದಿನಾಂಕ: 31.03.2019 ರವರೆಗೆ ಅವಕಾಶ ಕಲ್ಪಿಸಲಾಗಿತ್ತು. ಸದರಿ ಅವಧಿಯು ಮುಕ್ತಾಯವಾದ ಹಿನ್ನೆಲೆಯಲ್ಲಿ ಪುನಃ ಅರ್ಜಿ ಸಲ್ಲಿಸಲು ದಿನಾಂಕ: 31.08.2021 ರವರೆಗೆ ಕಾಲಾವಕಾಶ ವಿಸ್ತರಿಸುವ ಬಗ್ಗೆ ತಿದ್ದುಪಡಿ ನಿಯಮಗಳ ಕರಡು ಅಧಿಸೂಚನೆಯನ್ನು ದಿನಾಂಕ: 27.01.2021 ರಂದು ಹೊರಡಿಸಲಾಗಿದೆ. |
| ಆ) | ಹಾಗಿದ್ದಲ್ಲಿ, ಯಾವಾಗ ಅರ್ಜಿ ಸಲ್ಲಿಕೆಗೆ ಅವಕಾಶ ಕಲ್ಪಿಸಲಾಗುವುದು? (ವಿವರ ನೀಡುವುದು) | |

**ಸಂಖ್ಯೆ: ಆರ್‌ಡಿ 8 ಎಲ್‌ಜಿಕ್ಯೂ 2021**

**(ಆರ್. ಅಶೋಕ)**
**ಕಂದಾಯ ಸಚಿವರು.**

**ಕರ್ನಾಟಕ ವಿಧಾನ ಸಭೆ**

ಮಾನ್ಯ ಸದಸ್ಯರ ಹೆಸರು : ಶ್ರೀ ರಾಜೀವ್.ಪಿ (ಕುಡಚಿ)
ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 13
ಪ್ರಶ್ನೆಗೆ ಉತ್ತರಿಸುವ ಸಚಿವರು : ಕಂದಾಯ ಸಚಿವರು
ಉತ್ತರಿಸಬೇಕಾದ ದಿನಾಂಕ : 01.02.2021.

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ. | ಪ್ರತಿ ವರ್ಷವು ಬೆಳಗಾವಿ ಜಿಲ್ಲೆಯ ಕುಡಚಿ ಮತಕ್ಷೇತ್ರದ ಗುಂಡವಾಡ ಮತ್ತು ಶಿರಗೂರು ಗ್ರಾಮಗಳು ಪದೇ ಪದೇ ಕೃಷ್ಣ ನದಿ ಪ್ರವಾಹಕ್ಕೆ ಮುಳುಗಡೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು. |
| ಆ. | ಬಂದಿದಲ್ಲಿ, ಈ ಗ್ರಾಮಗಳನ್ನು ಶಾಶ್ವತ ಮುಳುಗಡೆ ಗ್ರಾಮಗಳೆಂದು ಘೋಷಿಸುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; | ಇಲ್ಲ. |
| ಇ. | ಹಾಗಿದಲ್ಲಿ, ಯಾವ ಕಾಲಮಿತಿಯಲ್ಲಿ ಸದರಿ ಗ್ರಾಮಗಳನ್ನು ಮುಳುಗಡೆ ಗ್ರಾಮಗಳೆಂದು ಘೋಷಿಸಿ ಮತ್ತು ಸ್ಥಳಾಂತರಿಸುವ ಪ್ರಸ್ತಾವನೆಗೆ ಅನುಮೋದನೆ ನೀಡಲಾಗುವುದು? (ವಿವರ ನೀಡುವುದು) | ಸಧ್ಯಕ್ಕೆ ಇಂತಹ ಪ್ರಸ್ತಾವನೆ ಸರ್ಕಾರದ ಮುಂದೆ ಇರುವುದಿಲ್ಲ. |

**ಸಂಖ್ಯೆ: ಕಂಇ 11 ಆರ್‌ಇಹೆಚ್ 2021.**

(ಆರ್. ಅಶೋಕ)
ಕಂದಾಯ ಸಚಿವರು

# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 20
ಸದಸ್ಯರ ಹೆಸರು : ಶ್ರೀ ಬಳ್ಳಾರಿ ವಿರೂಪಾಕ್ಷಪ್ಪ ರುದ್ರಪ್ಪ (ಬ್ಯಾಡಗಿ)
ಉತ್ತರಿಸುವ ದಿನಾಂಕ : 01-02-2021
ಉತ್ತರಿಸುವ ಸಚಿವರು : ಕಂದಾಯ ಸಚಿವರು

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿನ 'ಬ' ಖರಾಬು ಜಮೀನುಗಳನ್ನು ಸಾಗುವಳಿ ಮಾಡಲು, ಪಟ್ಟಾ ನೀಡಲು ಹಾಗೂ ಸದರಿ ಜಮೀನಿನಲ್ಲಿ ವಾಸಿಸುತ್ತಿರುವ ಜನರಿಗೆ ಹಕ್ಕು ಪತ್ರಗಳನ್ನು ನೀಡಲು ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಆ) | ಬಂದಿದ್ದಲ್ಲಿ ಸರ್ಕಾರ ಕೈಗೊಂಡ ಕ್ರಮಗಳೇನು; | ಕರ್ನಾಟಕ ಭೂ ಕಂದಾಯ ನಿಯಮಗಳು, 1966 ರ ನಿಯಮ 21(2) ರಲ್ಲಿ ನಿಗದಿಪಡಿಸಿರುವ ಘೂಟ್ ಖರಾಬ್ ಬಿ ಜಮೀನುಗಳು ಸಾರ್ವಜನಿಕ ಉದ್ದೇಶಗಳಿಗಾಗಿ ಮೀಸಲಿರಿಸಿದ ಸರ್ಕಾರಿ ಜಮೀನಾಗಿರುತ್ತದೆ. ಇಂತಹ ಜಮೀನುಗಳನ್ನು ಕಂದಾಯ ಭೂಮಿಯನ್ನಾಗಿ ಮಂಜೂರು ಮಾಡಲು ಅವಕಾಶವಿರುವುದಿಲ್ಲ. |
| ಇ) | ಸದರಿ 'ಬ' ಖರಾಬು ಭೂಮಿಯನ್ನು ಕಂದಾಯ ಭೂಮಿಯನ್ನಾಗಿ ಮಾಡುವುದರಿಂದ ಸರ್ಕಾರಕ್ಕಿರುವ ತೊಂದರೆಗಳೇನು? | |

**ಕಡತ ಸಂಖ್ಯೆ: ಆರ್‌ಡಿ 09 ಎಲ್‌ಜಿಕ್ಯೂ 2021**

(ಆರ್. ಅಶೋಕ)
ಕಂದಾಯ ಸಚಿವರು

## ಕರ್ನಾಟಕ ವಿಧಾನ ಸಭೆ

| | | |
|---|---|---|
| ಮಾನ್ಯ ಸದಸ್ಯರ ಹೆಸರು | : | ಶ್ರೀ ಬಳ್ಳಾರಿ ವಿರೂಪಾಕ್ಷಪ್ಪ ರುದ್ರಪ್ಪ (ಬ್ಯಾಡಗಿ) |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | **18** |
| ಉತ್ತರಿಸಬೇಕಾದ ದಿನಾಂಕ | : | 01.02.2021 |
| ಉತ್ತರಿಸಬೇಕಾದ ಸಚಿವರು | : | ವಸತಿ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ಕಳೆದ 3 ವರ್ಷಗಳಿಂದ ಆಯ್ಕೆಯಾಗಿದ್ದ ವಸತಿ ಮನೆಗಳಿಗೆ ಇದುವರೆಗೂ ಅನುದಾನ ಬಿಡುಗಡೆ ಮಾಡದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ; | ರಾಜ್ಯದ ಗ್ರಾಮೀಣ ಮತ್ತು ನಗರ ಪ್ರದೇಶಗಳಲ್ಲಿ ರಾಜೀವ್ ಗಾಂಧಿ ವಸತಿ ನಿಗಮದಿಂದ ವಿವಿಧ ವಸತಿ ಯೋಜನೆಗಳನ್ನು ಅನುಷ್ಠಾನಗೊಳಸಲಾಗುತ್ತಿದ್ದು, ವಸತಿ ಯೋಜನೆಗಳಡಿ ಫಲಾನುಭವಿಗಳು ನಿರ್ಮಿಸಿಕೊಂಡಿರುವ ಮನೆಗಳನ್ನು ನಿಗಮವು "ಇಂದಿರಾ ಮನೆ" ಆ್ಯಪ್ ಮೂಲಕ ಜಿ.ಪಿ.ಎಸ್ ಆಧಾರಿತ ಛಾಯಚಿತ್ರಗಳನ್ನು ಪಂಚಾಯತಿ ಅಭಿವೃದ್ಧಿ ಅಧಿಕಾರಿ/ನಗರ ಸ್ಥಳೀಯ ಸಂಸ್ಥೆಗಳ ಅಧಿಕಾರಿಗಳ ದೃಢೀಕರಣದ ಆಧಾರದ ಮೇಲೆ ಫಲಾನುಭವಿಗಳ ಆಧಾರ್ ಆಧಾರಿತ ಬ್ಯಾಂಕ್ ಖಾತೆಗೆ ನೇರವಾಗಿ ಅನುದಾನವನ್ನು ಬಿಡುಗಡೆಗೊಳಿಸಲಾಗುತ್ತಿತ್ತು.<br><br>ರಾಜ್ಯದ ವಿವಿಧ ಕಡೆಗಳಲ್ಲಿ ವಸತಿ ಯೋಜನೆಗಳಡಿ ಬಂದಂತಹ ದೂರುಗಳ ಹಿನ್ನಲೆಯಲ್ಲಿ ಅನುದಾನ ದುರ್ಬಳಕೆಯನ್ನು ತಡೆ ಹಿಡಿಯುವ ಉದ್ದೇಶದಿಂದ ಹಾಗೂ ಸಾರ್ವಜನಿಕ ಹಣ ಪೋಲಾಗದಂತೆ ತಪ್ಪಿಸಲು ಸರ್ಕಾರವು ದಿನಾಂಕ:16.11.2019 ರಂದು ಆದೇಶ ಹೊರಡಿಸಿ, ಈಗಾಗಲೇ ಪ್ರಗತಿಯಲ್ಲಿರುವ ಹಾಗೂ ಅನುದಾನ ಬಿಡುಗಡೆಗೆ ಬೇಡಿಕೆ ಇರುವ ಮನೆಗಳನ್ನು Geo ಆಧಾರಿತ Vigil App ಮೂಲಕ ಪರಿಶೀಲಿಸಲು ಗ್ರಾಮೀಣ ಪ್ರದೇಶದಲ್ಲಿ ಜಿಲ್ಲಾ ಪಂಚಾಯ್ತಿಯ ಮುಖ್ಯ ಕಾರ್ಯ ನಿರ್ವಹಣಾಧಿಕಾರಿಯವರು ಹಾಗೂ ನಗರ ಪ್ರದೇಶದಲ್ಲಿ ಜಿಲ್ಲಾಧಿಕಾರಿಯವರು ಪರಿಶೀಲಿಸಿ, ಅನುದಾನ ಬಿಡುಗಡೆಗೆ ಶಿಫಾರಸ್ಸು ಮಾಡಿರುವ ಮನೆಗಳಿಗೆ ಆಧಾರ್ ಜೋಡಣೆಯಾದ ಫಲಾನುಭವಿಗಳ ಬ್ಯಾಂಕ್ ಖಾತೆಗಳಿಗೆ ನೇರವಾಗಿ ಅನುದಾನ ಬಿಡುಗಡೆ ಮಾಡಲಾಗುತ್ತಿದ್ದು, ಈವರೆಗೂ ರೂ.1186.69 ಕೋಟಿಗಳನ್ನು ಬಿಡುಗಡೆ ಮಾಡಲಾಗಿದೆ.<br><br>ಪ್ರಸ್ತುತ ಪ್ರಗತಿಯಲ್ಲಿರುವ ಮನೆಗಳಿಗೆ ಪ್ರಗತಿಗನುಸಾರವಾಗಿ ಶೀಘ್ರವಾಗಿ ಅನುದಾನ ಬಿಡುಗಡೆಗೆ ಕ್ರಮ ವಹಿಸಲಾಗುತ್ತಿದೆ. |
| (ಆ) | ಬಂದಿದ್ದಲ್ಲಿ, ಸರ್ಕಾರ ಕೈಗೊಂಡಿರುವ ಕ್ರಮಗಳೇನು ? (ವಿವರ ನೀಡುವುದು) | |

ಸಂಖ್ಯೆ :ವಇ 21 ಹೆಚ್‌ಎಎಂ 2021

(ವಿ. ಸೋಮಣ್ಣ)
ವಸತಿ ಸಚಿವರು



# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 22

ಸದಸ್ಯರ ಹೆಸರು : ಶ್ರೀ ಹಾಲಪ್ಪ ಹರತಾಳ್ ಹೆಚ್ (ಸಾಗರ)

ಉತ್ತರಿಸುವ ದಿನಾಂಕ : 01.02.2021

ಉತ್ತರಿಸುವ ಸಚಿವರು : ಕಂದಾಯ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ರಾಜ್ಯದಲ್ಲಿ ಕಂದಾಯ ಗ್ರಾಮ ಲೆಕ್ಕಾಧಿಕಾರಿಗಳು ಮತ್ತು ಶಿರಸ್ತೇದಾರರು ಕರ್ತವ್ಯ ನಿರ್ವಹಿಸುತ್ತಿರುವ ಸ್ಥಳಗಳಲ್ಲಿಯೇ ವಸತಿ ನಿಲಯಗಳನ್ನು ಸ್ಥಾಪಿಸುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; | ರಾಜ್ಯದಲ್ಲಿ ಕಂದಾಯ ಗ್ರಾಮಲೆಕ್ಕಾಧಿಕಾರಿಗಳು ಕರ್ತವ್ಯ ನಿರ್ವಹಿಸುತ್ತಿರುವ ಸ್ಥಳಗಳಲ್ಲಿಯೇ ವಸತಿ ನಿಲಯ ಕಂ ಕಛೇರಿಗಳನ್ನು ನಿರ್ಮಿಸುವ ಬಗ್ಗೆ ಪ್ರಸ್ತಾವನೆ ಸರ್ಕಾರದ ಪರಿಶೀಲನೆಯಲ್ಲಿದೆ. ಸದರಿ ಪ್ರಸ್ತಾವನೆಗೆ ಸಂಬಂಧಿಸಿದಂತೆ ಪೂರಕ ಮಾಹಿತಿ ಒದಗಿಸುವಂತೆ ಎಲ್ಲಾ ಪ್ರಾದೇಶಿಕ ಆಯುಕ್ತರಿಗೆ ಸೂಚಿಸಲಾಗಿದೆ.<br>ಶಿರಸ್ತೇದಾರರಿಗೆ ಅವರುಗಳ ಕರ್ತವ್ಯ ನಿರ್ವಹಿಸುತ್ತಿರುವ ಸ್ಥಳಗಳಲ್ಲಿಯೇ ವಸತಿ ನಿಲಯಗಳನ್ನು ಸ್ಥಾಪಿಸುವ ಪ್ರಸ್ತಾವನೆ ಸರ್ಕಾರದ ಮುಂದಿರುವುದಿಲ್ಲ. |
| (ಆ) | ಹಾಗಿದ್ದಲ್ಲಿ, ಸದರಿ ನೌಕರರು ಸಮಯಕ್ಕೆ ಸರಿಯಾಗಿ ಕಛೇರಿಯಲ್ಲಿ ಹಾಜರಾಗಿ ಸ್ಥಳೀಯ ಸಮಸ್ಯೆಗಳನ್ನು ಪರಿಹರಿಸಲು ಅನುಕೂಲವಾಗುವುದಿಲ್ಲವೇ; | ಹೌದು. |
| (ಇ) | ಗ್ರಾಮೀಣ ಪ್ರದೇಶಗಳಲ್ಲಿ ಕಂದಾಯ ಇಲಾಖೆ ನೌಕರರಿಗೆ ವಸತಿ ನಿಲಯಗಳನ್ನು ನಿರ್ಮಿಸಲು ಸರ್ಕಾರಕ್ಕಿರುವ ತೊಂದರೆಗಳೇನು ಹಾಗೂ ಈ ಬಗ್ಗೆ ಸರ್ಕಾರ ಕೈಗೊಂಡ ಕ್ರಮಗಳೇನು? (ವಿವರ ನೀಡುವುದು) | ಮೇಲಿನ (ಅ)ರಲ್ಲಿ ಉತ್ತರಿಸಿರುವುದರಿಂದ ಈ ಪ್ರಶ್ನೆ ಉದ್ಭವಿಸುವುದಿಲ್ಲ. |

ಸಂಖ್ಯೆ: ಕಂಇ 24 ಬಿಎಸ್‌ಸಿ 2021

(ಆರ್. ಅಶೋಕ)

ಕಂದಾಯ ಸಚಿವರು

# ಕರ್ನಾಟಕ ವಿಧಾನ ಸಭೆ

| | | |
|---|---|---|
| ಮಾನ್ಯ ಸದಸ್ಯರ ಹೆಸರು | : | ಶ್ರೀ ಕುಮಾರ ಬಂಗಾರಪ್ಪ ಎಸ್. (ಸೊರಬ) |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | **24** |
| ಉತ್ತರಿಸಬೇಕಾದ ದಿನಾಂಕ | : | 01.02.2021 |
| ಉತ್ತರಿಸಬೇಕಾದ ಸಚಿವರು | : | ವಸತಿ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ನಂಜುಂಡಪ್ಪ ವರದಿಯ ಪ್ರಕಾರ ಹಿಂದುಳಿದ ತಾಲ್ಲೂಕಾಗಿರುವ ಸೊರಬ ತಾಲ್ಲೂಕಿನ ಗ್ರಾಮೀಣ ಮತ್ತು ಪಟ್ಟಣ ವ್ಯಾಪ್ತಿಯಲ್ಲಿ ಸಾಮಾನ್ಯ ವರ್ಗದ ಜನರಿಂದ ಮನೆಗಳಿಗಾಗಿ ತೀವ್ರವಾದ ಬೇಡಿಕೆಯಿರುವುದರಿಂದ ಹಾಲಿ ಆರ್ಥಿಕ ವರ್ಷದಲ್ಲಿ ಸದರಿಯವರಿಗೆ ಮನೆಗಳನ್ನು ಮಂಜೂರಾತಿ ಮಾಡುವ ಯೋಜನೆಯು ಸರ್ಕಾರದ ಮುಂದಿದೆಯೇ ; | ಸರ್ಕಾರದ ಆದೇಶ ಸಂ:ವಇ 59 ಹೆಚ್‌ಎಹೆಚ್ 2020, ದಿನಾಂಕ:04.07.2020 ರನ್ವಯ ಕರ್ನಾಟಕ ರಾಜ್ಯಾದ್ಯಂತ ನಗರ ಹಾಗೂ ಗ್ರಾಮೀಣ ಪ್ರದೇಶಗಳಲ್ಲಿ ಸಾಮಾಜಿಕ ಹಾಗೂ ಆರ್ಥಿಕವಾಗಿ ಹಿಂದುಳಿದ ದುರ್ಬಲ ವರ್ಗದ ವಸತಿ ರಹಿತರಿಗಾಗಿ ಅನುಷ್ಠಾನಗೊಳಿಸಲಾಗುತ್ತಿರುವ ರಾಜ್ಯ ಸರ್ಕಾರದ ವಿವಿಧ ವಸತಿ ಯೋಜನೆಗಳಡಿ ಪ್ರಸ್ತುತ ಪ್ರಗತಿಯಲ್ಲಿರುವ ಮನೆಗಳನ್ನು ಪೂರ್ಣಗೊಳಿಸುವವರೆಗೆ ಹೊಸ ಗುರಿಗಳನ್ನು ಪರಿಗಣಿಸಲಾಗುವುದಿಲ್ಲವೆಂದು ಆದೇಶಿಸಲಾಗಿರುತ್ತದೆ. ಆದ್ದರಿಂದ ಹೊಸ ಮನೆಗಳ ಗುರಿಗಳನ್ನು ಹಾಲಿ ಆರ್ಥಿಕ ವರ್ಷದಲ್ಲಿ ಮಂಜೂರು ಮಾಡುವ ಪ್ರಸ್ತಾವನೆ ಸರ್ಕಾರದ ಮುಂದಿರುವುದಿಲ್ಲ. |
| (ಆ) | ಹಾಗಿದ್ದಲ್ಲಿ ಆಶ್ರಯ ಯೋಜನೆಯಡಿಯಲ್ಲಿ ಹಾಲಿ ಆರ್ಥಿಕ ವರ್ಷದಲ್ಲಿ ವಸತಿ ನಿರ್ಮಾಣ ಪ್ರಾರಂಭಿಸಲು ಸರ್ಕಾರ ತೀರ್ಮಾನಿಸಿದೆಯೇ ? | |

ಸಂಖ್ಯೆ :ವಇ 18 ಹೆಚ್‌ಎಎಂ 2021

(ವಿ. ಸೋಮಣ್ಣ)
ವಸತಿ ಸಚಿವರು

ಕರ್ನಾಟಕ ವಿಧಾನಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 26

2. ಸದಸ್ಯರ ಹೆಸರು : ಶ್ರೀ ಸೋಮಲಿಂಗಪ್ಪ ಎಂ.ಎಸ್. (ಸಿರಗುಪ್ಪ)

3. ಉತ್ತರಿಸುವ ದಿನಾಂಕ : 01.02.2021

4. ಉತ್ತರಿಸುವ ಸಚಿವರು : ಕಂದಾಯ ಸಚಿವರು

| | ಪ್ರಶ್ನೆ | ಉತ್ತರ |
|---|---|---|
| (ಅ) | ನಮೂನೆ-7, ನಮೂನೆ-7ಎ [ಭೂ ಸುಧಾರಣೆ ಕಾಯ್ದೆ] ಮತ್ತು ನಮೂನೆ-1 ರ [ಇನಾಂ ರದ್ದತಿ ಕಾಯ್ದೆ] ಅಡಿಯಲ್ಲಿ ಗೇಣಿದಾರರಿಗೆ ಮಂಜೂರು ಮಾಡಿದ ಜಮೀನುಗಳ ನಿಷೇಧದ ಅವಧಿ 15 ವರ್ಷ ಪೂರೈಸಿದ ನಂತರ ಪಹಣಿಯನ್ನು ಕಂದಾಯ ದಾಖಲೆಯಲ್ಲಿ ದಾಖಲಾತಿಗಳನ್ನು ರದ್ದುಪಡಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು; | ನಮೂನೆ-7, ನಮೂನೆ-7ಎ [ಭೂ ಸುಧಾರಣೆ ಕಾಯ್ದೆ] ಮತ್ತು ನಮೂನೆ-1ರ [ಇನಾಂ ರದ್ದತಿ ಕಾಯ್ದೆ] ಅಡಿಯಲ್ಲಿ ಗೇಣಿದಾರರಿಗೆ ಮಂಜೂರು ಮಾಡಿದ ಜಮೀನುಗಳ ನಿಷೇಧದ ಅವಧಿ ಪೂರೈಸಿದ ನಂತರ ಪಹಣಿಯನ್ನು ಕಂದಾಯ ದಾಖಲೆಯಲ್ಲಿ ದಾಖಲಾತಿಗಳನ್ನು ರದ್ದುಪಡಿಸಲು ಕೋರಿ ಅರ್ಜಿದಾರರು ಮನವಿ ಸಲ್ಲಿಸಿದಲ್ಲಿ ತಹಶೀಲ್ದಾರರು ನಿಯಮಾನುಸಾರ ಪರಿಶೀಲಿಸಿ ಕ್ರಮಕೈಗೊಳ್ಳಲಾಗುತ್ತಿರುತ್ತಾರೆ. |
| (ಆ) | ಹಾಗಿದ್ದಲ್ಲಿ, ಗೇಣಿದಾರರು ಅರ್ಜಿ ಸಲ್ಲಿಸುವ ಅಗತ್ಯವಿದೆಯೇ; | ಹೌದು |
| (ಇ) | ಅಗತ್ಯವಿಲ್ಲದಿದ್ದಲ್ಲಿ, ಕಂದಾಯ ಇಲಾಖೆಯು ಸ್ವಯಂ ಪ್ರೇರಣೆಯಿಂದ ರದ್ದುಪಡಿಸಲು ಸರ್ಕಾರ ನೀಡಿರುವ ನಿರ್ದೇಶನಗಳೇನು; [ವಿವರ ನೀಡುವುದು] | ಅನ್ವಯಿಸುವುದಿಲ್ಲ. |

ಸಂಖ್ಯೆ: ಆರ್‌ಡಿ 01 ಎಲ್‌ಆರ್‌ಎಸ್ 2021

(ಆರ್.ಅಶೋಕ)
ಮಾನ್ಯ ಕಂದಾಯ ಸಚಿವರು.

# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: : 27

ಸದಸ್ಯರ ಹೆಸರು : ಶ್ರೀ ಸೋಮಲಿಂಗಪ್ಪ.ಎಂ.ಎಸ್ (ಸಿರಗುಪ್ಪ)

ಉತ್ತರಿಸುವ ದಿನಾಂಕ: : 01/02/2021

ಉತ್ತರಿಸುವ ಸಚಿವರು : ಕೃಷಿ ಸಚಿವರು

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಸಿರಗುಪ್ಪ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ರೈತ ಸಂಪರ್ಕ ಕೇಂದ್ರಗಳಲ್ಲಿ ಸಹಕಾರ ಕೃಷಿ ಅಧಿಕಾರಿಗಳ (ವಿಸ್ತರಣಾಧಿಕಾರಿ) ಹುದ್ದೆಗಳು ಖಾಲಿ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ? | ಹೌದು |
| ಆ) | ಬಂದಿದ್ದಲ್ಲಿ, ಮಂಜೂರಾದ ಸಹಾಯಕ ಕೃಷಿ ಅಧಿಕಾರಿ (ವಿಸ್ತರಣಾಧಿಕಾರಿ) ಹುದ್ದೆಗಳು ಎಷ್ಟು? ; | ಸಿರಗುಪ್ಪ ತಾಲ್ಲೂಕಿನಲ್ಲಿ ಒಟ್ಟು 10 ಸಹಾಯಕ ಕೃಷಿ ಅಧಿಕಾರಿ ಹುದ್ದೆಗಳು ಮಂಜೂರಾಗಿದ್ದು, 06 ಹುದ್ದೆಗಳು ಖಾಲಿಯಿರುತ್ತವೆ. |
| ಇ) | ಮಂಜೂರಾದ ಈ ಹುದ್ದೆಗಳ ಪೈಕಿ ಖಾಲಿ ಇರುವ ಹುದ್ದೆಗಳೆಷ್ಟು; | |
| ಈ) | ಖಾಲಿ ಇರುವ ಸಹಾಯಕ ಕೃಷಿ ಅಧಿಕಾರಿ (ವಿಸ್ತರಣಾಧಿಕಾರಿ) ಹುದ್ದೆಗಳನ್ನು ಭರ್ತಿ ಮಾಡಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು? (ಸಂಪೂರ್ಣ ವಿವರ ನೀಡುವುದು) | 2018-19 ಸಾಲಿನಲ್ಲಿ ರಾಜ್ಯದಲ್ಲಿ ಸಹಾಯಕ ಕೃಷಿ ಅಧಿಕಾರಿಗಳು 157 ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ಭರ್ತಿ ಮಾಡಲಾಗಿದೆ.<br>ಕೃಷಿ ಚಟುವಟಿಕೆಗಳನ್ನು ಸಮರ್ಪಕವಾಗಿ ಸಕಾಲದಲ್ಲಿ ಕಾರ್ಯನಿರ್ವಹಿಸಲು ಯಾವುದೇ ತೊಂದರೆ ಆಗದಂತೆ ನೋಡಿಕೊಳ್ಳುವ ಸಲುವಾಗಿ ಹೊರಗುತ್ತಿಗೆ ಆಧಾರದ ಮೇಲೆ ನಿಯಮಾನುಸಾರ ವಿವಿಧ ವೃಂದದ ಸಿಬ್ಬಂದಿಯನ್ನು ಪಡೆದು ಕಾರ್ಯನಿರ್ವಹಿಸಲಾಗುತ್ತಿದೆ.<br>ಮುಂಬಡ್ತಿ ಕೋಟಾದಡಿ ಖಾಲಿ ಇರುವ ಹುದ್ದೆಗಳನ್ನು ನಿಯಮಾನುಸಾರ ಬಡ್ತಿ ಮೂಲಕ ಭರ್ತಿ ಮಾಡುವ ಪ್ರಕ್ರಿಯ ಜಾರಿಯಲ್ಲಿದೆ. |

**ಸಂಖ್ಯೆ: AGRI-AGS-14/2021**

(ಬಿ.ಸಿ. ಪಾಟೀಲ್)
ಕೃಷಿ ಸಚಿವರು

# ಕರ್ನಾಟಕ ವಿಧಾನಸಭೆ
## 15ನೇ ವಿಧಾನಸಭೆ
## 9ನೇ ಅಧಿವೇಶನ

ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ: 32

ಸದಸ್ಯರ ಹೆಸರು : **ಶ್ರೀ ಕೌಜಲಗಿ ಮಹಾಂತೇಶ್ ಶಿವಾನಂದ (ಬೈಲಹೊಂಗಲ)**

ಉತ್ತರಿಸುವ ದಿನಾಂಕ : 01-02-2021

ಉತ್ತರಿಸುವ ಸಚಿವರು : ಮಾನ್ಯ ಉಪ ಮುಖ್ಯಮಂತ್ರಿಗಳು ಹಾಗೂ ಲೋಕೋಪಯೋಗಿ ಸಚಿವರು

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಬೈಲಹೊಂಗಲ ಮತಕ್ಷೇತ್ರದ ವ್ಯಾಪ್ತಿಯಲ್ಲಿ ಬರುವ ಸವದತ್ತಿ ತಾಲ್ಲೂಕಿನ ಹೊಸೂರು ಗ್ರಾಮದ ಹತ್ತಿರವಿರುವ ಹಳ್ಳದ ಸೇತುವೆಯು ಸಂಪೂರ್ಣವಾಗಿ ಹಾಳಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ? | ಸರ್ಕಾರದ ಗಮನಕ್ಕೆ ಬಂದಿದೆ. |
| ಆ) | ಹಾಗಿದ್ದಲ್ಲಿ, ಸದರಿ ಸೇತುವೆಯನ್ನು ದುರಸ್ಥಿಗೊಳಿಸಲು ಅನುದಾನ ಬಿಡುಗಡೆಗೆ ಪ್ರಸ್ತಾವನೆಯನ್ನು ಸಲ್ಲಿಸಲಾಗಿದೆಯೇ; ಹಾಗಿದ್ದಲ್ಲಿ, ಪ್ರಸ್ತಾವನೆಯು ಯಾವ ಹಂತದಲ್ಲಿದೆ? | ಬೆಳಗಾವಿ ಜಿಲ್ಲೆಯ ಬೈಲಹೊಂಗಲ ಮತ ಕ್ಷೇತ್ರದ ಗೋಕಾಕ ಸವದತ್ತಿ ರಾಜ್ಯ ಹೆದ್ದಾರಿ-103 ರ ರಸ್ತೆ ಕಿಮೀ 75.80 ರಲ್ಲಿ ಹೊಸೂರ ಹಳ್ಳಕ್ಕೆ ಸೇತುವೆ ನಿರ್ಮಾಣ ಕಾಮಗಾರಿಯನ್ನು ರೂ. 10.00 ಕೋಟಿ ಅಂದಾಜು ಮೊತ್ತದಲ್ಲಿ ಕೈಗೆತ್ತಿಕೊಳ್ಳುವ ಪ್ರಸ್ತಾವನೆಯು ಸರ್ಕಾರದ ಹಂತದಲ್ಲಿದ್ದುಅನುದಾನ ಲಭ್ಯತೆ ಆಧರಿಸಿ ಕ್ರಮವಹಿಸಲಾಗುವುದು. |

ಸಂ:ಲೋಇ/92/ಐಎಫ್ಎ/2021 (ಇ-ಕಛೇರಿ)

(ಗೋವಿಂದ ಎಂ. ಕಾರಜೋಳ)
ಉಪಮುಖ್ಯಮಂತ್ರಿಗಳು ಹಾಗೂ
ಲೋಕೋಪಯೋಗಿ ಸಚಿವರು

<u>ಕರ್ನಾಟಕ ವಿಧಾನಸಭೆ</u>
<u>15ನೇ ವಿಧಾನಸಭೆ</u>
<u>9ನೇ ಅಧಿವೇಶನ</u>

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 32
ಮಾನ್ಯ ಸದಸ್ಯರ ಹೆಸರು : ಶ್ರೀ. ಕೌಜಲಗಿ ಮಹಾಂತೇಶ್ ಶಿವಾನಂದ್ (ಬೈಲಹೊಂಗಲ)
ಉತ್ತರಿಸುವ ದಿನಾಂಕ : 01–02–2021
ಉತ್ತರಿಸುವ ಸಚಿವರು : ಮಾನ್ಯ ಉಪ ಮುಖ್ಯಮಂತ್ರಿಗಳು, (ಲೋಕೋಪಯೋಗಿ ಸಚಿವರು)

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಬೈಲಹೊಂಗಲ ಮತಕ್ಷೇತ್ರದ ವ್ಯಾಪ್ತಿಯಲ್ಲಿ ಬರುವ ಸವದತ್ತಿ ತಾಲ್ಲೂಕಿನ ಹೊಸೂರು ಗ್ರಾಮದ ಹತ್ತಿರವಿರುವ ಹಳ್ಳದ ಸೇತುವೆಯು ಸಂಪೂರ್ಣವಾಗಿ ಹಾಳಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೆ; | ಬಂದಿದೆ. |
| ಆ) | ಹಾಗಿದ್ದಲ್ಲಿ ಸದರಿ ಸೇತುವೆಯನ್ನು ದುರಸ್ಥಿಗೊಳಿಸಲು ಅನುದಾನ ಬಿಡುಗಡೆಗೆ ಪ್ರಸ್ತಾವನೆಯನ್ನು ಸಲ್ಲಿಸಲಾಗಿದೆಯೇ; ಹಾಗಿದ್ದಲ್ಲಿ, ಪ್ರಸ್ತಾವನೆಯು ಯಾವ ಹಂತದಲ್ಲಿದೆ? | ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತ ವತಿಯಿಂದ ಒಟ್ಟು 504 ಸೇತುವೆಗಳ ಪಟ್ಟಿಯನ್ನು ಅನುಮೋದನೆಗಾಗಿ ಆರ್ಥಿಕ ಇಲಾಖೆಗೆ ಸಲ್ಲಿಸಲಾಗಿದ್ದು, ಸದರಿ ಪಟ್ಟಿಯಲ್ಲಿ ಬೈಲಹೊಂಗಲ ಮತಕ್ಷೇತ್ರದ ವ್ಯಾಪ್ತಿಯಲ್ಲಿ ಬರುವ ಸವದತ್ತಿ ತಾಲ್ಲೂಕಿನ ಹೊಸೂರು ಗ್ರಾಮದ ಹತ್ತಿರವಿರುವ ಹಳ್ಳಕ್ಕೆ ಸೇತುವೆ ನಿರ್ಮಿಸುವ ಪ್ರಸ್ತಾವನೆಯು ಸೇರಿರುತ್ತದೆ. ಆರ್ಥಿಕ ಇಲಾಖೆಯು ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದ್ದು, ಹಿಂಬರಹ ಸಂಖ್ಯೆ: FD 208 FC-2/2020, ದಿನಾಂಕ: 11-09-2020 ರಲ್ಲಿ ಈ ಕೆಳಗಿನಂತೆ ತಿಳಿಸಿರುತ್ತದೆ.<br><br>"The outstanding commitments of KRDCL are already being very high. Hence, Administrative Department is advised not to take up any new works till the previous works are completed and closed financially"<br><br>ಅದರಂತೆ, ಸದರಿ ಕಾಮಗಾರಿಯನ್ನು ಕೈಬಿಡಲಾಗಿದೆ. |

ಸಂಖ್ಯೆ. ಲೋಇ E-39 ಇಎಪಿ 2021

(ಗೋವಿಂದ ಎಂ. ಕಾರಜೋಳ)
ಮಾನ್ಯ ಉಪ ಮುಖ್ಯಮಂತ್ರಿಗಳು,
ಲೋಕೋಪಯೋಗಿ ಇಲಾಖೆ

## ಕರ್ನಾಟಕ ವಿಧಾನಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : 33 |
| ಸದಸ್ಯರ ಹೆಸರು | : ಶ್ರೀ ಕೌಜಲಗಿ ಮಹಾಂತೇಶ್ ಶಿವಾನಂದ್ (ಬೈಲಹೊಂಗಲ) |
| ಉತ್ತರಿಸುವ ದಿನಾಂಕ | : 01.02.2021 |
| ಉತ್ತರಿಸುವ ಸಚಿವರು | : ಉಪ ಮುಖ್ಯಮಂತ್ರಿಗಳು, ಲೋಕೋಪಯೋಗಿ ಇಲಾಖೆ |

| ಪ್ರಶ್ನೆಗಳು | | ಉತ್ತರಗಳು |
|---|---|---|
| ಅ) | ಬೆಳಗಾವಿ ಜಿಲ್ಲೆ ಬೈಲಹೊಂಗಲ ಮತಕ್ಷೇತ್ರದಲ್ಲಿ ಬರುವ ಸವದತ್ತಿ ತಾಲ್ಲೂಕಿನ ತಡಸಲೂರು ಗ್ರಾಮದಿಂದ ಗೋಕಾಕ್ ಗಡಿವರೆಗಿನ ರಸ್ತೆಯು ಸಂಪೂರ್ಣವಾಗಿ ಹಾಳಾಗಿರುವುದರಿಂದ ವಾಹನ ಸವಾರರಿಗೆ ತೀರಾ ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಸರ್ಕಾರದ ಗಮನಕ್ಕೆ ಬಂದಿದೆ |
| ಆ) | ಹಾಗಿದ್ದಲ್ಲಿ, ಈ ರಸ್ತೆಯನ್ನು ದುರಸ್ತಿಗೊಳಿಸಲು ಸರ್ಕಾರವು ಕೂಡಲೇ ಕ್ರಮ ಕೈಗೊಳ್ಳುವುದೇ? | ಸದರಿ ರಸ್ತೆಯು ರಾಜ್ಯ ಹೆದ್ದಾರಿ–103ರ ಭಾಗವಾಗಿದ್ದು, ರಸ್ತೆ ಸರಪಳಿ 13.29 ರಲ್ಲಿ ಗೋಕಾಕ್ ಗಡಿ ಪ್ರಾರಂಭವಾಗಿ ತಡಸಲೂರು ಗ್ರಾಮವು ಸರಪಳಿ 22.60 ರಲ್ಲಿದ್ದು, ಒಟ್ಟು 9.31 ಕಿ.ಮೀ. ಉದ್ದವಿರುತ್ತದೆ. ಸದರಿ ರಸ್ತೆಯನ್ನು 2019–20ನೇ ಸಾಲಿನಲ್ಲಿ ರಾಜ್ಯ ಹೆದ್ದಾರಿ ಸೇತುವೆ ನಿರ್ವಹಣೆಯಡಿ ರೂ.22.00 ಲಕ್ಷಗಳ ಅಂದಾಜು ಮೊತ್ತದಲ್ಲಿ ಕಿ.ಮೀ. 16.285 ರಿಂದ 16.60 ಕಿ.ಮೀ. ಹಾಗೂ 19.905 ರಿಂದ 20.05 ರವರೆಗೆ ಒಟ್ಟು 0.46 ಕಿ.ಮೀ. ರಸ್ತೆಯನ್ನು ಸುಧಾರಣೆ ಮಾಡಲಾಗಿದೆ.<br><br>ಅಲ್ಲದೇ 2020–21ನೇ ಸಾಲಿನ ರಾಜ್ಯ ಹೆದ್ದಾರಿ ವಾರ್ಷಿಕ ನಿರ್ವಹಣೆ ಅಡಿಯಲ್ಲಿ ಲಭ್ಯವಿದ್ದ ರೂ.23.85 ಲಕ್ಷಗಳ ಅನುದಾನದಲ್ಲಿ ರಸ್ತೆಯ ನಿರ್ವಹಣೆ ಕಾಮಗಾರಿಯನ್ನು ಪ್ರಾರಂಭಿಸಿದ್ದು, ಕೆಲಸ ಪ್ರಗತಿಯಲ್ಲಿರುತ್ತದೆ. |

ಲೋಇ 3 ಸಿಕ್ಯೂಎನ್ 2021(ಇ)

(ಗೋವಿಂದ ಎಂ. ಕಾರಜೋಳ)
ಉಪ ಮುಖ್ಯಮಂತ್ರಿಗಳು,
ಲೋಕೋಪಯೋಗಿ ಇಲಾಖೆ

# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 147
ಸದಸ್ಯರ ಹೆಸರು : ಶ್ರೀ ಬಸವರಾಜ ಬಿ. ಮತ್ತಿಮುಡ (ಗುಲ್ಬರ್ಗಾ ಗ್ರಾಮಾಂತರ)
ಉತ್ತರಿಸುವ ಸಚಿವರು : ಕಂದಾಯ ಸಚಿವರು
ಉತ್ತರಿಸುವ ದಿನಾಂಕ : 01.02.2021

********

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕಲಬುರಗಿ ಜಿಲ್ಲೆಯಲ್ಲಿ ಹೊಸದಾಗಿ ರಚನೆಯಾಗಿರುವ ಕಮಲಪೂರ ಮತ್ತು ಶಹಬಾದ್ ತಾಲ್ಲೂಕುಗಳಲ್ಲಿ ಮಿನಿ ವಿಧಾನಸೌಧ ಕಟ್ಟಡ ನಿರ್ಮಾಣಕ್ಕಾಗಿ ಸರ್ಕಾರ ಕೈಗೊಂಡ ಕ್ರಮಗಳೇನು; | ಕಮಲಾಪೂರ ತಾಲ್ಲೂಕಿನಲ್ಲಿ ಮಿನಿ ವಿಧಾನಸೌಧ ನಿರ್ಮಿಸಲು ಸರ್ಕಾರಿ ಸರ್ವೆ ನಂ-49/1 05.00 ಎ.ಗು ಜಮೀನು ಕಾಯ್ದಿರಿಸಲಾಗಿದ್ದು, ಸದರಿ ಜಮೀನನ್ನು ಮಂಜೂರು ಮಾಡುವ ಪ್ರಕ್ರಿಯೆ ಚಾಲ್ತಿಯಲ್ಲಿರುತ್ತದೆ.<br><br>ಶಹಾಬಾದ್ ತಾಲ್ಲೂಕಿನಲ್ಲಿ ಮಿನಿ ವಿಧಾನಸೌಧ ನಿರ್ಮಿಸಲು ಸರಕಾರಿ ಜಮೀನು ಲಭ್ಯವಿಲ್ಲದ ಪ್ರಯುಕ್ತ ಖಾಸಗಿ ಜಮೀನನ್ನು ಖರೀದಿಸುವ ಪ್ರಕ್ರಿಯೆ ಜಾರಿಯಲ್ಲಿದೆ. |
| ಆ) | ಹಾಗಿದ್ದಲ್ಲಿ ಮೀಸಲಾಗಿಡಲಾದ ಅನುದಾನವೆಷ್ಟು ಕಾಮಗಾರಿಗಳನ್ನು ಯಾವಾಗ ಪ್ರಾರಂಭಿಸಲಾಗುವುದು?<br>(ಸಂಪೂರ್ಣ ವಿವರ ನೀಡುವುದು) | ಹೊಸದಾಗಿ ರಚನೆಯಾದ ತಾಲ್ಲೂಕುಗಳಲ್ಲಿ ರೂ.10.00 ಕೋಟಿಗಳ ವೆಚ್ಚದಲ್ಲಿ ಎಲ್ಲಾ ಮೂಲಭೂತ ಸೌಲಭ್ಯಗಳನ್ನೊಳಗೊಂಡಂತೆ, ಮಿನಿ ವಿಧಾನಸೌಧ ನಿರ್ಮಿಸಲು ಸರ್ಕಾರದ ಸುತ್ತೋಲೆ ಸಂಖ್ಯೆ:ಕಂಇ/100/ಡಬ್ಲ್ಯೂಬಿಆರ್/2017, ದಿನಾಂಕ:31.10.2017 ರಲ್ಲಿ ಅವಕಾಶ ಕಲ್ಪಿಸಲಾಗಿದೆ.<br><br>ಮಿನಿ ವಿಧಾನಸೌಧ ಕಟ್ಟಡ ಕಾಮಗಾರಿಗಳಿಗೆ ಜಮೀನು ಕಾಯ್ದಿರಿಸುವ ಅಂತಿಮ ಪ್ರಕ್ರಿಯೆ ಪೂರ್ಣಗೊಂಡ ನಂತರ ಮಿನಿ ವಿಧಾನಸೌಧ ಕಟ್ಟಡ ನಿರ್ಮಿಸಲು ಜಿಲ್ಲಾಧಿಕಾರಿಗಳಿಂದ ಸವಿವರ ಅಂದಾಜು ಪಟ್ಟಿ ಪಡೆದು ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ ಕ್ರಮವಹಿಸಲಾಗುತ್ತದೆ. |

ಕಂಇ 7 ಡಬ್ಲ್ಯೂಬಿಆರ್ 2021

**(ಆರ್. ಅಶೋಕ)**
ಕಂದಾಯ ಸಚಿವರು

# ಕರ್ನಾಟಕ ವಿಧಾನಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 160 |
| ಸದಸ್ಯರ ಹೆಸರು | ಡಾ|| ಶ್ರೀನಿವಾಸಮೂರ್ತಿ ಕೆ. (ನೆಲಮಂಗಲ) |
| ಉತ್ತರಿಸಬೇಕಾದ ದಿನಾಂಕ | 01.02.2021 |
| ಉತ್ತರಿಸುವ ಸಚಿವರು | ಕಂದಾಯ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ನೆಲಮಂಗಲ ವಿಧಾನಸಭಾ ಕ್ಷೇತ್ರದ ಮಾಗಡಿ ತಾಲ್ಲೂಕು ರಾಮನಗರ ಜಿಲ್ಲೆಯ ಸೋಲೂರು ಹೋಬಳಿಯನ್ನು ಮಾಗಡಿ ತಾಲ್ಲೂಕಿನಿಂದ ಬೇರ್ಪಡಿಸಿ ನೆಲಮಂಗಲ ಕ್ಷೇತ್ರಕ್ಕೆ ವಿಲೀನ ಗೊಳಿಸುವ ಪ್ರಸ್ತಾವನೆ ಯಾವ ಹಂತದಲ್ಲಿದೆ; | ರಾಮನಗರ ಜಿಲ್ಲೆಯ ಸೋಲೂರು ಹೋಬಳಿಯನ್ನು ಮಾಗಡಿ ತಾಲ್ಲೂಕಿನಿಂದ ಬೇರ್ಪಡಿಸಿ ನೆಲಮಂಗಲ ಕ್ಷೇತ್ರಕ್ಕೆ ವಿಲೀನಗೊಳಿಸುವ ಪ್ರಸ್ತಾವನೆ ಪರಿಶೀಲನಾ ಹಂತದಲ್ಲಿದೆ. |
| ಆ) | ಹಾಗಿದ್ದಲ್ಲಿ, ಇದಕ್ಕೆ ಇರುವ ಅಡೆತಡೆಗಳೇನು; | ಪ್ರಸ್ತಾವನೆ ಕುರಿತು ಬೆಂಗಳೂರು ಗ್ರಾಮಾಂತರ ಜಿಲ್ಲೆ ಹಾಗೂ ರಾಮನಗರ ಜಿಲ್ಲೆಗಳ ಜಿಲ್ಲಾಧಿಕಾರಿಗಳಿಂದ ಹೆಚ್ಚುವರಿ ಮಾಹಿತಿ / ಅಭಿಪ್ರಾಯ ಕೋರಿದ್ದು, ವರದಿ ನಿರೀಕ್ಷಣೆಯಲ್ಲಿದೆ. ವರದಿ ಸ್ವೀಕೃತವಾದ ನಂತರ ಪ್ರಸ್ತಾವನೆಯನ್ನು ಪರಿಶೀಲಿಸಿ, ಇದರ ಬಗ್ಗೆ ಸೂಕ್ತ ಕ್ರಮ ಕೈಗೊಳ್ಳಲಾಗುವುದು. |
| ಇ) | ಪ್ರಸ್ತುತ ವಿಲೀನ ಪ್ರಕ್ರಿಯೆ ಯಾವ ಹಂತದಲ್ಲಿದೆ (ಸಂಪೂರ್ಣ ವಿವರ ನೀಡುವುದು); | |
| ಈ) | ರಾಜ್ಯದಲ್ಲಿ ಇದುವರೆಗೂ ಎಷ್ಟು ಹೋಬಳಿ ಕೇಂದ್ರಗಳನ್ನು ಒಂದು ತಾಲ್ಲೂಕಿನಿಂದ ಬೇರೊಂದು ತಾಲ್ಲೂಕಿಗೆ ವಿಲೀನಗೊಳಿಸಲಾಗಿದೆ (ವಿವರ ನೀಡುವುದು) | ಇತ್ತೀಚಿನ ವರ್ಷಗಳಲ್ಲಿ ಹೋಬಳಿ ಕೇಂದ್ರಗಳನ್ನು ಒಂದು ತಾಲ್ಲೂಕಿನಿಂದ ಇನ್ನೊಂದು ತಾಲ್ಲೂಕಿಗೆ ವಿಲೀನಗೊಳಿಸಿರುವುದಿಲ್ಲ. |
| ಉ) | ಹೋಬಳಿ ಕೇಂದ್ರಗಳನ್ನು ವಿಲೀನಗೊಳಿಸಲು ಇರುವ ಸರ್ಕಾರದ ಮಾನದಂಡಗಳೇನು? | ಹೋಬಳಿ ಕೇಂದ್ರಗಳನ್ನು ವಿಲೀನಗೊಳಿಸಲು ನಿರ್ದಿಷ್ಟ ಮಾನದಂಡಗಳು ಇರುವುದಿಲ್ಲ. ಇಂತಹ ಪ್ರಸ್ತಾವನೆಗಳ ಕುರಿತು ಸಂಬಂಧಪಟ್ಟ ಜಿಲ್ಲಾಧಿಕಾರಿಗಳಿಂದ ವರದಿ ಪಡೆದು, ಸಾರ್ವಜನಿಕರ ಆಕ್ಷೇಪಣೆಗಳ ಈಡೇರಿಕೆ ಹಾಗೂ ಆಡಳಿತಾತ್ಮಕ ಅನುಕೂಲಗಳ ಪರಿಗಣನೆ, ಹೋಬಳಿ ಕೇಂದ್ರಗಳಿಂದ ಹಾಲಿ ಹಾಗೂ ಪ್ರಸ್ತಾಪಿತ ತಾಲ್ಲೂಕು ಕೇಂದ್ರ/ಜಿಲ್ಲಾ ಕೇಂದ್ರಗಳಿಗಿರುವ ದೂರ ಸೇರಿದಂತೆ ಸಾರ್ವಜನಿಕ ಹಿತಾಸಕ್ತಿ ಮತ್ತು ಆಡಳಿತಾತ್ಮಕ ಅಂಶಗಳನ್ನು ಪರಾಮರ್ಶಿಸಲಾಗುತ್ತದೆ. |

**ಸಂಖ್ಯೆ: ಕಂಇ/5/ಎಲ್‌ಆರ್‌ಡಿ/2021**

(ಆರ್.ಅಶೋಕ)
ಕಂದಾಯ ಸಚಿವರು

# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : **171**

ಸದಸ್ಯರ ಹೆಸರು : **ಶ್ರೀ ಯತೀಂದ್ರ ಸಿದ್ದರಾಮಯ್ಯ ಡಾ|| (ವರುಣ)**

ಉತ್ತರಿಸುವ ಸಚಿವರು : **ಮಾನ್ಯ ಕಂದಾಯ ಸಚಿವರು**

ಉತ್ತರಿಸುವ ದಿನಾಂಕ : **01.02.2021**

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ. | ರಾಜ್ಯದಲ್ಲಿ ವಿವಿಧ ಉದ್ದೇಶಗಳಿಗಾಗಿ ಭೂ ಸ್ವಾಧೀನ ಮಾಡಲಾದ ಜಮೀನುಗಳಿಗೆ ಭೂಮಿಗಳ ವಿವರಣೆಗಳನ್ನು, ಪಹಣಿಯನ್ನು ದಾಖಲಿಸಲಾಗಿದೆಯೇ; | ಹೌದು. ರಾಜ್ಯದಲ್ಲಿ ವಿವಿಧ ಉದ್ದೇಶಗಳಿಗಾಗಿ ಭೂ ಸ್ವಾಧೀನ ಮಾಡಲಾದ ಭೂಮಿಗಳ ವಿವರಗಳನ್ನು ಸಕ್ಷಮ ಪ್ರಾಧಿಕಾರಗಳಿಂದ ಸ್ವೀಕೃತಗೊಂಡ ನಂತರ ಕಾಲಮಿತಿಯೊಳಗೆ ಪಹಣಿಯಲ್ಲಿ ದಾಖಲಿಸಲು ಕ್ರಮವಹಿಸಲಾಗುತ್ತಿದೆ. |
| ಆ. | ಹಾಗಿದ್ದಲ್ಲಿ, ವಿವರಗಳನ್ನು ಪಹಣಿಗಳಲ್ಲಿ ದಾಖಲಿಸಲು ಬಾಕಿ ಇರುವ ಪ್ರಕರಣಗಳೆಷ್ಟು ಹಾಗೂ ವಿಳಂಬಕ್ಕೆ ಕಾರಣಗಳೇನು; ಇದನ್ನು ಸರಿಪಡಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು ? | ವಿಭಾಗಾವಾರು ಬಾಕಿ ಇರುವ ಪ್ರಕರಣಗಳು ಈ ಕೆಳಕಂಡಂತಿರುತ್ತವೆ:<br><br>(ಕೆಳಗಿನ ಕೋಷ್ಟಕ ನೋಡಿ)<br><br>ಜಂಟಿ ಖಾತೆ ಮತ್ತು ಕ್ರಯದ ಪ್ರಕರಣಗಳಲ್ಲಿ ಸರ್ವೆ ಕಾರ್ಯ ಬಾಕಿ ಇರುವ ಪ್ರಕರಣಗಳು, ನ್ಯಾಯಾಲಯದಿಂದ ತಡೆಯಾಜ್ಞೆ ಇರುವ ಪ್ರಕರಣಗಳೂ ಹಾಗೂ ಪರಿಹಾರದ ಮೊತ್ತವನ್ನು ಪಡೆಯದಿರುವ ಪ್ರಕರಣಗಳಲ್ಲಿ ಪಹಣಿ ದಾಖಲೆ ಮಾಡುವಲ್ಲಿ ವಿಳಂಬವಾಗುತ್ತಿದೆ.<br><br>ಸದರಿ ಪ್ರಕರಣಗಳನ್ನು ಪರಿಶೀಲಿಸಿ ಭೂಸ್ವಾಧೀನ ದಾಖಲೆಗಳ ಮಾಹಿತಿಯನ್ನು ತಹಶೀಲ್ದಾರರುಗಳಿಗೆ ಕಳುಹಿಸುವಂತೆ ಸಂಬಂಧಪಟ್ಟ ವಿಶೇಷ ಭೂಸ್ವಾಧೀನಾಧಿಕಾರಿಗಳಿಗೆ ಸೂಚಿಸಲಾಗಿದೆ. ಅದರಂತೆ ಮಾಹಿತಿಯು ಸ್ವೀಕೃತಗೊಂಡ ನಂತರ ಜರೂರಾಗಿ ಪಹಣಿಯಲ್ಲಿ ಇಂದೀಕರಿಸುವಂತೆ ತಹಶೀಲ್ದಾರರುಗಳಿಗೆ ನಿರ್ದೇಶನ ನೀಡಲಾಗಿರುತ್ತದೆ. |

| ಕ್ರ. ಸಂ. | ವಿಭಾಗದ ಹೆಸರು | ಬಾಕಿ ಪ್ರಕರಣಗಳ ಸಂಖ್ಯೆ |
|---|---|---|
| 1 | ಬೆಂಗಳೂರು ವಿಭಾಗ | 24590 |
| 2 | ಮೈಸೂರು ವಿಭಾಗ | 19415 |
| 3 | ಬೆಳಗಾವಿ ವಿಭಾಗ | 118 |
| 4 | ಕಲಬುರಗಿ ವಿಭಾಗ | 3025 |
| | **ಒಟ್ಟು** | **47148** |

**ಸಂಖ್ಯೆ:ಕಂಇ 35 ಟಿಆರ್ಎಂ 2021**

(ಆರ್. ಅಶೋಕ)
ಕಂದಾಯ ಸಚಿವರು

# ಕರ್ನಾಟಕ ವಿಧಾನಸಭೆ

1) ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 179
2) ಸದಸ್ಯರ ಹೆಸರು ಶ್ರೀ ರೇವಣ್ಣ ಹೆಚ್.ಡಿ. (ಹೊಳೇನರಸೀಪುರ)
3) ಉತ್ತರಿಸಬೇಕಾದ ದಿನಾಂಕ 01-02-2021
4) ಉತ್ತರಿಸಬೇಕಾದ ಸಚಿವರು ಮಾನ್ಯ ಮೀನುಗಾರಿಕೆ ಹಾಗೂ ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವರು

| | ಪ್ರಶ್ನೆ | ಉತ್ತರ |
|---|---|---|
| ಅ) | ಹೊಳೇನರಸೀಪುರ ವಿಧಾನ ಸಭಾ ಕ್ಷೇತ್ರ ವ್ಯಾಪ್ತಿಯ ಹೊಳೇನರಸೀಪುರ ತಾಲ್ಲೂಕು ರಾಮದೇವರಕಟ್ಟೆಯಲ್ಲಿ ಸುಮಾರು 40 ವರ್ಷಗಳ ಅವಧಿಯಿಂದ ಮೀನು ಉತ್ಪಾದನಾ ಕೇಂದ್ರವಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು. |
| ಆ) | ಹಾಗಿದ್ದಲ್ಲಿ, ಸದರಿ ಮೀನು ಉತ್ಪಾದನಾ ಕೇಂದ್ರದಲ್ಲಿರುವ ಕೊಳಗಳು ಶಿಥಿಲಗೊಂಡಿದ್ದು, ಮೀನು ಉತ್ಪಾದನಾ ಕೆಲಸ ಕುಂಠಿತ ಗೊಂಡಿರುವುದರಿಂದ ಮೀನುಗಾರರಿಗೆ ತೊಂದರೆಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಹಾಗಿದ್ದಲ್ಲಿ, ಶ್ರೀರಾಮದೇವರ ಕಟ್ಟೆ ಮೀನು ಉತ್ಪಾದನಾ ಕೇಂದ್ರದ ಅಭಿವೃದ್ಧಿಗೆ ಸರ್ಕಾರ ಕೈಗೊಂಡಿರುವ ಯೋಜನೆಗಳೇನು? (ಸಂಪೂರ್ಣ ವಿವರ ನೀಡುವುದು) | ಸದರಿ ಕೇಂದ್ರವು ಮೀನುಮರಿ ಪಾಲನಾ ಕೇಂದ್ರವಾಗಿದ್ದು, ಇಲ್ಲಿ ಮೀನುಮರಿ ಉತ್ಪಾದನಾ ಚಟುವಟಿಕೆಗಳು ಇರುವುದಿಲ್ಲ. ಸದರಿ ಕೇಂದ್ರದಲ್ಲಿ ಒಟ್ಟು 14 ಮೀನುಮರಿ ಪಾಲನಾ ಕೊಳಗಳಿದ್ದು, ಜಲವಿಸ್ತೀರ್ಣ 0.20 ಹೆಕ್ಟೇರ್ ನಷ್ಟಿರುತ್ತದೆ. ಈ 14 ಮೀನುಮರಿ ಪಾಲನಾ ಕೊಳಗಳ ಪೈಕಿ 04 ಕೊಳಗಳು ಶಿಥಿಲಗೊಂಡಿದ್ದು, 05 ಕೊಳಗಳಲ್ಲಿ ನೀರು ಸೋರುವಿಕೆಯ ಸಮಸ್ಯೆಯಿರುತ್ತದೆ. ಇನ್ನುಳಿದ 05 ಪಾಲನಾ ಕೊಳಗಳು ಸುಸ್ಥಿತಿಯಲ್ಲಿದ್ದು, ಕಳೆದ 03 ವರ್ಷಗಳ ಅವಧಿಯಲ್ಲಿ ಮೀನುಮರಿಗಳನ್ನು ಪಾಲನೆ ಮಾಡಿ ಮೀನು ಕೃಷಿಕರು / ರೈತರಿಗೆ ವಿತರಿಸಲಾದ ವಿವರ ಈ ಕೆಳಗಿನಂತಿದೆ.<br>(see table below)<br>ಸದರಿ ಕೇಂದ್ರದ ಅಭಿವೃದ್ಧಿಗಾಗಿ ಪ್ರಸಕ್ತ ಸಾಲಿನಲ್ಲಿ ಪ್ರತ್ಯೇಕವಾಗಿ ಯಾವುದೇ ಯೋಜನೆಗಳಿರುವುದಿಲ್ಲ. ಅನುದಾನದ ಲಭ್ಯತೆಗನುಗುಣವಾಗಿ ಶ್ರೀರಾಮದೇವರಕಟ್ಟೆ ಮೀನುಮರಿ ಪಾಲನಾ ಕೇಂದ್ರದ ಅಭಿವೃದ್ಧಿಗಾಗಿ ಅಗತ್ಯವಿರುವ ಕಾಮಗಾರಿಗಳನ್ನು ಕೈಗೊಳ್ಳಲಾಗುವುದು |

| ಕ್ರ. ಸಂ | ವರ್ಷ | ವಾರ್ಷಿಕ ಗುರಿ (ಲಕ್ಷಗಳಲ್ಲಿ) | ಸಾಧನೆ (ಲಕ್ಷಗಳಲ್ಲಿ) |
|---|---|---|---|
| 1. | 2017-18 | 15.00 | 8.40 |
| 2. | 2018-19 | 15.00 | 12.04 |
| 3. | 2019-20 | 15.00 | 7.69 |

ಸಂಖ್ಯೆ: ಪಸಂಮೀ ಇ-31 ಮೀಇಯೋ 2021

(ಎಸ್. ಅಂಗಾರ)
ಮೀನುಗಾರಿಕೆ ಹಾಗೂ
ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವರು

## ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆಸಂಖ್ಯೆ : 181
ಉತ್ತರಿಸಬೇಕಾದ ದಿನಾಂಕ : 01.02.2021
ಸದಸ್ಯರ ಹೆಸರು : ಶ್ರೀ ರೇವಣ್ಣ ಹೆಚ್. ಡಿ.
ಉತ್ತರಿಸುವ ಸಚಿವರು : ಕಂದಾಯ ಸಚಿವರು

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಕಂದಾಯ ಇಲಾಖೆಯಲ್ಲಿ ಪಹಣಿ ತಿದ್ದುಪಡಿ ಅಧಿಕಾರವನ್ನು ಈ ಹಿಂದೆ ತಹಶೀಲ್ದಾರ್ ಹಂತದಲ್ಲಿದ್ದು ರೈತರಿಗೆ ತುಂಬಾ ಅನುಕೂಲವಾಗುತ್ತಿದ್ದು, ಪ್ರಸ್ತುತ ಸರ್ಕಾರ ತಹಶೀಲ್ದಾರ್‌ರವರಿಂದ ಹಿಂಪಡೆದಿರುವುದು ನಿಜವೇ; | ಪಹಣಿ ತಿದ್ದುಪಡಿ ಕುರಿತು ತಹಶೀಲ್ದಾರ್ ಹಂತದಲ್ಲಿ ಕ್ರಮವಹಿಸುವ ಅಧಿಕಾರವು ದಿನಾಂಕ:31.12.2020ಕ್ಕೆ ಮುಕ್ತಾಯ ಗೊಂಡಿರುತ್ತದೆ. |
| ಆ | ಹಾಗಿದ್ದಲ್ಲಿ, ರೈತರ ಹಿತದೃಷ್ಟಿಯಿಂದ ಈ ಹಿಂದೆ ಇದ್ದಂತೆ ಪಹಣಿ ತಿದ್ದುಪಡಿ ಅಧಿಕಾರವನ್ನು ತಹಶೀಲ್ದಾರ್‌ರವರಿಗೆ ಪ್ರತ್ಯಾಯೋಜಿಸುವ ಬಗ್ಗೆ ಸರ್ಕಾರ ಕೈಗೊಂಡಿರುವ ಕ್ರಮಗಳೇನು; (ಸಂಪೂರ್ಣ ವಿವರ ನೀಡುವುದು) | ಸರ್ಕಾರದ ಆದೇಶ ಸಂಖ್ಯೆ: ಕಂಇ 44 ಎಂಆರ್‌ಆರ್ 2014 ದಿನಾಂಕ:28.05.2014 ರಂತೆ ಕಂದಾಯ ಅದಾಲತ್ ಮೂಲಕ ಪಹಣಿ ತಿದ್ದುಪಡಿ ಅಧಿಕಾರವನ್ನು ತಹಶೀಲ್ದಾರ್ ರವರಿಗೆ ಪ್ರತ್ಯಾಯೋಜಿಸಲಾಗಿರುತ್ತದೆ. ಕಂದಾಯ ಆದಾಲತ್ ಯೋಜನೆಯನ್ನು ಮುಂದುವರಿಸಿ ಸರ್ಕಾರದ ಆದೇಶ ಸಂಖ್ಯೆ: ಕಂಇ 65 ಎಂಆರ್‌ಆರ್ 2020 ದಿನಾಂಕ: 15.06.2020ರಲ್ಲಿ ದಿನಾಂಕ:31.12.2020 ರವರೆಗೆ ವಿಸ್ತರಿಸಿ ಆದೇಶಿಸಲಾಗಿದೆ. |
| ಇ | ಕಂದಾಯ ಇಲಾಖೆಯಲ್ಲಿ ಪಹಣಿಯಲ್ಲಿ ಎಂ.ಆರ್ ರದ್ದತಿ ಅಧಿಕಾರವನ್ನು ಉಪ ವಿಭಾಗಾಧಿಕಾರಿಗಳಿಗೆ ನೀಡಲಾಗಿದ್ದು, ಇದರಿಂದಾಗಿ ರೈತರಿಗೆ ತುಂಬಾ ಅನಾನುಕೂಲವಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಸರ್ಕಾರದ ಗಮನಕ್ಕೆ ಬಂದಿರುವುದಿಲ್ಲ. |
| ಈ | ಹಾಗಿದ್ದಲ್ಲಿ, ರೈತರ ಹಿತದೃಷ್ಟಿಯಿಂದ ಸದರಿ ಅಧಿಕಾರವನ್ನು ತಹಶೀಲ್ದಾರ್ ರವರಿಗೆ ಪ್ರತ್ಯಾಯೋಜಿಸುವ ಬಗ್ಗೆ ಸರ್ಕಾರ ಕೈಗೊಂಡಿರುವ ಕ್ರಮಗಳೇನು? (ಸಂಪೂರ್ಣ ವಿವರ ನೀಡುವುದು) | ಕಂದಾಯ ಅದಾಲತ್ ಯೋಜನೆಯನ್ನು ಮುಂದುವರಿಸುವ ಕುರಿತು ಪ್ರಸ್ತಾವನೆ ಬಂದಲ್ಲಿ ಸದರಿ ಅಧಿಕಾರವನ್ನು ತಹಶೀಲ್ದಾರ್‌ರವರಿಗೆ ಪ್ರತ್ಯಾಯೋಜಿಸುವ ಬಗ್ಗೆ ಪರಿಶೀಲಿಸಲಾಗುವುದು. |

ಕಂಇ 23 ಎಂ ಆರ್ ಆರ್ 2021

(ಆರ್. ಅಶೋಕ)
ಕಂದಾಯ ಸಚಿವರು

# ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 182 |
| ಸದಸ್ಯರ ಹೆಸರು | : | ಶ್ರೀ ರೇವಣ್ಣ ಹೆಚ್.ಡಿ. (ಹೊಳೆನರಸೀಪುರ) |
| ಉತ್ತರಿಸುವ ದಿನಾಂಕ | : | 01.02.2021. |
| ಉತ್ತರಿಸುವ ಸಚಿವರು | : | ಉಪಮುಖ್ಯಮಂತ್ರಿ<br>ಲೋಕೋಪಯೋಗಿ ಇಲಾಖೆ |

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರಗಳು |
|---|---|---|
| ಅ) | ರಾಷ್ಟ್ರೀಯ ಹೆದ್ದಾರಿ 373ರ ದೊಡ್ಡಹಳ್ಳಿ-ಬಿಳಿಕೆರೆ ಜಂಕ್ಷನ್ ರಸ್ತೆಯ ಸರಪಳಿ 537.500 ರಿಂದ 581.700 ಕಿ.ಮೀ. ರವರೆಗೆ ಅಭಿವೃದ್ಧಿ ಕಾಮಗಾರಿ (ಪ್ಯಾಕೇಜ್-4) ಕಾಮಗಾರಿಗೆ ಸಂಬಂಧಪಟ್ಟಂತೆ 2019-20ನೇ ಸಾಲಿನಲ್ಲಿ ಡಿ.ಪಿ.ಆರ್. ಅನ್ನು, ಅನುಮೋದನೆಗಾಗಿ ಎನ್.ಹೆಚ್.ಎ.ಐ.ನ ಸಿ.ಇ.ಆರ್.ಓ ರವರಿಗೆ ಸಲ್ಲಿಸಿದ್ದು, ಸದರಿ ಕಾಮಗಾರಿಯ ಅನುದಾನವನ್ನು ಬೇರೆಡೆಗೆ ವರ್ಗಾಯಿಸಿ ಬೇರೆ ಕಾಮಗಾರಿ ಡಿ.ಪಿ.ಆರ್.ಆರ್.ಗೆ ಅನುಮೋದನೆ ನೀಡದಿರುವುದು ನಿಜವೇ; (ಸಂಪೂರ್ಣ ವಿವರ ನೀಡುವುದು) | ರಾಷ್ಟ್ರೀಯ ಹೆದ್ದಾರಿ-373 ರ ಬೇಲೂರು-ಬಿಳಿಕೆರೆ ರಸ್ತೆಯ ಸರಪಳಿ 537.500 ರಿಂದ 581.700 ಕಿ.ಮೀ.ವರೆಗಿನ (ಯಡೇಗೌಡನಹಳ್ಳಿಯಿಂದ-ಬಿಳಿಕೆರೆ ಜಂಕ್ಷನ್‌ವರೆಗೆ: ಪ್ಯಾಕೇಜ್-4) ರಸ್ತೆ ಅಭಿವೃದ್ಧಿ ಕಾಮಗಾರಿಯನ್ನು 2019-20ನೇ ಸಾಲಿನ ಪ್ರಸ್ತಾಪಿತ ವಾರ್ಷಿಕ ಕಾಮಗಾರಿಗಳ ಯೋಜನೆಯಲ್ಲಿ ಸೇರ್ಪಡೆಗೊಳಿಸಲಾಗಿತ್ತು. ಅದರಂತೆ, ಸದರಿ ಕಾಮಗಾರಿಗೆ ರೂ.361.62 ಕೋಟಿ ಅಂದಾಜು ಮೊತ್ತದ ವಿವರವಾದ ಯೋಜನಾ ವರದಿಯನ್ನು ಕೇಂದ್ರ ಭೂಸಾರಿಗೆ ಮತ್ತು ಹೆದ್ದಾರಿ ಮಂತ್ರಾಲಯ, ಬೆಂಗಳೂರು ರವರಿಗೆ ದಿನಾಂಕ:21.01.2020 ರಂದು ಸಲ್ಲಿಸಲಾಗಿದ್ದು, ಅದರಲ್ಲಿ ಕೆಲವು ಮಾರ್ಪಾಡುಗಳನ್ನು ಮಾಡಲು ಸೂಚಿಸಿದ್ದ ಮೇರೆಗೆ ಮಾರ್ಪಾಡುಗಳನ್ನು ಮಾಡಿ ಯೋಜನಾ ವರದಿಯನ್ನು ಸಲ್ಲಿಸಲು ಕ್ರಮ ವಹಿಸಲಾಗಿತ್ತು. ಈ ನಡುವೆ 2019-20ನೇ ಆರ್ಥಿಕ ವರ್ಷ ಪೂರ್ಣಗೊಂಡ ಹಿನ್ನಲೆಯಲ್ಲಿ 2020-21ನೇ ಸಾಲಿನ ವಾರ್ಷಿಕ ಕಾಮಗಾರಿಗಳ ಯೋಜನೆಯಲ್ಲಿ ಸದರಿ ಕಾಮಗಾರಿಯನ್ನು ಪ್ರಸ್ತಾಪಿಸಲಾಗಿದೆ. |
| ಆ) | ಸದರಿ ಕಾಮಗಾರಿಯನ್ನು ಕೈಗೆತ್ತಿಕೊಳ್ಳದಿರಲು ಕಾರಣಗಳೇನು; ಸದರಿ ಕಾಮಗಾರಿಯನ್ನು 2020-21 ನೇ ಸಾಲಿನ ಕಾರ್ಯಕ್ರಮ ಪಟ್ಟಿಯಲ್ಲಿ ಸೇರಿಸಿ ಅನುಮೋದನೆ ನೀಡಲು ಸರ್ಕಾರ ಕ್ರಮ ಕೈಗೊಂಡಿದೆಯೇ? (ಸಂಪೂರ್ಣ ಮಾಹಿತಿ ನೀಡುವುದು) | ಪ್ರಸ್ತುತ, ಕೇಂದ್ರ ಭೂಸಾರಿಗೆ ಮತ್ತು ಹೆದ್ದಾರಿ ಮಂತ್ರಾಲಯದ ವತಿಯಿಂದ ಅನುಮೋದನೆಯಾಗಿರುವ 2020-21ನೇ ಸಾಲಿನ ವಾರ್ಷಿಕ ಕಾಮಗಾರಿಗಳ ಯೋಜನೆಯಲ್ಲಿ ಸದರಿ ಕಾಮಗಾರಿಯು ಸೇರ್ಪಡೆಗೊಂಡಿರುವುದಿಲ್ಲ. ಆದ್ದರಿಂದ, ಸದರಿ ಕಾಮಗಾರಿಯನ್ನು ಕೈಗೊಳ್ಳಲು ಸಾಧ್ಯವಾಗಿರುವುದಿಲ್ಲ.<br><br>ಮುಂದುವರೆದು, ಸದರಿ ಕಾಮಗಾರಿಗೆ ಕೇಂದ್ರ ಭೂಸಾರಿಗೆ ಮತ್ತು ಹೆದ್ದಾರಿ ಮಂತ್ರಾಲಯದ ವತಿಯಿಂದ 2021-22 ನೇ ಸಾಲಿನ ವಾರ್ಷಿಕ ಕಾಮಗಾರಿಗಳ ಯೋಜನೆಯಲ್ಲಿ ಅನುಮೋದನೆ ನಿರೀಕ್ಷಿಸಿದೆ. ಅನುಮೋದನೆ ದೊರೆತ ಕೂಡಲೇ ಕಾಮಗಾರಿಯನ್ನು ಅನುಷ್ಠಾನಗೊಳಿಸಲು ಕ್ರಮ ವಹಿಸಲಾಗುವುದು. |

ಲೋಇ 14 ಸಿಎನ್‌ಹೆಚ್ 2021 (ಇ)

(ಗೋವಿಂದ ಎಂ. ಕಾರಜೋಳ)
ಉಪಮುಖ್ಯಮಂತ್ರಿ
ಲೋಕೋಪಯೋಗಿ ಇಲಾಖೆ.

## ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 186
ಸದಸ್ಯರ ಹೆಸರು : ಶ್ರೀ ನಿಸರ್ಗ ನಾರಾಯಣಸ್ವಾಮಿ ಎಲ್.ಎನ್ (ದೇವನಹಳ್ಳಿ)
ಉತ್ತರಿಸುವ ದಿನಾಂಕ : 01-02-2021
ಉತ್ತರಿಸುವ ಸಚಿವರು : ಕಂದಾಯ ಸಚಿವರು

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ದೇವನಹಳ್ಳಿ ವಿಧಾನ ಸಭಾ ಕ್ಷೇತ್ರದಲ್ಲಿ ಜಿ.ಟಿ.ಟಿ.ಸಿ ಕಾಲೇಜು ಸ್ಥಾಪನೆಗೆ ಜಮೀನು ಮಂಜೂರು ಮಾಡುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ (ವಿವರ ನೀಡುವುದು); | ಹೌದು. |
| ಆ) | ಹಾಗಿದ್ದಲ್ಲಿ, ಯಾವಾಗ ಎಷ್ಟು ಎಕರೆಗಳ ಜಮೀನು ಮಂಜೂರು ಮಾಡಲು ಸರ್ಕಾರ ಕ್ರಮ ಕೈಗೊಳ್ಳಲಿದೆ (ಪೂರ್ಣ ವಿವರ ನೀಡುವುದು); | ಬೆಂಗಳೂರು ಗ್ರಾಮಾಂತರ ಜಿಲ್ಲೆ, ದೇವನಹಳ್ಳಿ ತಾಲ್ಲೂಕು, ಚನ್ನರಾಯಪಟ್ಟಣ ಹೋಬಳಿ, ಚನ್ನರಾಯಪಟ್ಟಣ ಗ್ರಾಮದ ಸ.ನಂ.183 ರಲ್ಲಿ 5-00 ಎಕರೆ ಜಮೀನನ್ನು ಸರ್ಕಾರಿ ಉಪಕರಣಾಗಾರ ಮತ್ತು ತರಬೇತಿ ಕೇಂದ್ರ ಸ್ಥಾಪಿಸಲು ಮಂಜೂರು ಮಾಡುವ ಪ್ರಸ್ತಾವನೆಯು ಜಿಲ್ಲಾಧಿಕಾರಿಗಳು, ಬೆಂಗಳೂರು ಗ್ರಾಮಾಂತರ ಜಿಲ್ಲೆ ಇವರಿಂದ ದಿನಾಂಕ: 21.01.2021 ರಂದು ಸ್ವೀಕೃತವಾಗಿದ್ದು, ಪ್ರಸ್ತಾವನೆಯು ಸರ್ಕಾರದ ಹಂತದಲ್ಲಿ ಪರಿಶೀಲನೆಯಲ್ಲಿದೆ. |
| ಇ) | ಕ್ಷೇತ್ರದ ಮಕ್ಕಳ ಉನ್ನತ ವ್ಯಾಸಂಗ ದೃಷ್ಟಿಯಿಂದ ಕೂಡಲೇ ಜಮೀನು ಮಂಜೂರು ಮಾಡಿ ಕಾಲೇಜು ಪ್ರಾರಂಭಿಸಲು ಸರ್ಕಾರ ಕೈಗೊಳ್ಳಲಿರುವ ಕ್ರಮಗಳೇನು (ಮಾಹಿತಿ ನೀಡುವುದು)? | |

**ಸಂಖ್ಯೆ: ಆರ್‌ಡಿ 03 ಎಲ್‌ಜಿಕ್ಯೂ 2021 (ಇ)**

(ಆರ್. ಅಶೋಕ)
ಕಂದಾಯ ಸಚಿವರು

# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 187 |
| ಮಾನ್ಯ ಸದಸ್ಯರ ಹೆಸರು | ಶ್ರೀ ನಿಸರ್ಗ ನಾರಾಯಣ ಸ್ವಾಮಿ ಎಲ್.ಎನ್ (ದೇವನಹಳ್ಳಿ) |
| ಉತ್ತರಿಸಬೇಕಾದ ದಿನಾಂಕ | 01.02.2021 |
| ಉತ್ತರಿಸುವ ಸಚಿವರು | ವಸತಿ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| 1 | ಕಳೆದ 03 ವರ್ಷಗಳಲ್ಲಿ ರಾಜ್ಯದಲ್ಲಿ ಗೃಹ ಮಂಡಳಿ ಮೂಲಕ ನಿವೇಶನಗಳನ್ನು ಅಭಿವೃದ್ಧಿಪಡಿಸಿ ಮಾರಾಟ (ಹಂಚಿಕೆ) ಮಾಡಲು ಸರ್ಕಾರ ಸ್ವಾಧೀನಪಡಿಸಿಕೊಂಡ ಒಟ್ಟು ಜಮೀನು ಎಷ್ಟು (ಜಿಲ್ಲಾವಾರು ವಿವರ ನೀಡುವುದು) | ಕಳೆದ 03 ವರ್ಷಗಳಲ್ಲಿ ಕರ್ನಾಟಕ ಗೃಹ ಮಂಡಳಿಯಿಂದ ಯಾವುದೇ ಜಮೀನುಗಳನ್ನು ಭೂಸ್ವಾಧೀನಪಡಿಸಿಕೊಂಡಿರುವುದಿಲ್ಲ. |
| 2 | ಹಾಗಿದ್ದಲ್ಲಿ, ಈಗಾಗಲೇ ಸ್ವಾಧೀನಪಡಿಸಿಕೊಂಡ ಜಮೀನಿನಲ್ಲಿ ಎಲ್ಲೆಲ್ಲಿ ಪೂರ್ಣ ಅಭಿವೃದ್ಧಿಪಡಿಸಿ ನಿವೇಶನಗಳನ್ನು ಹಂಚಿಕೆ ಮಾಡಲಾಗಿದೆ (ಜಿಲ್ಲಾವಾರು, ಯೋಜನೆವಾರು ಪೂರ್ಣ ವಿವರ ನೀಡುವುದು) | ಉದ್ಭವಿಸುವುದಿಲ್ಲ. |
| 3 | ಭೂಮಿ ಸ್ವಾಧೀನಕ್ಕೆ ಕೇವಲ ಅಧಿಸೂಚನೆ ಹೊರಡಿಸಿ ರೈತರಿಗೆ ಹಣ ಸಂದಾಯ ಮಾಡದೆ ಇರುವ ಪ್ರಕರಣಗಳೆಷ್ಟು (ಯೋಜನೆವಾರು ಪೂರ್ಣ ವಿವರ ನೀಡುವುದು) | ಯಾವುದೇ ಪ್ರಕರಣಗಳು ಇರುವುದಿಲ್ಲ. |

(ಸಂಖ್ಯೆ: ವಇ 10 ಕಗೃಮಂ 2021)

(ವಿ. ಸೋಮಣ್ಣ)
ವಸತಿ ಸಚಿವರು.

**ಕರ್ನಾಟಕ ವಿಧಾನಸಭೆ**
**15ನೇ ವಿಧಾನಸಭೆ**
**9ನೇ ಅಧಿವೇಶನ**

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 190 |
| ಮಾನ್ಯ ಸದಸ್ಯರ ಹೆಸರು | : | ಶ್ರೀ ವೀರಭದ್ರಯ್ಯ ಎಂ.ವಿ. (ಮಧುಗಿರಿ) |
| ಉತ್ತರಿಸುವ ದಿನಾಂಕ | : | 01-02-2021 |
| ಉತ್ತರಿಸುವ ಸಚಿವರು | : | ಮಾನ್ಯ ಉಪ ಮುಖ್ಯಮಂತ್ರಿಗಳು, (ಲೋಕೋಪಯೋಗಿ ಸಚಿವರು) |

| ಕ್ರಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಮಧುಗಿರಿ ತಾಲ್ಲೂಕಿನ ವ್ಯಾಪ್ತಿಯಲ್ಲಿ ಈಗಾಗಲೇ ಬೈಪಾಸ್ ರಸ್ತೆಯಿದ್ದು, ಈ ಬೈಪಾಸ್ ರಸ್ತೆಯನ್ನು ಶಿರಾ ಮಧುಗಿರಿ ರಾಷ್ಟ್ರೀಯ ಹೆದ್ದಾರಿಗೆ ಸಂಪರ್ಕ ಕಲ್ಪಿಸಿ ವಿಸ್ತರಿಸುವ ಯೋಜನೆ ಸರ್ಕಾರದ ಮುಂದಿದೆಯೇ; | ಕೆಶಿಪ್ ವತಿಯಿಂದ ಕೆಶಿಪ್-2, WAP-1 ಯೋಜನೆಯ ಅಡಿಯಲ್ಲಿ ಮಳವಳ್ಳಿಯಿಂದ ಪಾವಗಡ ರಸ್ತೆಯನ್ನು ಅಭಿವೃದ್ಧಿಗೊಳಿಸಲಾಗಿದೆ. ಈ ರಸ್ತೆಯು ತುಮಕೂರು ಜಿಲ್ಲೆ ಕೊರಟಗೆರೆಯಿಂದ ಮಧುಗಿರಿ ಮಾರ್ಗವಾಗಿ ಪಾವಗಡ ಪಟ್ಟಣಕ್ಕೆ ಸೇರುತ್ತದೆ. |
| ಆ) | ಹಾಗಿದ್ದಲ್ಲಿ ಅನುದಾನವನ್ನು ಯಾವಾಗ ಮಂಜೂರು ಮಾಡಲಾಗುವುದು (ಸಂಪೂರ್ಣ ವಿವರ ನೀಡುವುದು); | ಮಧುಗಿರಿ ಪಟ್ಟಣಕ್ಕೆ ಬೈಪಾಸ್ ನಿರ್ಮಿಸಲಾಗಿರುತ್ತದೆ. ಈ ಬೈಪಾಸ್‌ನಿಂದ ಶಿರಾ ಮಧುಗಿರಿ ರಾಷ್ಟ್ರೀಯ ಹೆದ್ದಾರಿಗೆ ಸಂಪರ್ಕ ಕಲ್ಪಿಸಿ ವಿಸ್ತರಿಸುವ ಯಾವುದೇ ಪ್ರಸ್ತಾವನೆ ಇರುವುದಿಲ್ಲ. |
| ಇ) | ಈ ಕಾಮಗಾರಿಯನ್ನು ಯಾವ ಕಾಲಮಿತಿಯಲ್ಲಿ ಕೈಗೆತ್ತಿಕೊಳ್ಳಲಾಗುವುದು (ಸಂಪೂರ್ಣ ವಿವರ ನೀಡುವುದು); | |

ಸಂಖ್ಯೆ: ಲೋಇ E-41 ಇಎಪಿ 2020

(ಗೋವಿಂದ ಎಂ. ಕಾರಜೋಳ)
ಮಾನ್ಯ ಉಪ ಮುಖ್ಯಮಂತ್ರಿಗಳು,
ಲೋಕೋಪಯೋಗಿ ಇಲಾಖೆ

# ಕರ್ನಾಟಕ ವಿಧಾನಸಭೆ

| | | |
|---|---|---|
| 1 | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 196 |
| 2 | ಸದಸ್ಯರ ಹೆಸರು | ಶ್ರೀ ನಂಜೇಗೌಡ ಕೆ.ವೈ. (ಮಾಲೂರು) |
| 3 | ಉತ್ತರಿಸಬೇಕಾದ ದಿನಾಂಕ | 01.02.2021 |
| 4 | ಉತ್ತರಿಸುವ ಸಚಿವರು | ಕಂದಾಯ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಮಾಲೂರು ವಿಧಾನ ಸಭಾ ಕ್ಷೇತ್ರ ವ್ಯಾಪ್ತಿಯ ಟೇಕಲ್ ಮತ್ತು ಮಾಸ್ತಿ ಹೋಬಳಿ ಕೇಂದ್ರಗಳ ನಾಡಕಛೇರಿ ಗಳಿಗೆ ಸ್ವಂತ ಕಟ್ಟಡಗಳಿಲ್ಲದಿರು ವುದು ಸರ್ಕಾರದ ಗಮನಕ್ಕೆ ಬಂದಿದೆಯೇ: | ಹೌದು |
| ಆ) | ಬಂದಿದ್ದಲ್ಲಿ ಸದರಿ 02 ನಾಡಕಛೇರಿ ಗಳಿಗೆ ಸ್ವಂತ ಕಟ್ಟಡ ಕಟ್ಟಲು ಸರ್ಕಾರ ಕೈಗೊಂಡಿರುವ ಕ್ರಮ ಗಳೇನು:(ವಿವರ ನೀಡುವುದು) | ಮಾಲೂರು ವಿಧಾನಸಭಾ ಕ್ಷೇತ್ರ ವ್ಯಾಪ್ತಿಯ ಟೇಕಲ್ ಮತ್ತು ಮಾಸ್ತಿ ಹೋಬಳಿ ಕೇಂದ್ರಗಳ ನಾಡಕಛೇರಿಗಳಿಗೆ ಸ್ವಂತ ಕಟ್ಟಡ ನಿರ್ಮಾಣ ಮಾಡಲು ಆಡಳಿತಾತ್ಮಕ ಅನುಮೋದನೆ ಕೋರಿ ಸರ್ಕಾರದಲ್ಲಿ ಪ್ರಸ್ತಾವನೆ ಸ್ವೀಕೃತವಾಗಿರುತ್ತದೆ. ಪ್ರಸ್ತಾವನೆ ಪರಿಶೀಲಿಸಿ ಕ್ರಮ ವಹಿಸಲಾಗುವುದು. |
| ಇ) | ಹಾಗಿದ್ದಲ್ಲಿ, ಸರ್ಕಾರದಿಂದ ಜಮೀನು ಮಂಜೂರು ಮಾಡ ಲಾಗಿದೆಯೇ (ಗ್ರಾಮವಾರು ಮತ್ತು ಸರ್ವೆ ನಂಬರ್ ವಾರು ಮಾಹಿತಿ ನೀಡುವುದು): | ಸ್ವಂತ ಕಟ್ಟಡ ನಿರ್ಮಾಣಕ್ಕಾಗಿ ಮಾಸ್ತಿ ಹೋಬಳಿ, ಮಾಸ್ತಿ ನಾಡಕಛೇರಿಗೆ ಸರ್ವೆ ನಂಬರ್ 511 ರಲ್ಲಿ 0-20 ಗುಂಟೆ ಹಾಗೂ ಟೇಕಲ್ ಹೋಬಳಿ, ಕಾವಲುಗಿರಿಯನಹಳ್ಳಿ ಗ್ರಾಮದ ಸರ್ವೆ ನಂಬರ್ 10 ರಲ್ಲಿ 0-20 ಗುಂಟೆ ಸರ್ಕಾರದ ಜಮೀನು ಮಂಜೂರಾಗಿದೆ. |
| ಈ) | ಮಾಡಿದ್ದಲ್ಲಿ, ಯಾವ ಕಾಲಮಿತಿ ಯಲ್ಲಿ ಸರ್ಕಾರಿ ಸ್ವಂತ ಕಟ್ಟಡ ನಿರ್ಮಾಣ ಮಾಡಲಾಗುವುದು (ವಿವರ ಒದಗಿಸುವುದು) | ಆಯವ್ಯಯದಲ್ಲಿ ಒದಗಿಸುವ ಅನುದಾನವನ್ನು ಆಧರಿಸಿ ಅನುದಾನ ಬಿಡುಗಡೆಗೆ ಕ್ರಮ ವಹಿಸಲಾಗುವುದು. |

**ಸಂಖ್ಯೆ: ಕಂಇ 06 ಎಜೆಎಸ್ 2021**

(ಆರ್.ಅಶೋಕ)
ಕಂದಾಯ ಸಚಿವರು

# ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 229 |
| ಸದಸ್ಯರ ಹೆಸರು | : | ಶ್ರೀ ಮಹದೇವ.ಕೆ. (ಪಿರಿಯಾಪಟ್ಟಣ) |
| ಉತ್ತರಿಸುವ ದಿನಾಂಕ | : | 01.02.2021. |
| ಉತ್ತರಿಸುವ ಸಚಿವರು | : | ಉಪಮುಖ್ಯಮಂತ್ರಿ<br>ಲೋಕೋಪಯೋಗಿ ಇಲಾಖೆ |

| ಕ್ರ ಸಂ. | ಪ್ರಶ್ನೆಗಳು | ಉತ್ತರಗಳು |
|---|---|---|
| ಅ | ಪ್ರಸ್ತಕ ಸಾಲಿನಲ್ಲಿ ರಾಜ್ಯದಲ್ಲಿ ಸಿ.ಆರ್.ಎಫ್ ನಿಂದ ಎಷ್ಟು ಮೊತ್ತದ ಹೊಸ ಕಾಮಗಾರಿಗಳನ್ನು ಕೈಗೊಳ್ಳುವ ಪ್ರಸ್ತಾವನೆ ಸರ್ಕಾರದ ಮುಂದಿದೆ | ಪ್ರಸ್ತಕ ಸಾಲಿನಲ್ಲಿ ರಾಜ್ಯದಲ್ಲಿ ಕಾಮಗಾರಿಗಳನ್ನು ಕೈಗೊಳ್ಳಲು ಚುನಾಯಿತ ಪ್ರತಿನಿಧಿಗಳಿಂದ ಇಲ್ಲಿಯವರೆಗೆ ಸರಿ ಸುಮಾರು ರೂ.8000.00 ಕೋಟಿ ಮೊತ್ತದ ಪ್ರಸ್ತಾವನೆಗಳನ್ನು ಸ್ವೀಕರಿಸಲಾಗಿದ್ದು, ಸದರಿ ಕಾಮಗಾರಿಗಳ ಪೈಕಿ ಸಿ.ಆರ್.ಎಫ್. ಅಡಿ ಕೈಗೊಳ್ಳಬಹುದಾದ ಕಾಮಗಾರಿಗಳ ಬಗ್ಗೆ ಪರಿಶೀಲಿಸಲಾಗುತ್ತಿದೆ. |
| ಆ | ಹಾಗಿದ್ದಲ್ಲಿ, ರಾಜ್ಯದ ಯಾವ ಯಾವ ಮತ ಕ್ಷೇತ್ರದಲ್ಲಿ ಸಿ.ಆರ್.ಎಫ್ ನಿಂದ ಹೊಸ ಕಾಮಗಾರಿಗಳನ್ನು ಕೈಗೊಳ್ಳುವ ಪ್ರಸ್ತಾವನೆ ಇರುತ್ತದೆ (ವಿವರ ನೀಡುವುದು); | |
| ಇ | ಪಿರಿಯಾಪಟ್ಟಣ ಮತ ಕ್ಷೇತ್ರಕ್ಕೆ ಸಿ.ಆರ್.ಎಫ್ ನಿಂದ ಯಾವ ಯಾವ ಕಾಮಗಾರಿಗಳನ್ನು ಕೈಗೊಳ್ಳುವ ಪ್ರಸ್ತಾವನೆ ಸರ್ಕಾರದ ಮುಂದಿದೆ? | ಪಿರಿಯಾಪಟ್ಟಣ ಮತ ಕ್ಷೇತ್ರಕ್ಕೆ ಸಂಬಂಧಿಸಿದಂತೆ ಸಿ.ಆರ್.ಎಫ್ ಅಡಿಯಲ್ಲಿ 2020-21ನೇ ಸಾಲಿನಲ್ಲಿ ಕೈಗೊಳ್ಳಲು ಪ್ರಸ್ತಾಪಿಸಿರುವ ಕಾಮಗಾರಿಗಳು ಈ ಕೆಳಕಂಡಂತಿವೆ. |

| ಕಾಮಗಾರಿ ಹೆಸರು | ಅಂದಾಜು ಮೊತ್ತ (ರೂ. ಕೋಟಿ) |
|---|---|
| Improvments to Road from Kittur to HT Road via Ravnaduru Kampalapura from KM 12.00 to M 20.20 in Piriyapatna Taluk, Mysore District | 10.00 |
| Improvements to KMHR Road to HBF road via Nagaraghatta Handithavalli Galaganakere Gudikoppallu from KM 1.20 to KM 7.20 in selected stretches in Piriyapatna Taluk, Mysore District | 5.00 |

ಲೋಇ 7 ಸಿಆರ್‌ಎಫ್ 2021 (ಇ)

(ಗೋವಿಂದ ಎಂ. ಕಾರಜೋಳ)
ಉಪಮುಖ್ಯಮಂತ್ರಿ
ಲೋಕೋಪಯೋಗಿ ಇಲಾಖೆ.

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ :: 232
ಸದಸ್ಯರ ಹೆಸರು :: ಶ್ರೀ ಮಸಾಲ ಜಯರಾಮ್ (ತುರುವೇಕೆರೆ)
ಉತ್ತರಿಸುವ ದಿನಾಂಕ :: 01.02.2021
ಉತ್ತರಿಸುವ ಸಚಿವರು :: ಕಂದಾಯ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಗುಬ್ಬಿ ತಾಲ್ಲೂಕಿನ ವ್ಯಾಪ್ತಿಯಲ್ಲಿ ಬರುವ ಕಡಬ, ಕಲ್ಲೂರು ಹಾಗೂ ಸಿ.ಎಸ್.ಪುರ ಗ್ರಾಮದ ಕೆರೆಗಳನ್ನು ಅಕ್ರಮವಾಗಿ ಒತ್ತುವರಿ ಮಾಡಿಕೊಂಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಗುಬ್ಬಿ ತಾಲ್ಲೂಕಿನ ವ್ಯಾಪ್ತಿಯಲ್ಲಿ ಬರುವ ಕಡಬ, ಕಲ್ಲೂರು ಹಾಗೂ ಸಿ.ಎಸ್.ಪುರ ಗ್ರಾಮದ ಕೆರೆಗಳ ಸರ್ವೆ ಕಾರ್ಯವನ್ನು ನಡೆಸಿಲ್ಲದಿರುವುದರಿಂದ ಅಕ್ರಮವಾಗಿ ಒತ್ತುವರಿ ಮಾಡಿಕೊಂಡಿರುವುದು ಸರ್ಕಾರದ ಗಮನಕ್ಕೆ ಬಂದಿರುವುದಿಲ್ಲ. |
| ಆ) | ಬಂದಿದ್ದಲ್ಲಿ, ಒತ್ತುವರಿಯಾದ ಕೆರೆಗಳನ್ನು ತೆರವುಗೊಳಿಸಲು ಸರ್ಕಾರ ಕೈಗೊಂಡ ಕ್ರಮಗಳೇನು; ಪ್ರಸ್ತುತ ಯಾವ ಹಂತದಲ್ಲಿದೆ (ಸಂಪೂರ್ಣ ವಿವರ ನೀಡುವುದು); | ಅನ್ವಯಿಸುವುದಿಲ್ಲ. |
| ಇ) | ಒತ್ತುವರಿ ಮಾಡಿರುವವರ ವಿರುದ್ಧ ಇದುವರೆಗೂ ದಾಖಲಾಗಿರುವ ಪ್ರಕರಣಗಳೇಷ್ಟು; ತೆಗೆದುಕೊಂಡಿರುವ ಕ್ರಮಗಳೇನು? | |

ಸಂಖ್ಯೆ: ಆರ್‌ಡಿ 4 ಎಲ್‌ಜಿಟಿ 2021

(ಆರ್.ಅಶೋಕ್)
ಕಂದಾಯ ಸಚಿವರು

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 235
ಸದಸ್ಯರ ಹೆಸರು : ಶ್ರೀ ರಾಜೇಗೌಡ ಟಿ.ಡಿ (ಶೃಂಗೇರಿ)
ಉತ್ತರಿಸುವ ದಿನಾಂಕ : 01-02-2021
ಉತ್ತರಿಸುವ ಸಚಿವರು : ಕಂದಾಯ ಸಚಿವರು

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರೈತರ ಭೂಮಿಗೆ ಹಕ್ಕುಪತ್ರ ನೀಡಲು ರೆವಿನ್ಯೂ ಕಾಯ್ದೆ ತಿದ್ದುಪಡಿ ಮಾಡದಿದ್ದಲ್ಲಿ, ಶಾಸಕರ ಅಧ್ಯಕ್ಷತೆಯ ಬಗರ್‌ಹುಕುಂ ಸಮಿತಿ ಮುಂದೆ ಫಾರಂ–57 ಅರ್ಜಿ ಮಂಡಿಸಲು ಸಾಧ್ಯವಿಲ್ಲ ಎಂದು ಅವೈಜ್ಞಾನಿಕ ನಿಯಮ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; (ವಿವರ ನೀಡುವುದು) | ಸರ್ಕಾರಿ ಜಮೀನುಗಳಲ್ಲಿನ ಅನಧಿಕೃತ ಸಾಗುವಳಿಯನ್ನು ಸಕ್ರಮಗೊಳಿಸಲು ಕರ್ನಾಟಕ ಭೂ ಕಂದಾಯ ಕಾಯ್ದೆ, 1964 ರ ಕಲಂ 94–ಎ(4) ಗೆ ತಿದ್ದುಪಡಿ ತರಲಾಗಿದ್ದು, ತತ್ಸಂಬಂಧ ಕರ್ನಾಟಕ ಭೂ ಕಂದಾಯ ನಿಯಮಗಳು, 1966 ರ ನಿಯಮ 108 ಸಿಸಿಸಿ ಯನ್ನು ಸೇರ್ಪಡಿಸಿ, ಹೊಸದಾಗಿ ನಮೂನೆ 57 ರ ಅರ್ಜಿಗಳನ್ನು ಸ್ವೀಕರಿಸಲು ದಿನಾಂಕ: 16.03.2019 ರವರೆಗೆ ಅವಕಾಶ ಕಲ್ಪಿಸಲಾಗಿದೆ. |
| ಆ) | ಹಾಗಿದ್ದಲ್ಲಿ, ಕಾಯ್ದೆ ತಿದ್ದುಪಡಿ ಪ್ರಸ್ತಾಪ ಸರ್ಕಾರದ ಮುಂದಿದೆಯೇ; | ಸದರಿ ಅವಧಿಯು ಮುಕ್ತಾಯವಾದ ಹಿನ್ನೆಲೆಯಲ್ಲಿ ಮತ್ತೊಮ್ಮೆ ಅರ್ಜಿ ಸಲ್ಲಿಸಲು ಕಾಲಾವಕಾಶ ವಿಸ್ತರಿಸುವ ಬಗ್ಗೆ ಸರ್ಕಾರದ ಹಂತದಲ್ಲಿ ಪರಿಶೀಲಿಸಲಾಗುತ್ತಿದೆ. |
| ಇ) | ಇದ್ದಲ್ಲಿ, ಯಾವ ಕಾಲಮಿತಿಯೊಳಗೆ ತಿದ್ದುಪಡಿ ಮಾಡಲಾಗುವುದು; (ವಿವರ ನೀಡುವುದು) | ಸರ್ಕಾರಿ ಜಮೀನುಗಳಲ್ಲಿನ ಅನಧಿಕೃತ ಸಾಗುವಳಿಯನ್ನು ಸಕ್ರಮಗೊಳಿಸಲು ಕರ್ನಾಟಕ ಭೂ ಕಂದಾಯ ಕಾಯ್ದೆ, 1964 ರ ಕಲಂ 94–ಎ, 94–ಬಿ ಮತ್ತು 94–ಎ(4) ರಡಿಯಲ್ಲಿ ಸ್ವೀಕೃತವಾಗಿರುವ ಅರ್ಜಿಗಳನ್ನು ಇತ್ಯರ್ಥಪಡಿಸಲು ದಿನಾಂಕ: 26.04.2021 ರವರೆಗೆ ಅವಕಾಶ ಕಲ್ಪಿಸಲಾಗಿದೆ. |
| ಈ) | ಆನ್‌ಲೈನ್‌ನಲ್ಲಿ ಪಡೆದಿರುವ ಅರ್ಜಿಗಳನ್ನು ಇಲಾಖೆಯು ಇದುವರೆವಿಗೂ ಬಗರ್‌ಹುಕುಂ ಸಮಿತಿ ಮುಂದೆ ಮಂಡಿಸಿಲ್ಲದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;, ಸರ್ಕಾರ ಕೈಗೊಂಡಿರುವ ಕ್ರಮಗಳೇನು; (ವಿವರ ನೀಡುವುದು) | |
| ಉ) | ಲೋಕಸಭಾ ಚುನಾವಣೆ ನೀತಿ ಸಂಹಿತೆಯಿಂದ ಫಾರಂ–57ರಡಿ ಅರ್ಜಿ ಸಲ್ಲಿಸುವ ಪ್ರಕ್ರಿಯೆಯನ್ನು ಸ್ಥಗಿತಗೊಳಿಸಲಾಗಿದ್ದು, ಮತ್ತೊಮ್ಮೆ ಅರ್ಜಿ ಸಲ್ಲಿಸುವ ಅವಕಾಶ ನೀಡುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ? (ವಿವರ ನೀಡುವುದು) | ಮತ್ತೊಮ್ಮೆ ಅರ್ಜಿ ಸಲ್ಲಿಸಲು ಕಾಲಾವಕಾಶ ವಿಸ್ತರಿಸುವ ಬಗ್ಗೆ ಸರ್ಕಾರದ ಹಂತದಲ್ಲಿ ಪರಿಶೀಲಿಸಲಾಗುತ್ತಿದೆ. |

**ಸಂಖ್ಯೆ: ಆರ್‌ಡಿ 10 ಎಲ್‌ಜಿಕ್ಯೂ 2021**

(ಆರ್. ಅಶೋಕ)
ಕಂದಾಯ ಸಚಿವರು.

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 236
ಸದಸ್ಯರ ಹೆಸರು : ಶ್ರೀ ರಾಜೇಗೌಡ.ಟಿ.ಡಿ. (ಶೃಂಗೇರಿ)
ಉತ್ತರಿಸುವ ದಿನಾಂಕ : 01.02.2021
ಉತ್ತರಿಸುವ ಸಚಿವರು : ಕಂದಾಯ ಸಚಿವರು

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| ಅ) | ಶೃಂಗೇರಿ ತಾಲ್ಲೂಕು, ಕಿಗ್ಗಾ, ಹೋಬಳಿ, ಹಾದಿ ಗ್ರಾಮದ ಸ.ನಂ.2 ಮತ್ತು ಹಾದಿಕಿರೂರು ಗ್ರಾಮದ ಸ.ನಂ.11 ರ ಕಂದಾಯ ಇಲಾಖೆಯ ಜಾಗದಲ್ಲಿ ರೈತರು ಸಾಗುವಳಿ ಮಾಡಿಕೊಂಡು ಬರುತ್ತಿದ್ದು, ಪಹಣಿಗಳಲ್ಲಿ ಸ್ಟೇಟ್ ಫಾರೆಸ್ಟ ಎಂದು ದಾಖಲಾಗಿರುವುದರಿಂದ ಸಾಗುವಳಿದಾರರು ಜಮೀನಿನ ಮಂಜೂರಾತಿಗಾಗಿ ಅಲೆದಾಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; (ಸಂಪೂರ್ಣ ವಿವರ ನೀಡುವುದು) | ಶೃಂಗೇರಿ ತಾಲ್ಲೂಕು, ಕಿಗ್ಗಾ, ಹೋಬಳಿ, ಹಾದಿ ಗ್ರಾಮದ ಸ.ನಂ.2 ಮತ್ತು ಹಾದಿಕಿರೂರು ಗ್ರಾಮದ ಸ.ನಂ.11ರ ಜಮೀನುಗಳು ಪಹಣಿ ದಾಖಲೆಯಂತೆ ಸ್ಟೇಟ್ ಫಾರೆಸ್ಟ ಆಗಿರುವುದರಿಂದ ಈ ಪ್ರದೇಶದಲ್ಲಿ ಸಾಗುವಳಿದಾರರಿಗೆ ಜಮೀನನ್ನು ಮಂಜೂರು ಮಾಡಲು ಅವಕಾಶವಿರುವುದಿಲ್ಲ. |
| ಆ) | ಬಂದಿದ್ದಲ್ಲಿ, ಸರ್ಕಾರದ ಕೈಗೊಂಡಿರುವ ಕ್ರಮಗಳೇನು; | ಅರಣ್ಯ ಇಲಾಖೆಯ ಜಮೀನಾಗಿರುವುದರಿಂದ ಸಾಗುವಳಿ ಉದ್ದೇಶಕ್ಕೆ ಜಮೀನು ಮಂಜೂರು ಮಾಡಲು ಅವಕಾಶವಿರುವುದಿಲ್ಲ. |
| (ಇ) | ಕಂದಾಯ ಮತ್ತು ಅರಣ್ಯ ಇಲಾಖೆಯ ಜಂಟಿ ಸರ್ವೆ ಮೂಲಕ ಸಮಸ್ಯೆ ಇತ್ಯರ್ಥಗೊಳಿಸಬಹುದಾಗಿದ್ದು, ಜಂಟಿ ಸರ್ವೆ ಕಾರ್ಯ ಕೈಗೊಂಡು ರೈತರ ಸಮಸ್ಯೆಯನ್ನು ಯಾವ ಕಾಲಮಿತಿಯೊಳಗೆ ಬಗೆಹರಿಸಲಾಗವುದು? | ಪಹಣಿ ದಾಖಲೆಯಂತೆ ಒಂದೇ ಸರ್ವೆ ನಂಬರ್ ನಲ್ಲಿ ಕಂದಾಯ ಮತ್ತು ಅರಣ್ಯ ಜಮೀನೆಂದು ದಾಖಲಾಗಿರುವ ಬಗ್ಗೆ ಗಡಿ ಗುರುತಿಸುವ ಸರ್ವೆ ಕಾರ್ಯವು ಪ್ರಗತಿಯಲ್ಲಿರುತ್ತದೆ. |

(ಕಡತ ಸಂಖ್ಯೆ:ಕಂಇ 4 ಎಲ್‌ಜಿಯು 2021)

(ಆರ್.ಅಶೋಕ)
ಕಂದಾಯ ಸಚಿವರು.

## ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: | 238 |
| ಸದಸ್ಯರ ಹೆಸರು | ಶ್ರೀ ರಾಜೇಗೌಡ ಟಿ.ಡಿ. |
| ಉತ್ತರಿಸುವ ದಿನಾಂಕ: | 01-02-2021 |
| ಉತ್ತರಿಸುವವರು | ಹಿಂದೂ ಧಾರ್ಮಿಕ ಮತ್ತು ಧರ್ಮಾದಾಯ ದತ್ತಿ ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು. |

| | ಪ್ರಶ್ನೆ | ಉತ್ತರ |
|---|---|---|
| ಅ | ಶೃಂಗೇರಿ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯ ವಿವಿಧ ದೇವಾಲಯಗಳಲ್ಲಿ ಕನಿಷ್ಠ ಮೂಲಸೌಕರ್ಯಗಳಾದ ಕುಡಿಯುವ ನೀರು, ಶೌಚಾಲಯ, ಪಾರ್ಕಿಂಗ್ ವ್ಯವಸ್ಥೆಗಳಿಲ್ಲದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಶೃಂಗೇರಿ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಒಟ್ಟು 251 ಧಾರ್ಮಿಕ ದತ್ತಿ ಇಲಾಖೆಗೆ ಸೇರಿದ ದೇವಾಲಯಗಳಿರುತ್ತವೆ.<br><br>ಇವುಗಳಲ್ಲಿ ಪ್ರವರ್ಗ 'ಎ' ಶ್ರೇಣಿಯ 01 ದೇವಾಲಯವಿದ್ದು, ಉಳಿದ ದೇವಾಲಯಗಳು 'ಸಿ' ವರ್ಗದ ದೇವಾಲಯವಾಗಿರುತ್ತವೆ. ಪ್ರವರ್ಗ 'ಎ' ಶ್ರೇಣಿಯ ಶ್ರೀ ಕಿಗ್ಗಾ ಋಷ್ಯ ಶೃಂಗೇಶ್ವರ ಸ್ವಾಮಿ ದೇವಾಲಯದಲ್ಲಿ ಮೂಲಸೌಕರ್ಯಗಳನ್ನು ಕಲ್ಪಿಸಲಾಗಿದೆ.<br><br>ಉಳಿದ 'ಸಿ' ವರ್ಗದ ದೇವಾಲಯಗಳಿಗೆ ಭಕ್ತಾದಿಗಳು ಭೇಟಿ ನೀಡುವ ಸಂಖ್ಯೆ ಕಡಿಮೆ ಇರುತ್ತದೆ ಮತ್ತು ಈ ದೇವಾಲಯಗಳಿಗೆ ವಾರ್ಷಿಕ ತಸ್ತೀಕ್ ಹೊರತು ಪಡಿಸಿ ಬೇರೆ ಆದಾಯವಿರುವುದಿಲ್ಲ. |
| ಆ | ಬಂದಿದ್ದಲ್ಲಿ, ಕಳೆದ 2 ವರ್ಷಗಳಿಂದ ಸರ್ಕಾರ ವೆಚ್ಚ ಮಾಡಿರುವ ಹಣವೆಷ್ಟು; ಯಾವ ಯಾವ ದೇವಾಲಯಗಳಿಗೆ ಮೂಲಭೂತ ಸೌಕರ್ಯವನ್ನು ಕಲ್ಪಿಸಲಾಗಿದೆ; (ದೇವಾಲಯಗಳ ವಿವರ ನೀಡುವುದು) | ಕಳೆದ 2 ವರ್ಷಗಳಿಂದ ಸರ್ಕಾರದಿಂದ ಒಟ್ಟು ರೂ 64.00 ಲಕ್ಷಗಳ ಅನುದಾನವನ್ನು ಬಿಡುಗಡೆ ಮಾಡಲಾಗಿರುತ್ತದೆ.<br><br>(ಮೊತ್ತ ರೂ.ಲಕ್ಷಗಳಲ್ಲಿ)<br>ಯೋಜನೆ / 2018-19 / 2019-20<br>ದುರಸ್ತಿ ಜೀರ್ಣೋದ್ಧಾರ/ಅಭಿವೃದ್ಧಿ / 49.00 / 5.00<br>ಸಾಮಾನ್ಯ ಸಂಗ್ರಹಣಾ ನಿಧಿಯಿಂದ ಧನ ಸಹಾಯ / 10.00 / 0.00<br>ಒಟ್ಟು / 59.00 / 5.00<br><br>'ಎ' ಪ್ರವರ್ಗಕ್ಕೆ ಸೇರಿದ ಪ್ರಮುಖ ದೇವಾಲಯವಾದ ಶೃಂಗೇರಿ ತಾಲ್ಲೂಕು, ಶ್ರೀ ಕಿಗ್ಗಾ ಋಷ್ಯ ಶೃಂಗೇಶ್ವರ ಸ್ವಾಮಿ ದೇವಾಲಯದಲ್ಲಿ ಮೂಲಸೌಕರ್ಯಗಳನ್ನು ಕಲ್ಪಿಸಲಾಗಿದೆ. |
| ಇ | ಶೃಂಗೇರಿ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯ ಪ್ರಸಿದ್ಧ ದೇವಾಲಯಗಳಲ್ಲಿ ಭಕ್ತಾದಿಗಳ ಅನುಕೂಲಕ್ಕಾಗಿ ಹೈಟೆಕ್ ಶೌಚಾಲಯ ನಿರ್ಮಾಣ ಮಾಡುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ? | ಶೃಂಗೇರಿ ವಿಧಾನ ಸಭಾ ಕ್ಷೇತ್ರದ ದೇವಾಲಯಗಳಿಗೆ ಹೈಟೆಕ್ ಶೌಚಾಲಯ ನಿರ್ಮಾಣ ಮಾಡುವ ಪ್ರಸ್ತಾವನೆ ಸರ್ಕಾರದ ಮುಂದೆ ಇರುವುದಿಲ್ಲ. |

(ಸಂಖ್ಯೆ:ಕಂಇ 13 ಮುಸಪ್ರ 2021)

(ಕೋಟ ಶ್ರೀನಿವಾಸ ಪೂಜಾರಿ)
ಹಿಂದೂ ಧಾರ್ಮಿಕ ಮತ್ತು ಧರ್ಮಾದಾಯ ದತ್ತಿ
ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು.



# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: | 239 |
| ಸದಸ್ಯರ ಹೆಸರು: | ಶ್ರೀ ಆಚಾರ್ ಹಾಲಪ್ಪ ಬಸಪ್ಪ (ಯಲಬುರ್ಗಾ) |
| ಉತ್ತರಿಸಬೇಕಾದ ಸಚಿವರು | ಮಾನ್ಯ ಕಂದಾಯ ಸಚಿವರು |
| ಉತ್ತರಿಸಬೇಕಾದ ದಿನಾಂಕ: | 01-02-2021 |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಕೊಪ್ಪಳ ಜಿಲ್ಲೆಯ ಯಲಬುರ್ಗಾ ವಿಧಾನ ಸಭಾ ಕ್ಷೇತ್ರದಲ್ಲಿನ ಯಲಬುರ್ಗಾ ಹಾಗೂ ಕುಕನೂರು ತಾಲ್ಲೂಕುಗಳಲ್ಲಿನ ತಹಶೀಲ್ದಾರ್ ಕಚೇರಿಗೆ ಮಂಜೂರಾದ ಹುದ್ದೆಗಳ ಸಂಖ್ಯೆ ಎಷ್ಟು (ವೃಂದವಾರು ಹುದ್ದೆಗಳ ವಿವರ ನೀಡುವುದು) | ಕೊಪ್ಪಳ ಜಿಲ್ಲೆಯ ಯಲಬುರ್ಗಾ ವಿಧಾನ ಸಭಾ ಕ್ಷೇತ್ರದಲ್ಲಿನ ಯಲಬುರ್ಗಾ ಹಾಗೂ ಕುಕನೂರು ತಾಲ್ಲೂಕುಗಳಲ್ಲಿನ ತಹಶೀಲ್ದಾರ್ ಕಚೇರಿಗೆ ಮಂಜೂರಾದ ಹುದ್ದೆಗಳ ಮಾಹಿತಿಯನ್ನು ಅನುಬಂಧದಲ್ಲಿ ಲಗತ್ತಿಸಿದೆ. |
| ಆ | ಸದರಿ ಹುದ್ದೆಗಳಲ್ಲಿ ಭರ್ತಿಯಾದ ಹಾಗೂ ಖಾಲಿ ಇರುವ ಹುದ್ದೆಗಳೆಷ್ಟು; ಸದರಿ ಹುದ್ದೆಗಳು ಯಾವ ಅವಧಿಯಿಂದ ಖಾಲಿ ಇರುತ್ತವೆ. (ವಿವರ ನೀಡುವುದು) | ಯಲಬುರ್ಗಾ ಮತ್ತು ಕುಕನೂರು ತಾಲ್ಲೂಕುಗಳಲ್ಲಿ ಭರ್ತಿಯಾದ ಹಾಗೂ ಖಾಲಿ ಇರುವ ಹುದ್ದೆಗಳ ಮಾಹಿತಿಯನ್ನು ಅನುಬಂಧದಲ್ಲಿ ಲಗತ್ತಿಸಿದೆ. |
| ಇ | ಖಾಲಿ ಇರುವ ಹುದ್ದೆಗಳಿಂದಾಗಿ ಆಡಳಿತ ಯಂತ್ರ ಕುಸಿದಿರುವ ವಿಷಯ ಸರ್ಕಾರದ ಗಮನಕ್ಕೆ ಬಂದಿದೆಯೇ; | ಖಾಲಿ ಇರುವ ಹುದ್ದೆಗಳ ಪ್ರಭಾರವನ್ನು ಬೇರೊಬ್ಬ ಸಿಬ್ಬಂದಿಗಳಿಗೆ ಹೆಚ್ಚುವರಿಯಾಗಿ ವಹಿಸಿ ಸಾರ್ವಜನಿಕ ಹಾಗೂ ಕಚೇರಿ ಕಾರ್ಯಗಳನ್ನು ನಿರ್ವಹಿಸಲಾಗುತ್ತಿದೆ. |
| ಈ | ಬಂದಿದ್ದಲ್ಲಿ, ಹುದ್ದೆಗಳ ಭರ್ತಿಗಾಗಿ ಸರ್ಕಾರಕೈಗೊಂಡ ಕ್ರಮಗಳೇನು? | ಸುತ್ತೋಲೆ ಸಂಖ್ಯೆ/ಆಇ/03/ಬಿಇಎಂ/2020 ದಿನಾಂಕ 06/07/2020ರನ್ವಯ ಕಲ್ಯಾಣ ಕರ್ನಾಟಕ ವೃಂದದ ಹುದ್ದೆಗಳು ಮತ್ತು ಬ್ಯಾಕ್ ಲಾಗ್ ಹುದ್ದೆಗಳು ಸೇರಿದಂತೆ ಎಲ್ಲಾ ನೇರ ನೇಮಕಾತಿ ಹುದ್ದೆಗಳನ್ನು ಭರ್ತಿ ಮಾಡುವುದನ್ನು ಮುಂದಿನ ಆದೇಶದವರೆಗೆ ತಡೆಹಿಡಿಯಲಾಗಿರುತ್ತದೆ. ಪ್ರಯುಕ್ತ ಸದರಿ ತಡೆಯಾಜ್ಞೆಯು ತೆರವುಗೊಳಿಸಿದ ನಂತರ ಮುಂದಿನ ಕ್ರಮ ತೆಗೆದುಕೊಳ್ಳಲಾಗುತ್ತದೆ. |

ಸಂ: ಕಂಇ 05 ಎಎಸ್‌ಡಿ 2021

(ಆರ್. ಅಶೋಕ)

ಕಂದಾಯ ಸಚಿವರು

ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ :: 243
ಸದಸ್ಯರ ಹೆಸರು :: ಶ್ರೀ ಗೂಳಿಹಟ್ಟಿ ಡಿ.ಶೇಖರ್ (ಹೊಸದುರ್ಗ)
ಉತ್ತರಿಸುವ ದಿನಾಂಕ: :: 01.02.2021
ಉತ್ತರಿಸುವ ಸಚಿವರು :: ಕಂದಾಯ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಚಿತ್ರದುರ್ಗ ಜಿಲ್ಲೆ, ಹೊಸದುರ್ಗ ತಾಲ್ಲೂಕು, ಗೊರವಿನಕಲ್ಲು ರಿ.ಸ.ನಂ.86ರಲ್ಲಿ ಸರ್ಕಾರಿ ಜಮೀನಿನಲ್ಲಿ ಸಾಗುವಳಿ ಚೀಟಿ ನೀಡಲಾಗಿರುವ ಜನರೆಷ್ಟು; ಯಾವ ವರ್ಷ ನೀಡಿ ಮಂಜೂರು ಮಾಡಲಾಗಿದೆ. ಅಧಿಕೃತವಾಗಿ ಹಂಚಿಕೆಯಾದ ಜನರೆಷ್ಟು ಹಾಗೂ ಎಷ್ಟು ಜನರು ಜಾಗವನ್ನು ಅತಿಕ್ರಮಿಸಿರುತ್ತಾರೆ; | ಎಲ್.ಎನ್.ಡಿ.22/1980-81, ದಿನಾಂಕ: 30.11.1980ರಂತೆ ಲಭ್ಯವಿರುವ ಪರ್ಯಾಯ ದಾಖಲೆಗಳ ಆಧಾರದ ಮೇರೆಗೆ ಗೊರವಿನಕಲ್ಲು ಗ್ರಾಮದ ರಿ.ಸ.ನಂ.86ರಲ್ಲಿ 42-30 ಎಕರೆ ಜಮೀನು 1980ನೇ ಸಾಲಿನಲ್ಲಿ 23 ಜನರಿಗೆ ಅಧಿಕೃತವಾಗಿ ಮಂಜೂರಾಗಿರುತ್ತದೆ. 7 ಜನರಿಗೆ ಮಂಜೂರಾಗಿರುವುದು ಅನುಮಾನಾಸ್ಪದವಾಗಿರುತ್ತದೆ. ಸದರಿ 7 ಜನರು ಅತಿಕ್ರಮಿಸಿರುತ್ತಾರೆ. ಅಕ್ರಮವಾಗಿ ಜಮೀನು ಮಂಜೂರಾತಿಗೆ ಕಾರಣರಾದ ನೌಕರರ ವಿರುದ್ಧ ಕಾನೂನು ರೀತ್ಯಾ ತನಿಖೆ ನಡೆಸುವ ಸಂಬಂಧ ಪ್ರಕರಣ ಚಾಲನೆಯಲ್ಲಿರುತ್ತದೆ. |
| ಆ) | ಮೂಲ ದಾಖಲೆಗಳು, ಕಡತಗಳು ಇಲಾಖೆಯಲ್ಲಿ ಲಭ್ಯವಿದೆಯೇ ಅಥವಾ ನಕಲಿ ದಾಖಲೆ ಮಾಡುವ ಸಲುವಾಗಿ ನಾಶಪಡಿಸಿ ಬೇರೆ ಹೊಸ ಕಡತ ತಯಾರಿಸಲಾಗಿದೆಯೇ? | ಜಮೀನು ಮಂಜೂರಾದ ಬಗ್ಗೆ ಮೂಲ ಮಂಜೂರಾತಿ ಕಡತ ಲಭ್ಯವಿರುವುದಿಲ್ಲ. |

ಸಂಖ್ಯೆ: ಆರ್‌ಡಿ 8 ಎಲ್‌ಜಿಸಿ 2021

(ಆರ್.ಅಶೋಕ್)
ಕಂದಾಯ ಸಚಿವರು

## ಕರ್ನಾಟಕ ವಿಧಾನಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 244 |
| ಸದಸ್ಯರ ಹೆಸರು | : | ಶ್ರೀ ರಘುಮೂರ್ತಿ ಟಿ. (ಚಳ್ಳಕೆರೆ) |
| ಉತ್ತರಿಸುವ ಸಚಿವರು | : | ಕಂದಾಯ ಸಚಿವರು |
| ಉತ್ತರಿಸುವ ದಿನಾಂಕ | : | 01.02.2021 |

********

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ ತಾಲ್ಲೂಕಿನಲ್ಲಿ ಮಿನಿ ವಿಧಾನ ಸೌಧ ಕಟ್ಟಡ ಕಾಮಗಾರಿ ಪೂರ್ಣಗೊಳಿಸಲು ಹೆಚ್ಚುವರಿ ಅನುದಾನ ಬಿಡುಗಡೆ ಮಾಡಲು ಚಿತ್ರದುರ್ಗ ಜಿಲ್ಲಾಧಿಕಾರಿಗಳಿಂದ ದಿನಾಂಕ:14.12.2018 ರಂದು 333 ಲಕ್ಷಗಳ ಅಂದಾಜು ಪಟ್ಟಿ ಸಲ್ಲಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ ಸದರಿ ಕಟ್ಟಡ ನಿರ್ಮಾಣ ಕಾಮಗಾರಿಯು ಪೂರ್ಣಗೊಳಿಸಿ ಸರ್ಕಾರಿ ಕಛೇರಿಗಳು ಕಾರ್ಯಾರಂಭ ಮಾಡಲು ಅನುಕೂಲವಾಗುವಂತೆ ಹೆಚ್ಚುವರಿ ಅನುದಾನ ಬಿಡುಗಡೆ ಮಾಡಲು ಸರ್ಕಾರವು ಕೈಗೊಳ್ಳುವ ಕ್ರಮಗಳೇನು; | ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ ತಾಲ್ಲೂಕಿನಲ್ಲಿ ಮಿನಿ ವಿಧಾನಸೌಧ ನಿರ್ಮಾಣ ಕಾಮಗಾರಿಯಲ್ಲಿ ಹೆಚ್ಚುವರಿಯಾಗಿ ಉಂಟಾದ ವರ್ಕ್ ಸ್ಲಿಪ್ ಮತ್ತು ಇಐಆರ್ ಎಲ್ ಸೇರಿದಂತೆ ಪರಿಷ್ಕೃತ ರೂ1233.25ಲಕ್ಷಗಳ - ಅಂದಾಜು ಪಟ್ಟಿ ಜಿಲ್ಲಾಧಿಕಾರಿ, ಚಿತ್ರದುರ್ಗ ಜಿಲ್ಲೆ ಇವರಿಂದ ಸ್ವೀಕೃತವಾಗಿದ್ದು, ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ ಪರಿಶೀಲನೆಯಲ್ಲಿರುತ್ತದೆ. |
| ಆ) | ಚಳ್ಳಕೆರೆ ತಾಲ್ಲೂಕಿನ ಸ್ಥಳೀಯ ಶಾಸಕರ ಅಧ್ಯಕ್ಷತೆಯಲ್ಲಿ ರಚಿಸುವ ಬಗರ್ ಹುಕುಂ ಸಮಿತಿ ರಚನೆಯ ಪ್ರಸ್ತಾವನೆಯು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು, |
| ಇ) | ಬಂದಿದ್ದಲ್ಲಿ ಸದರಿ ಸಮಿತಿಯನ್ನು ಯಾವಾಗ ರಚನೆ ಮಾಡಲಾಗುವುದು; | ಚಳ್ಳಕೆರೆ ವಿಧಾನ ಸಭಾ ಕ್ಷೇತ್ರಕ್ಕೆ ಸಂಬಂದಿಸಿದಂತೆ ಬಗರ್ ಹುಕುಂ ಸಾಗುವಳಿ ಸಕ್ರಮೀಕರಣ ಸಮಿತಿ ರಚಿಸುವ ಪ್ರಸ್ತಾವನೆಯು ಪರಿಶೀಲನೆಯಲ್ಲಿದೆ. |
| ಈ) | ಹಾಗಿದ್ದಲ್ಲಿ, ಈ ಬಗ್ಗೆ ಸರ್ಕಾರ ಕೈಗೊಂಡ ಕ್ರಮಗಳೇನು? | |

ಕಂಇ 11 ಡಬ್ಲ್ಯೂಬಿಆರ್ 2021

(ಆರ್. ಅಶೋಕ)
ಕಂದಾಯ ಸಚಿವರು

## ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 246 |
| ಸದಸ್ಯರ ಹೆಸರು | ಶ್ರೀ ರಘುಮೂರ್ತಿ .ಟಿ. |
| ಉತ್ತರಿಸುವ ದಿನಾಂಕ: | 01-02-2021 |
| ಉತ್ತರಿಸುವವರು | ಹಿಂದೂ ಧಾರ್ಮಿಕ ಮತ್ತು ಧರ್ಮಾದಾಯ ದತ್ತಿ ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು. |

| | ಪ್ರಶ್ನೆ | ಉತ್ತರ |
|---|---|---|
| ಅ | ಕಳೆದ 3 ವರ್ಷಗಳಲ್ಲಿ ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ ವಿಧಾನ ಸಭಾ ಕ್ಷೇತ್ರದಲ್ಲಿ ಮುಜರಾಯಿ ವ್ಯಾಪ್ತಿಗೆ ಒಳ ಪಟ್ಟಿರುವ ದೇವಸ್ಥಾನಗಳ ಜೀರ್ಣೋದ್ಧಾರಕ್ಕೆ ನೀಡಿರುವ ಅನುದಾನ ಎಷ್ಟು; (ಸಂಪೂರ್ಣ ವಿವರ ನೀಡುವುದು) | ಕಳೆದ ಮೂರು ವರ್ಷಗಳಲ್ಲಿ ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ ವಿಧಾನ ಸಭಾ ಕ್ಷೇತ್ರದಲ್ಲಿ ಧಾರ್ಮಿಕ ದತ್ತಿ ಇಲಾಖೆಯ ವ್ಯಾಪ್ತಿಗೆ ಒಳಪಟ್ಟಿರುವ ದೇವಸ್ಥಾನಗಳಿಗೆ ಯಾವುದೇ ಅನುದಾನ ಮಂಜೂರಾಗಿರುವುದಿಲ್ಲ. |
| ಆ | ಕಳೆದ 3 ವರ್ಷಗಳಲ್ಲಿ ಮುಜರಾಯಿ ವ್ಯಾಪ್ತಿಗೆ ಒಳಪಡದ ದೇವಸ್ಥಾನಗಳಿಗೆ ನೀಡಿರುವ ಅನುದಾನ ಎಷ್ಟು? (ವಿವರ ನೀಡುವುದು) | ಕಳೆದ 3 ವರ್ಷಗಳಲ್ಲಿ ಚಳ್ಳಕೆರೆ ವಿಧಾನ ಸಭಾ ಕ್ಷೇತ್ರದ ಧಾರ್ಮಿಕ ದತ್ತಿ ಇಲಾಖಾ ವ್ಯಾಪ್ತಿಗೆ ಒಳಪಡದ ದೇವಸ್ಥಾನಗಳಿಗೆ ಒಟ್ಟು **ರೂ.129.78ಲಕ್ಷಗಳ** ಅನುದಾನವನ್ನು ಬಿಡುಗಡೆ ಮಾಡಲಾಗಿರುತ್ತದೆ. ವಿವರ ಈ ಕೆಳಕಂಡಂತಿದೆ. |

(ಮೊತ್ತ ರೂ ಲಕ್ಷಗಳಲ್ಲಿ)

| ಯೋಜನೆ ವಿವರ | 2017-18 | 2018-19 | 2019-20 |
|---|---|---|---|
| ಸಾಮಾನ್ಯ ಯೋಜನೆ | 0.89 | 4.24 | 4.24 |
| ಪರಿಶಿಷ್ಟಜಾತಿ ಉಪ ಯೋಜನೆ | 8.92 | 3.38 | 6.76 |
| ಗಿರಿಜನ ಉಪಯೋಜನೆ | 1.33 | 1.01 | 1.01 |
| ದುರಸ್ತಿ ಜೀರ್ಣೋದ್ಧಾರ/ಅಭಿವೃದ್ಧಿ | 45.00 | 30.00 | 23.00 |
| **ಒಟ್ಟು ಮೊತ್ತ** | **56.14** | **38.63** | **35.01** |

(ಸಂಖ್ಯೆ:ಕಂಇ 14 ಮುಸಪ್ರ 2021)

(ಕೋಟಾ ಶ್ರೀನಿವಾಸ ಪೂಜಾರಿ)
ಹಿಂದೂ ಧಾರ್ಮಿಕ ಮತ್ತು ಧರ್ಮಾದಾಯ ದತ್ತಿ
ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು.

# ಕರ್ನಾಟಕ ವಿಧಾನಸಭೆ

1) ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 256
2) ಸದಸ್ಯರ ಹೆಸರು ಶ್ರೀ ಮುನಿಯಪ್ಪ ವಿ. (ಶಿಡ್ಲಘಟ್ಟ)
3) ಉತ್ತರಿಸಬೇಕಾದ ದಿನಾಂಕ 01-02-2021
4) ಉತ್ತರಿಸಬೇಕಾದ ಸಚಿವರು ಮಾನ್ಯ ಮೀನುಗಾರಿಕೆ ಹಾಗೂ ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವರು

| | ಪ್ರಶ್ನೆ | ಉತ್ತರ |
|---|---|---|
| ಅ) | ಶಿಡ್ಲಘಟ್ಟ ವಿಧಾನಸಭಾ ಕ್ಷೇತ್ರದಲ್ಲಿ ಸಣ್ಣ ಸಣ್ಣ ಕೆರೆಗಳಲ್ಲಿ ಮೀನು ಹಿಡಿದು ಜೀವನ ನಡೆಸುತ್ತಿರುವವರಿಗೆ ಮನೆಗಳಿಲ್ಲದೇ ತೊಂದರೆ ಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು. |
| ಆ) | ಕಳೆದ ಮೂರು ವರ್ಷಗಳಿಂದ ಮತ್ಸ್ಯಾಶ್ರಯ ಯೋಜನೆಯಡಿಯಲ್ಲಿ ಈ ಕ್ಷೇತ್ರಕ್ಕೆ ನೀಡಿದ್ದ ಮನೆಗಳಿಗೆ ತಡೆ ನೀಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | 2017-18ನೇ ಸಾಲಿಗೆ ಶಿಡ್ಲಘಟ್ಟ ವಿಧಾನಸಭಾ ಕ್ಷೇತ್ರಕ್ಕೆ 10 ಮನೆಗಳು ಹಂಚಿಕೆಯಾಗಿದ್ದು, ತದನಂತರದಲ್ಲಿ 2014-15ನೇ ಸಾಲಿನಿಂದ 2017-18ನೇ ಸಾಲುಗಳ ಮನೆಗಳನ್ನು ಸರ್ಕಾರವು ಮರುಹಂಚಿಕೆ ಮಾಡಿದ ಸಂದರ್ಭದಲ್ಲಿ ಸದರಿ 10 ಮನೆಗಳನ್ನು ಬೇರೆ ವಿಧಾನ ಸಭಾ ಕ್ಷೇತ್ರಗಳಿಗೆ ಮರುಹಂಚಿಕೆಯಾಗಿರುತ್ತದೆ. |
| ಇ) | ಬಂದಿದ್ದಲ್ಲಿ, ಸದರಿ ಮನೆಗಳನ್ನು ಯಾವಾಗ ಬಿಡುಗಡೆ ಮಾಡಲಾಗುವುದು; | ಅನ್ವಯಿಸುವುದಿಲ್ಲ. |
| ಈ) | ಮತ್ಸ್ಯಾಶ್ರಯ ಯೋಜನೆಯಡಿಯಲ್ಲಿ ಫಲಾನುಭವಿಗಳಿಗೆ ಮನೆ ನಿರ್ಮಾಣ ಮಾಡಲು ಈಗ ನೀಡುತ್ತಿರುವ ಹಣವೆಷ್ಟು (ವಿವರ ಒದಗಿಸುವುದು); | ಮತ್ಸ್ಯಾಶ್ರಯ ಯೋಜನೆಯಡಿ ಸಾಮಾನ್ಯ ಫಲಾನುಭವಿಗೆ ರೂ. 1.20 ಲಕ್ಷ ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡದ ಗ್ರಾಮೀಣ ಪ್ರದೇಶದ ಫಲಾನುಭವಿ ಗಳಿಗೆ ರೂ.1.75 ಲಕ್ಷ ಹಾಗೂ ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡದ ನಗರ ಪ್ರದೇಶದ ಫಲಾನುಭವಿಗಳಿಗೆ ರೂ. 2.00 ಲಕ್ಷಗಳ ಸಹಾಯ ಧನ ನೀಡಲಾಗುತ್ತಿದೆ. |
| ಉ) | ಕಟ್ಟಡ ಸಾಮಗ್ರಿಗಳ ದರ ಹಾಗೂ ಕೂಲಿ ಹೆಚ್ಚಾಗಿರುವುದರಿಂದ ಪ್ರಸ್ತುತ್ತ ನೀಡುತ್ತಿರುವ ಹಣ ಸಾಕಾಗದೇ ಮನೆಗಳ ನಿರ್ಮಾಣ ಅಪೂರ್ಣವಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಹಾಗಿದ್ದಲ್ಲಿ, ಫಲಾನುಭವಿಗಳಿಗೆ ಈಗ ನೀಡುತ್ತಿರುವ ಹಣಕ್ಕಿಂತ ಹೆಚ್ಚಿನ ಹಣ ನೀಡುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ? | ಇಲ್ಲ. |

ಸಂಖ್ಯೆ: ಪಸಂಮೀ ಇ-32 ಮೀಇಯೋ 2021

(ಎಸ್. ಅಂಗಾರ)
ಮೀನುಗಾರಿಕೆ ಹಾಗೂ
ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವರು

## ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 258
ಸದಸ್ಯರ ಹೆಸರು : ಶ್ರೀ. ಈಶ್ವರ್ ಖಂಡ್ರೆ (ಭಾಲ್ಕಿ)
ಉತ್ತರಿಸುವ ದಿನಾಂಕ : 01-02-2021
ಉತ್ತರಿಸುವ ಸಚಿವರು : ಕಂದಾಯ ಸಚಿವರು

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದ ನಗರ ಪ್ರದೇಶಗಳಲ್ಲಿ (ಪುರಸಭೆ/ನಗರಸಭೆ/ಪಟ್ಟಣ ಪಂಚಾಯಿತಿ/ ಮಹಾನಗರ ಪಾಲಿಕೆ/ಬಿ.ಬಿ.ಎಂ.ಪಿ) ಸರ್ಕಾರಿ ಜಾಗಗಳನ್ನು ಅತಿಕ್ರಮಣ ಮಾಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಆ) | ಹಾಗಿದ್ದಲ್ಲಿ, ಈ ಅತಿಕ್ರಮಣವನ್ನು ತೆರವುಗೊಳಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು; | ಸರ್ಕಾರಿ ಜಾಗವನ್ನು ಅತಿಕ್ರಮಣ ಮಾಡಿರುವವರ ವಿರುದ್ಧ ಕರ್ನಾಟಕ ಭೂ ಕಬಳಿಕೆ ನಿಷೇಧ ವಿಶೇಷ ನ್ಯಾಯಾಲಯದಲ್ಲಿ ಪ್ರಕರಣಗಳನ್ನು ದಾಖಲಿಸಲಾಗುತ್ತಿದೆ. |
| ಇ) | ನ್ಯಾಯಾಲಯಗಳಲ್ಲಿ ಅತಿಕ್ರಮಣಕ್ಕೆ ಸಂಬಂಧಿಸಿದಂತೆ ಇರುವ ಮೊಕದ್ದಮೆಗಳ ಸಂಖ್ಯೆ ಎಷ್ಟು; ಕಳೆದ 3 ವರ್ಷಗಳಲ್ಲಿ ನ್ಯಾಯಾಲಯದ ಮುಖಾಂತರ ಎಷ್ಟು ಪ್ರಮಾಣದ ಜಾಗಗಳನ್ನು ತೆರವುಗೊಳಿಸಲಾಗಿದೆ; (ವಿವರ ಒದಗಿಸುವುದು) | ಕರ್ನಾಟಕ ಭೂ ಕಬಳಿಕೆ ನಿಷೇಧ ವಿಶೇಷ ನ್ಯಾಯಾಲಯವು ದಿನಾಂಕ:31.08.2016 ರಿಂದ ಕಾರ್ಯಾರಂಭಗೊಂಡಿದ್ದು, ರಾಜ್ಯಾದ್ಯಂತ ಇಲ್ಲಿಯವರೆಗೂ ಒಟ್ಟು 8204 ಪ್ರಕರಣಗಳನ್ನು ದಾಖಲಿಸಲಾಗಿರುತ್ತದೆ.<br>ಇಲ್ಲಿಯವರೆಗೂ ಒಟ್ಟು 707.32 ಎಕರೆ/ಗುಂಟೆ ಜಮೀನನ್ನು ಒತ್ತುವರಿಯಿಂದ ತೆರವುಗೊಳಿಸಲಾಗಿದೆ. |
| ಈ) | ಬೀದರ್ ಜಿಲ್ಲೆ ಭಾಲ್ಕಿಯಲ್ಲಿ ಕಂದಾಯ ಇಲಾಖೆಗೆ ಸೇರಿದ ತಹಶೀಲ್ದಾರ್ ಕಛೇರಿ ಮತ್ತು ಪೊಲೀಸ್ ಸ್ಟೇಷನ್ ಜಾಗವು ಅತಿಕ್ರಮಣವಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಹಾಗಿದ್ದಲ್ಲಿ, ಈ ಅತಿಕ್ರಮಣವನ್ನು ತೆರವುಗೊಳಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು? (ವಿವರ ಒದಗಿಸುವುದು) | ಬೀದರ್ ಜಿಲ್ಲೆಯ ಭಾಲ್ಕಿಯಲ್ಲಿ ಕಂದಾಯ ಇಲಾಖೆಗೆ ಸೇರಿದ ತಹಶೀಲ್ದಾರ್ ಕಛೇರಿ ಮತ್ತು ಪೊಲೀಸ್ ಠಾಣೆಯ ಒತ್ತುವರಿಯನ್ನು ತೆರವುಗೊಳಿಸಲಾಗಿದೆ.<br>ತಹಶೀಲ್ದಾರ್ ಕಛೇರಿ ಒತ್ತುವರಿ ತೆರವುಗೊಳಿಸುವುದಕ್ಕೆ ಸಂಬಂಧಿಸಿದಂತೆ ಭಾಲ್ಕಿ ತಾಲ್ಲೂಕಿನ ಸೆಷನ್ಸ್ ನ್ಯಾಯಾಲಯದಲ್ಲಿ ದಾಖಲಾಗಿರುವ ಓ.ಎಸ್. ನಂ:48/2017 ರ ಪ್ರಕರಣವು ವಿಚಾರಣಾ ಹಂತದಲ್ಲಿರುತ್ತದೆ. |

**ಸಂಖ್ಯೆ: ಆರ್‌ಡಿ 12 ಎಲ್‌ಜಿಕ್ಯೂ 2021**

(ಆರ್.ಅಶೋಕ)
ಕಂದಾಯ ಸಚಿವರು

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : **260**
ಸದಸ್ಯರ ಹೆಸರು : ಶ್ರೀ ಈಶ್ವರ್ ಖಂಡ್ರೆ (ಭಾಲ್ಕಿ)
ಉತ್ತರಿಸಬೇಕಾದ ದಿನಾಂಕ : 01-02-2021
ಉತ್ತರಿಸುವ ಸಚಿವರು : ಮಾನ್ಯ ಕಂದಾಯ ಸಚಿವರು

| ಪ್ರಶ್ನೆ | ಉತ್ತರ |
|---|---|
| (ಅ) ರಾಜ್ಯದಲ್ಲಿ ಕಳೆದ ವರ್ಷ ಭೀಕರ ಪ್ರವಾಹದಿಂದಾಗಿ ಆದ ಮನೆ ಹಾನಿ, ಪ್ರಾಣ ಹಾನಿ ಹಾಗೂ ಬೆಳೆ ನಷ್ಟಗಳೆಷ್ಟು; (ವಿವರ ನೀಡುವುದು) | ರಾಜ್ಯದಲ್ಲಿ ಕಳೆದ ವರ್ಷ ಭೀಕರ ಪ್ರವಾಹದಿಂದಾಗಿ ಆದ ಮನೆ ಹಾನಿ, ಪ್ರಾಣ ಹಾನಿ ಹಾಗೂ ಬೆಳೆ ನಷ್ಟದ ವಿವರ ಕೆಳಕಂಡಂತಿದೆ.<br>1. ಮನೆಹಾನಿ- 44835 ಮನೆಗಳು<br>2. ಮಾನವ ಜೀವ ಹಾನಿ – 103<br>3. ಬೆಳೆ ನಷ್ಟ – 1968247.24 ಹೆಕ್ಟೇರ್ |
| (ಆ) ಇದುವರೆಗೆ ಎಷ್ಟು ಜನರಿಗೆ ಪರಿಹಾರಗಳನ್ನು ನೀಡಲಾಗಿದೆ, ಎಷ್ಟು ಬಾಕಿ ಇರುತ್ತದೆ; | ಪ್ರವಾಹ ಪೀಡಿತ ಕುಟುಂಬಗಳಿಗೆ ತಲಾ ರೂ.10,000/- ರಂತೆ ಒಟ್ಟು 27773 ಕುಟುಂಬಗಳಿಗೆ ತುರ್ತು ಪರಿಹಾರ ವಿತರಿಸಲಾಗಿದೆ.<br>ಮನೆ ಹಾನಿಗೆ ಸಂಬಂಧಿಸಿದಂತೆ ಈವರೆಗೆ ರೂ.151.73 ಕೋಟಿಗಳನ್ನು ರಾಜೀವ್ ಗಾಂಧಿ ವಸತಿ ನಿಗಮಕ್ಕೆ ಬಿಡುಗಡೆ ಮಾಡಲಾಗಿದ್ದು, ಕಟ್ಟಡ ನಿರ್ಮಾಣದ ಹಂತದನುಸಾರ ವಿವಿಧ ಕಂತುಗಳಲ್ಲಿ ರಾಜೀವ್ ಗಾಂಧಿ ವಸತಿ ನಿಗಮದ ವತಿಯಿಂದ ಪರಿಹಾರ ಮೊತ್ತ ಪಾವತಿಸಲಾಗುತ್ತಿದೆ.<br>ಮಾನವ ಜೀವಹಾನಿಯಾದ ಎಲ್ಲಾ ಪ್ರಕರಣಗಳಿಗೆ ಕೇಂದ್ರ ಸರ್ಕಾರದ ಮಾರ್ಗಸೂಚಿಯಂತೆ ರೂ.4.00 ಲಕ್ಷ ಹಾಗೂ ಮುಖ್ಯ ಮಂತ್ರಿಗಳ ಪರಿಹಾರ ನಿಧಿಯಿಂದ ರೂ.1.00 ಲಕ್ಷ ಸೇರಿದಂತೆ ಒಟ್ಟಾರೆ ತಲಾ ರೂ.5.00 ಲಕ್ಷ ಪರಿಹಾರ ವಿತರಿಸಲಾಗಿದೆ.<br>ಬೆಳೆಹಾನಿಯಾದ 9.22 ಲಕ್ಷ ರೈತರಿಗೆ ರೂ.709.67 ಕೋಟಿಗಳನ್ನು ಇನ್‌ಪುಟ್ ಸಬ್ಸಿಡಿ ಪಾವತಿಗಾಗಿ ಬಿಡುಗಡೆ ಮಾಡಲಾಗಿದೆ. |
| (ಇ) ನೆರೆ ಬಂದು ಹಲವು ತಿಂಗಳಾದರೂ ಪರಿಹಾರ ನೀಡದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಕೂಡಲೇ ಪರಿಹಾರ ಒದಗಿಸಲು ಸರ್ಕಾರ ಕೈಗೊಳ್ಳಲಿರುವ ಕ್ರಮಗಳೇನು? | ಅತಿವೃಷ್ಟಿಯಿಂದ ಉಂಟಾದ ಪ್ರವಾಹ ಪರಿಹಾರ ಕಾರ್ಯಗಳಿಗೆ ಸರ್ಕಾರವು ತಕ್ಷಣ ಸ್ಪಂದಿಸಿದೆ. ಎಸ್.ಡಿ.ಆರ್.ಎಫ್ ಅಡಿ ತುರ್ತು ಪ್ರವಾಹ ಪರಿಹಾರಕ್ಕಾಗಿ ಈವರೆಗೆ ರೂ.142.91 ಕೋಟಿ, ಮೂಲ ಸೌಕರ್ಯಗಳ ತುರ್ತು ದುರಸ್ತಿಗಾಗಿ ರೂ.423.00 ಕೋಟಿ, ಮನೆ ಹಾನಿ ಪರಿಹಾರಕ್ಕಾಗಿ ರೂ.151.73 ಕೋಟಿ, ಬೆಳೆ ಹಾನಿ ಇನ್‌ಪುಟ್ ಸಬ್ಸಿಡಿ ಪಾವತಿಗಾಗಿ ರೂ.707.69 ಕೋಟಿ ಸೇರಿ ಒಟ್ಟಾರೆ ರೂ.1425.33 ಕೋಟಿಗಳನ್ನು ಬಿಡುಗಡೆಗೊಳಿಸಲಾಗಿದೆ. |

ಕಂಇ 27 ಟಿಎನ್‌ಆರ್ 2021

(ಆರ್. ಅಶೋಕ)
ಕಂದಾಯ ಸಚಿವರು

## ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 269
ಸದಸ್ಯರ ಹೆಸರು : ಶ್ರೀ ಮಂಜುನಾಥ ಹೆಚ್.ಪಿ. (ಹುಣಸೂರು)
ಉತ್ತರಿಸುವ ಸಚಿವರು : ಕಂದಾಯ ಸಚಿವರು
ಉತ್ತರಿಸುವ ದಿನಾಂಕ : 01.02.2021

********

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಹುಣಸೂರು ತಾಲ್ಲೂಕಿಗೆ ಮಿನಿ ವಿಧಾನಸೌಧ ಕಟ್ಟಡ ನಿರ್ಮಾಣ ಮಾಡಲು ಅನುಮೋದನೆ ನೀಡಿ ತಡೆಹಿಡಿದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು.<br><br>ಹುಣಸೂರು ತಾಲ್ಲೂಕಿನಲ್ಲಿ ಮಿನಿ ವಿಧಾನಸೌಧ ಕಟ್ಟಡ ನಿರ್ಮಾಣ ಕಾಮಗಾರಿಯ ರೂ.9.50 ಕೋಟಿಗಳ ಸವಿವರ ಅಂದಾಜು ಪಟ್ಟಿಗೆ ಆಡಳಿತಾತ್ಮಕ ಅನುಮೋದನೆಯನ್ನು ಸರ್ಕಾರದ ಆದೇಶ ಸಂಖ್ಯೆ:ಕಂಇ/89/ಡಬ್ಲ್ಯೂಬಿಆರ್/2017, 04.07.2019 ರಂದು ಅನುಮೋದನೆ ನೀಡಲಾಗಿದ್ದು, ಸದರಿ ಆದೇಶವನ್ನು ದಿನಾಂಕ:29.07.2019 ರಂದು ತಡೆಹಿಡಿದು ಆದೇಶಿಸಿಲಾಗಿದೆ. ಕಾಮಗಾರಿಯನ್ನು ಪುನಃ ಜಾರಿಗೊಳಿಸುವ ಬಗ್ಗೆ ಕ್ರಮವಹಿಸಲಾಗುತ್ತಿದೆ. |
| ಆ) | ಬಂದಿದ್ದಲ್ಲಿ, ತಡೆಹಿಡಿಯಲು ಕಾರಣಗಳೇನು; (ವಿವರ ನೀಡುವುದು) | |
| ಇ) | ತಾತ್ಕಾಲಿಕ ತಡೆ ಆದೇಶವನ್ನು ಹಿಂಪಡೆಯಲು ಸರ್ಕಾರದ ಅಭಿಪ್ರಾಯವೇನು; | |
| ಈ) | ಯಾವ ಕಾಲಮಿತಿಯೊಳಗೆ ತಾತ್ಕಾಲಿಕ ತಡೆ ಆದೇಶವನ್ನು ಹಿಂಪಡೆದು ಮಿನಿ ವಿಧಾನಸೌಧ ನಿರ್ಮಾಣ ಮಾಡಲು ಅವಕಾಶ ಮಾಡಲಾಗುವುದು? (ವಿವರ ನೀಡುವುದು) | |

ಕಂಇ 6 ಡಬ್ಲ್ಯೂಬಿಆರ್ 2021

**(ಆರ್. ಅಶೋಕ)**
ಕಂದಾಯ ಸಚಿವರು

**ಕರ್ನಾಟಕ ವಿಧಾನಸಭೆ**
**15ನೇ ವಿಧಾನಸಭೆ**
**9ನೇ ಅಧಿವೇಶನ**

| | | |
|---|---|---|
| ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ | : | 277 |
| ಸದಸ್ಯರ ಹೆಸರು | : | ಶ್ರೀ. ಕುಮರಸ್ವಾಮಿ ಹೆಚ್.ಕೆ (ಸಕಲೇಶಪುರ) |
| ಉತ್ತರಿಸುವ ದಿನಾಂಕ | : | 01-02-2021 |
| ಉತ್ತರಿಸುವ ಸಚಿವರು | : | ಮಾನ್ಯ ಉಪಮುಖ್ಯಮಂತ್ರಿಗಳು ಹಾಗೂ ಲೋಕೋಪಯೋಗಿ ಸಚಿವರು |

| ಕ್ರಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ರಾಜ್ಯದಲ್ಲಿ ಪ್ರಸ್ತುತ ಸರ್ಕಾರ ಅಸ್ತಿತ್ವಕ್ಕೆ ಬಂದ ನಂತರ ಶಿವಮೊಗ್ಗ ಜಿಲ್ಲೆಯ ಲೋಕೋಪಯೋಗಿ ಇಲಾಖೆಯ ರಾಜ್ಯ ಮತ್ತು ಜಿಲ್ಲಾ/ಇತರೆ ಮುಖ್ಯ ರಸ್ತೆಗಳ ವಿವಿಧ ಲೆಕ್ಕ ಶೀರ್ಷಿಕೆಗಳಾದ 5054 ರಸ್ತೆ ಮತ್ತು ಸೇತುವೆ ನಿರ್ಮಾಣ, 3054-ರಸ್ತೆ ಮತ್ತು ಸೇತುವೆ ನಿರ್ಮಾಣ, ಕರ್ನಾಟಕ ರಾಜ್ಯ ಹೆದ್ದಾರಿ ಅಭಿವೃದ್ಧಿ ಯೋಜನೆ, ಕರ್ನಾಟಕ ರಾಜ್ಯ ರಸ್ತೆ ಅಭಿವೃದ್ಧಿ ನಿಗಮ, ಕರ್ನಾಟಕ ರಾಜ್ಯ ಹೆದ್ದಾರಿ ಯೋಜನೆ, ಫಾರಂ-ಸಿ ಯೋಜನೆ ಮುಂತಾದ ಯೋಜನೆಗಳ ಅಡಿಯಲ್ಲಿ 2019-20ನೇ ಸಾಲಿನಲ್ಲಿ ಮತ್ತು 2020-21 ನೇ ಆರ್ಥಿಕ ವರ್ಷದಲ್ಲಿ, ಆರ್ಥಿಕ ಇಲಾಖೆಯ ಅನುಮೋದನೆ ನಿರೀಕ್ಷಣೆ ಮೇರೆಗೆ ಮತ್ತು ಅಪೆಂಡಿಕ್ಸ್-ಇ ಒಳಗೆ ಸೇರಿರುವ ಷರತ್ತಿಗೆ ಒಳಪಟ್ಟು ಮಂಜೂರು ಮಾಡಿರುವ ಕಾಮಗಾರಿಗಳು ಎಷ್ಟು; ಈ ಕಾಮಗಾರಿಗಳ ಅಂದಾಜು ಮೊತ್ತವೆಷ್ಟು (ಕಾಮಗಾರಿಗಳ ಹೆಸರು ಒಳಗೊಂಡಂತೆ ವಿಧಾನಸಭಾ ಕ್ಷೇತ್ರವಾರು ಸಂಪೂರ್ಣ ವಿವರ ನೀಡುವುದು); | 2019-20 ಹಾಗೂ 2020-21ನೇ ಸಾಲಿನಲ್ಲಿ ಲೆಕ್ಕಶೀರ್ಷಿಕೆ 5054 ರಸ್ತೆ ಮತ್ತು ಸೇತುವೆ ಇವುಗಳಡಿ ಅಪೆಂಡಿಕ್ಸ್-'ಇ'ಯಲ್ಲಿ ಸೇರಿಸುವ ಷರತ್ತಿಗೊಳಪಟ್ಟು ಯಾವುದೇ ಕಾಮಗಾರಿಗಳಿಗೆ ಅನುಮೋದನೆ ನೀಡಿರುವುದಿಲ್ಲ. |
| ಆ) | ಈ ಕಾಮಗಾರಿಗಳ ಪೈಕಿ ಎಷ್ಟು ಕಾಮಗಾರಿಗಳಿಗೆ ತಾಂತ್ರಿಕ ಮತ್ತು ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆಯೇ ಮತ್ತು ಅನುಷ್ಠಾನ ಯಾವ ಹಂತದಲ್ಲಿದೆ; (ವಿಧಾನ ಸಭಾ ಕ್ಷೇತ್ರವಾರು ಸಂಪೂರ್ಣ ವಿವರ ನೀಡುವುದು); | |
| ಇ) | 2019-20ನೇ ಸಾಲಿನ ಮತ್ತು 2020-21ನೇ ಸಾಲಿನಲ್ಲಿ ಆರ್ಥಿಕ ವರ್ಷದಲ್ಲಿ ಈ ಕಾಮಗಾರಿಗಳಿಗೆ ಬಿಡುಗಡೆಯಾಗಿರುವ ಹಣ ಭರವಸೆ ಪತ್ರಗಳೇಷ್ಟು ಮತ್ತು ಇವುಗಳಲ್ಲಿ ಎಷ್ಟು ಶೀರುವಳಿ ಮಾಡಲಾಗಿದೆ (ವಿಧಾನ ಸಭಾ ಕ್ಷೇತ್ರವಾರು ಸಂಪೂರ್ಣ ಮಾಹಿತಿ ನೀಡುವುದು); | |
| ಈ) | ಹಣ ಭರವಸೆ ಪತ್ರವನ್ನು ಜೇಷ್ಠತೆ ಆಧಾರದ ಮೇಲೆ ನೀಡಲಾಗಿದೆ; ಹಾಗಿದ್ದಲ್ಲಿ ಜೇಷ್ಠತೆಯನ್ನು ಪಾಲಿಸದೆ ನೀಡಲಾದ ಹಣ ಭರವಸೆ ಪತ್ರಗಳೇಷ್ಟು? (ವಿಭಾಗವಾರು ಸಂಪೂರ್ಣ ಮಾಹಿತಿ ನೀಡುವುದು) | ಕಾಮಗಾರಿಗಳ ಬಾಕಿಬಿಲ್ಲುಗಳನ್ನು ಜೇಷ್ಠತೆ ಹಾಗೂ ಆದ್ಯತೆಯ ಆಧಾರದ ಮೇಲೆ ತೀರುವಳಿಗೆ ಕ್ರಮವಹಿಸಲಾಗಿರುತ್ತದೆ. |

**ಲೋಇ/102/ಐಎಫ್ಎ/2021**

(ಗೋವಿಂದ ಎಂ ಕಾರಜೋಳ)
ಉಪಮುಖ್ಯಮಂತ್ರಿಗಳು ಹಾಗೂ
ಲೋಕೋಪಯೋಗಿ ಸಚಿವರು

# ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | **275** |
| ಸದಸ್ಯರ ಹೆಸರು | : | ಶ್ರೀ ವೆಂಕಟರಮಣಯ್ಯ ಟಿ. (ದೊಡ್ಡಬಳ್ಳಾಪುರ) |
| ಉತ್ತರಿಸಬೇಕಾದ ದಿನಾಂಕ | : | 01-02-2021 |
| ಉತ್ತರಿಸುವ ಸಚಿವರು | : | ಮಾನ್ಯ ಕಂದಾಯ ಸಚಿವರು |

**ಪ್ರಶ್ನೆ** / **ಉತ್ತರ**

(ಅ) ಕೃಷಿ, ತೋಟಗಾರಿಕೆ, ವಾಣಿಜ್ಯ ಬೆಳೆಗಳ ನಷ್ಟವನ್ನು ಭರಿಸಲು ಸರ್ಕಾರವು ಯಾವ ವರ್ಷದಲ್ಲಿ ದರವನ್ನು ನಿಗದಿ ಪಡಿಸಲಾಗಿದೆ; (ಬೆಳೆಗಳವಾರು ವಿವರ ನೀಡುವುದು)

ಕೇಂದ್ರ ಸರ್ಕಾರದ ಪತ್ರ ಸಂಖ್ಯೆ 32-7/201-NDM-I, ದಿನಾಂಕ:08.04.2015 ರಲ್ಲಿ 2015 ರಿಂದ 2020ನೇ ಸಾಲಿನ ವರೆಗೆ ಅನ್ವಯವಾಗುವಂತೆ ಪ್ರಕೃತಿ ವಿಕೋಪ ಪರಿಹಾರ ಪಾವತಿಗಾಗಿ NDRF/SDRF ಮಾರ್ಗಸೂಚಿಗಳನ್ನು ಹೊರಡಿಸಿದ್ದು, ಸದರಿ ಮಾರ್ಗಸೂಚಿಗಳನ್ವಯ ಪ್ರಕೃತಿ ವಿಕೋಪದಿಂದ ಹಾನಿಯಾದ ಕೃಷಿ, ತೋಟಗಾರಿಕೆ, ವಾಣಿಜ್ಯ ಬೆಳೆಗಳ ನಷ್ಟವನ್ನು ಭರಿಸಲು ಇನ್‌ಪುಟ್ ಸಬ್ಸಿಡಿ ಪಾವತಿಸಲಾಗುತ್ತದೆ. ಅದರಂತೆ, ಶೇ.33 ಕ್ಕಿಂತ ಹೆಚ್ಚಿನ ಬೆಳೆ ಹಾನಿಗೆ ತುತ್ತಾದ ಕೃಷಿಕರಿಗೆ ಕೇಂದ್ರ ಸರ್ಕಾರದ NDRF/SDRF ಮಾರ್ಗ ಸೂಚಿಗಳ ಪ್ರಕಾರ ಗರಿಷ್ಠ 2 ಹೆಕ್ಟೇರ್‌ಗೆ ಸೀಮಿತಗೊಳಿಸಿ ಈ ಕೆಳಕಂಡ ದರದಲ್ಲಿ ಇನ್‌ಪುಟ್ ಸಬ್ಸಿಡಿಯನ್ನು ನೀಡಲಾಗುತ್ತದೆ.

| **ಬೆಳೆ ವಿಧ** | **ಇನ್‌ಪುಟ್ ಸಬ್ಸಿಡಿ (ಪ್ರತಿ ಹೆಕ್ಟೇರ್‌ಗೆ** |
|---|---|
| ಮಳೆಯಾಶ್ರಿತ ಬೆಳೆ | ರೂ.6800/- |
| ನೀರಾವರಿ ಬೆಳೆ | ರೂ.13500/- |
| ಬಹುವಾರ್ಷಿಕ ಬೆಳೆ | ರೂ.18000/- |

(ಆ) ರೈತರು ಬೆಳೆ ಬೆಳೆಯಲು ಲಕ್ಷ ಗಟ್ಟಲೆ ಖರ್ಚಾಗುತ್ತಿದ್ದು, ನಷ್ಟ ಪರಿಹಾರ ಮೊತ್ತವು ಅಲ್ಪ ಮೊತ್ತವಾಗಿದ್ದು, ಹಿಂದಿನ ವರ್ಷಗಳ ದರವನ್ನು ಪರಿಷ್ಕರಿಸದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;

(ಇ) ಹಾಗಿದ್ದಲ್ಲಿ, ಸರ್ಕಾರವು ಕೈಗೊಂಡ ಕ್ರಮಗಳೇನು?

ಬಂದಿದೆ. 2019ರಲ್ಲಿ ಅತಿವೃಷ್ಟಿ/ಪ್ರವಾಹದಿಂದ ಉಂಟಾದ ಬೆಳೆಹಾನಿಗೆ ಕೇಂದ್ರ ಸರ್ಕಾರದ NDRF/SDRF ಮಾರ್ಗಸೂಚಿಗಳಲ್ಲಿ ನಿಗದಿಪಡಿಸಿರುವ ದರಕ್ಕಿಂತ ಹೆಚ್ಚುವರಿಯಾಗಿ ಪ್ರತಿ ಹೆಕ್ಟೇರ್‌ಗೆ ರೂ.10,000/- ಸೇರಿ ಕೆಳಕಂಡ ಪರಿಷ್ಕೃತ ದರದಲ್ಲಿ ಇನ್‌ಪುಟ್ ಸಬ್ಸಿಡಿಯನ್ನು ರೈತರಿಗೆ ಪಾವತಿಸಲಾಗಿದೆ. ಹೆಚ್ಚುವರಿ ದರದ ಮೊತ್ತವನ್ನು ರಾಜ್ಯ ಸರ್ಕಾರದಿಂದ ಭರಿಸಲಾಗಿದೆ.

| **ಬೆಳೆ ವಿಧ** | **ಮಾರ್ಗಸೂಚಿ ದರ** | **ಪರಿಷ್ಕೃತ ದರ** |
|---|---|---|
| ಮಳೆಯಾಶ್ರಿತ | ರೂ.6800/– | ರೂ.16800/– |
| ನೀರಾವರಿ | ರೂ.13500/– | ರೂ.23500/– |
| ಬಹುವಾರ್ಷಿಕ | ರೂ.18000/– | ರೂ.28000/– |

ಕಂಇ 40 ಟಿಎನ್‌ಆರ್ 2021

(ಆರ್. ಅಶೋಕ)
ಕಂದಾಯ ಸಚಿವರು

## ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 282
ಸದಸ್ಯರ ಹೆಸರು : ಶ್ರೀ ಅನಿಲ್ ಚಿಕ್ಕಮಾದು (ಹೆಚ್.ಡಿ. ಕೋಟೆ)
ಉತ್ತರಿಸುವ ದಿನಾಂಕ : 01-02-2021
ಉತ್ತರಿಸುವ ಸಚಿವರು : ಕಂದಾಯ ಸಚಿವರು

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| (ಅ) | ಕಂದಾಯ ಇಲಾಖೆಯ ಜಮೀನನ್ನು ವಸತಿ ಉದ್ದೇಶಕ್ಕಾಗಿ ಕಾಯ್ದಿರಿಸಲು ಇರುವಂತಹ ಮಾನದಂಡಗಳೇನು; (ಸಂಪೂರ್ಣ ವಿವರ ನೀಡುವುದು) | ಕರ್ನಾಟಕ ಭೂ ಕಂದಾಯ ಅಧಿನಿಯಮ 1964ರ ಕಲಂ 71ರಡಿ ಸಾರ್ವಜನಿಕ ಉದ್ದೇಶಗಳಿಗೆ ಜಮೀನುಗಳನ್ನು ಕಾಯ್ದಿರಿಸಲು ಅವಕಾಶ ಕಲ್ಪಿಸಲಾಗಿದೆ. |
| (ಆ) | ಮೈಸೂರು ಜಿಲ್ಲೆ ಸರಗೂರು ತಾಲ್ಲೂಕು ಸರಗೂರು ಹೋಬಳಿ, ಕುನ್ನಪಟ್ಟಣ ಗ್ರಾಮವನ್ನು ಸ್ಥಳಾಂತರಗೊಳಿಸಿ ವಸತಿ ಸೌಲಭ್ಯ ನೀಡುವ ಪ್ರಸ್ತಾವನೆ ಸರ್ಕಾರಕ್ಕೆ ಸಲ್ಲಿಕೆಯಾಗಿದೆಯೇ; ಹಾಗಿದ್ದಲ್ಲಿ, ಸರ್ಕಾರ ಯಾವ ಯಾವ ಕ್ರಮಗಳನ್ನು ಕೈಗೊಂಡಿದೆ; (ಸಂಪೂರ್ಣ ವಿವರ ನೀಡುವುದು) | ಹೌದು.<br>ಮೈಸೂರು ಜಿಲ್ಲೆ, ಸರಗೂರು ತಾಲ್ಲೂಕು, ಸರಗೂರು ಹೋಬಳಿ, ಕುನ್ನಪಟ್ಟಣ ಗ್ರಾಮವನ್ನು ಸ್ಥಳಾಂತರಿಸಿ ವಸತಿ ಸೌಲಭ್ಯ ನೀಡಲು ಕುನ್ನಪಟ್ಟಣ ಗ್ರಾಮದ ಸ.ನಂ.2 ರಲ್ಲಿ 9-00 ಎಕರೆ ಜಮೀನನ್ನು ಕರ್ನಾಟಕ ಭೂ ಕಂದಾಯ ನಿಯಮಗಳು 1966ರ ನಿಯಮ 97(4)ರನ್ವಯ ಗೋಮಾಳ ಶೀರ್ಷಿಕೆಯಿಂದ ತಗ್ಗಿಸಿ ಕುನ್ನಪಟ್ಟಣ ಗ್ರಾಮಠಾಣಾ ಮತ್ತು ಅದಕ್ಕೆ ಹೊಂದಿಕೊಂಡಿರುವ ಪ್ರದೇಶದಲ್ಲಿನ ಕುಟುಂಬಗಳನ್ನು ಆಶ್ರಯ ಯೋಜನೆಯಡಿ ನಿವೇಶನಗಳನ್ನು ರಚಿಸಿ ಪ್ರಸ್ತಾಪಿತ ಜಮೀನಿನಲ್ಲಿ ಸದರಿ ಕುಟುಂಬಗಳನ್ನು ಸ್ಥಳಾಂತರಿಸುವ ಉದ್ದೇಶಕ್ಕಾಗಿ ಕರ್ನಾಟಕ ಭೂ ಕಂದಾಯ ಅಧಿನಿಯಮ 1964ರ ಕಲಂ 71ರಡಿ ಕಾಯ್ದಿರಿಸಲು ಸರ್ಕಾರದ ಪೂರ್ವಾನುಮೋದನೆ ನೀಡಲಾಗಿದೆ. |
| (ಇ) | ಕಬಿನಿ ಜಲಾಶಯಕ್ಕೆ ಮುಳುಗಡೆಯಾದ ಮೈಸೂರು ಜಿಲ್ಲೆ ಹೆಚ್.ಡಿ.ಕೋಟೆ ತಾಲ್ಲೂಕು ಅಂತರಸಂತೆ ಹೋಬಳಿ ಕೆಂಚನಹಳ್ಳಿ ಗ್ರಾಮದ ನಿರಾಶ್ರಿತರಿಗೆ ಬಿಡುಗಡೆಯಾಗಿದ್ದ 1070-00 ಎಕರೆ ಜಮೀನಿನ ಪೈಕಿ ಬಾಕಿ ಇರುವ 369.30 ಎಕರೆ ಜಮೀನನ್ನು ಅರಣ್ಯ ಇಲಾಖೆಯಿಂದ ಬಿಡಿಸಿ ಅರ್ಹ ಫಲಾನುಭವಿಗಳಿಗೆ ಮಂಜೂರು ಮಾಡುವ ಪ್ರಸ್ತಾವನೆ ಸರ್ಕಾರಕ್ಕೆ ಸಲ್ಲಿಕೆಯಾಗಿದೆಯೇ; ಹಾಗಿದ್ದಲ್ಲಿ, ಸರ್ಕಾರ ಕೈಗೊಂಡ ಕ್ರಮಗಳೇನು; ಹಾಗೂ ಯಾವಾಗ ಮಂಜೂರು ಮಾಡಲಾಗುವುದು? (ಸಂಪೂರ್ಣ ವಿವರ ನೀಡುವುದು) | ಹೌದು.<br>ಪ್ರಸ್ತಾವನೆಯು ಅರಣ್ಯ ಇಲಾಖೆಯ ಪರಿಶೀಲನೆಯಲ್ಲಿದೆ. |

(ಕಡತ ಸಂಖ್ಯೆ: ಕಂಇ 12 ಎಲ್‌ಜಿಎಂ 2021)

(ಆರ್.ಅಶೋಕ)
ಕಂದಾಯ ಸಚಿವರು

# ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | **286** |
| ಸದಸ್ಯರ ಹೆಸರು | : | **ಶ್ರೀ ವೆಂಕಟರೆಡ್ಡಿ ಮುದ್ನಾಳ್ (ಯಾದಗಿರಿ)** |
| ಉತ್ತರಿಸುವ ಸಚಿವರು | : | **ಮಾನ್ಯ ಕಂದಾಯ ಸಚಿವರು** |
| ಉತ್ತರಿಸುವ ದಿನಾಂಕ | : | **01.02.2021** |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| **ಅ.** | ಯಾದಗಿರಿ ಜಿಲ್ಲೆಯಲ್ಲಿ ರೈತರ ಪಹಣಿ ತಿದ್ದುಪಡಿಗಳ ಅರ್ಜಿಗಳು ಸುಮಾರು ವರ್ಷಗಳಿಂದ ಬಾಕಿ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ ಸರ್ಕಾರ ಕೈಗೊಂಡ ಕ್ರಮಗಳೇನು; | ಹೌದು. ಯಾದಗಿರಿ ಜಿಲ್ಲೆಯಲ್ಲಿ ರೈತರ ಪಹಣಿ ತಿದ್ದುಪಡಿಗಳ ಅರ್ಜಿಗಳು ಸುಮಾರು ವರ್ಷಗಳಿಂದ ಬಾಕಿ ಇರುವುದು ಸರ್ಕಾರದ ಗಮನಕ್ಕೆ ಬಂದಿರುತ್ತದೆ. ಕಂದಾಯ ಅದಾಲತ್ ವಿಶೇಷ ಅಭಿಯಾನ ಯೋಜನೆಯ ಮೂಲಕ ಬಾಕಿ ಇರುವ ಪಹಣಿ ತಿದ್ದುಪಡಿ ಅರ್ಜಿಗಳನ್ನು ವಿಲೇವಾರಿ ಮಾಡಲು ಕ್ರಮವಹಿಸಲಾಗುತ್ತಿದೆ. |
| **ಆ.** | ರೈತರಿಗೆ ಜಮೀನುಗಳನ್ನು ವರ್ಗಾವಣೆ ಮಾಡಿಕೊಳ್ಳಲು ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ; ಸರ್ಕಾರ ಕೈಗೊಂಡ ಕ್ರಮಗಳೇನು; | ಹೌದು. ರೈತರ ಜಮೀನುಗಳ ವರ್ಗಾವಣೆಯಲ್ಲಿ ತೊಂದರೆಯಾಗದಂತೆ ಕಂದಾಯ ಅದಾಲತ್ ವಿಶೇಷ ಅಭಿಯಾನ ಹಾಗೂ ಪೌತಿ ಖಾತೆ ಆಂದೋಲನಗಳ ಮೂಲಕ ಖಾತೆ ವರ್ಗಾವಣೆ ಮಾಡಲು ಕ್ರಮ ವಹಿಸಲಾಗುತ್ತಿದೆ. |

**ಸಂಖ್ಯೆ:ಆರ್‌ಡಿ 34 ಟಿಆರ್‌ಎಂ 2021**

(ಆರ್. ಆಶೋಕ)
ಕಂದಾಯ ಸಚಿವರು

# ಕರ್ನಾಟಕ ವಿಧಾನಸಭೆ

| | | |
|---|---|---|
| 1 | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 287 |
| 2 | ಸದಸ್ಯರ ಹೆಸರು | ಶ್ರೀ ವೆಂಕಟರೆಡ್ಡಿ ಮುದ್ನಾಳ್ (ಯಾದಗಿರಿ) |
| 3 | ಉತ್ತರಿಸಬೇಕಾದ ದಿನಾಂಕ | 01.02.2021 |
| 4 | ಉತ್ತರಿಸುವ ಸಚಿವರು | ಕಂದಾಯ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಯಾದಗಿರಿ ಜಿಲ್ಲೆ ವಡಗೇರಾ ತಾಲ್ಲೂಕಿನ ಶಿವಪುರ, ಗೋಪಾಲ, ಗುಂಡಗುರ್ತಿ ಗ್ರಾಮಗಳ ಮರು ಭೂಮಾಪನ ಮನವಿ ಸಲ್ಲಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಸರ್ಕಾರ ಕೈಗೊಂಡ ಕ್ರಮಗಳೇನು; | ಬಂದಿದೆ.<br><br>ಯಾದಗಿರಿ ಜಿಲ್ಲೆಯ ಶಹಾಪೂರ ತಾಲೂಕಿನ (ವಡಗೇರಾ) ಶಿವಪೂರ, ಗೋನಾಳ ಮತ್ತು ಗುಂಡಗುರ್ತಿ ಗ್ರಾಮಗಳಲ್ಲಿ ರೈತರ ಜಮೀನುಗಳ ಅನುಭವದಂತೆ ಸರ್ವೆ ನಂಬರು ಮತ್ತು ವಿಸ್ತೀರ್ಣ ಪಹಣಿಯಲ್ಲಿನ ಸರ್ವೆ ನಂಬರು ಮತ್ತು ವಿಸ್ತೀರ್ಣಕ್ಕೂ ವ್ಯತ್ಯಾಸವಿದ್ದು, ಕಾರಣ ಸ್ಥಳ ಪರಿಶೀಲನೆ ಮಾಡಿ ವ್ಯತ್ಯಾಸದ ಕುರಿತು ಮಾಹಿತಿ ಸಲ್ಲಿಸಲು ಸೂಚಿಸಿದಂತೆ. ಸದರಿ ಗ್ರಾಮಗಳಲ್ಲಿಯ ರೈತರ ಜಮೀನುಗಳ ಪಹಣಿ ಮತ್ತು ಅನುಭವದ ಸರ್ವೆ ನಂಬರು, ವಿಸ್ತೀರ್ಣದಲ್ಲಿ ವ್ಯತ್ಯಾಸ ವಿರುವ ಕುರಿತು ಸ್ಥಳ ಪರಿಶೀಲನೆ ಮಾಡಿ ವ್ಯತ್ಯಾಸ ತಖ್ತೆ ತಯಾರಿಸುವ ಕಾರ್ಯ ಪ್ರಗತಿಯಲ್ಲಿದ್ದು, ಜಿಲ್ಲಾಡಳಿತ ದಿಂದ ಮಾಹಿತಿಯ ನಿರೀಕ್ಷೆಯಲ್ಲಿದೆ.<br><br>ಈ ಕುರಿತು ಜಿಲ್ಲಾಡಳಿತದಿಂದ ಮಾಹಿತಿ ಪಡೆದು ಪರಿಶೀಲಿಸಿ, ದಾಖಲೆಗಳನ್ನು ಸರಿಪಡಿಸುವ ಅಥವಾ ಮರು ಭೂಮಾಪನ ಕೈಗೊಳ್ಳುವ ಕುರಿತು ಮುಂದಿನ ಕ್ರಮ ಕೈಗೊಳ್ಳಲಾಗುವುದು. |
| ಆ) | ಇದರಿಂದ ಸದರಿ ಗ್ರಾಮಗಳಲ್ಲಿ ಯಾವುದೇ ಭೂಮಿಯ ವಹಿವಾಟು ನಡೆಸಲು ಕಷ್ಟವಾಗುತ್ತಿರುವುದು; ಈ ಗ್ರಾಮಗಳ ರೈತರಿಗೆ ಸರ್ಕಾರದಿಂದ ಸಿಗುವ ಸೌಲಭ್ಯಗಳಿಂದ ವಂಚಿತರಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಸರ್ಕಾರವು ಕೈಗೊಂಡಿರುವ ಕ್ರಮಗಳೇನು; (ಪೂರ್ಣ ಮಾಹಿತಿ ನೀಡುವುದು) | |
| ಇ) | ಯಾವ ಕಾಲಮಿತಿಯೊಳಗೆ ಸರ್ಕಾರ ಮರು ಭೂಮಾಪನ ಮಾಡಿ ರೈತರಿಗೆ ಮತ್ತು ಗ್ರಾಮಸ್ಥರಿಗೆ ವಹಿವಾಟಿಗೆ ಅನುಕೂಲವಾಗುವಂತೆ ಮಾಡಲಾಗುವುದು? | |

**ಸಂಖ್ಯೆ: ಕಂಇ 10 ಎಸ್‌ಎಸ್‌ಸಿ 2021**

**(ಆರ್.ಅಶೋಕ)**

ಕಂದಾಯ ಸಚಿವರು

# ಕರ್ನಾಟಕ ವಿಧಾನಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 291 |
| ಸದಸ್ಯರ ಹೆಸರು | ಶ್ರೀ ಸೋಮನಗೌಡ ಬಿ.ಪಾಟೀಲ್ (ಸಾಸನೂರು) (ದೇವರ ಹಿಪ್ಪರಗಿ) |
| ಉತ್ತರಿಸಬೇಕಾದ ದಿನಾಂಕ | 01.02.2021 |
| ಉತ್ತರಿಸುವ ಸಚಿವರು | ಕಂದಾಯ ಸಚಿವರು |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ದೇವರ ಹಿಪ್ಪರಗಿ ತಾಲ್ಲೂಕು ರಚನೆಯಾಗಿ 3 ವರ್ಷ ಕಳೆದರು ವಿವಿಧ ಇಲಾಖೆಗಳ ತಾಲ್ಲೂಕು ಕಛೇರಿಗಳನ್ನು ತಾಲ್ಲೂಕು ಕೇಂದ್ರವಾದ ದೇವರ ಹಿಪ್ಪರಗಿಯಲ್ಲಿ ಕಾರ್ಯಾರಂಭ ಮಾಡದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಆ) | ಬಂದಿದ್ದಲ್ಲಿ, ಸರ್ಕಾರ ಕೈಗೊಂಡ ಕ್ರಮಗಳೇನು; | ಕಂದಾಯ ಇಲಾಖೆ ವತಿಯಿಂದ ತಾಲ್ಲೂಕು ಕಚೇರಿ ಪ್ರಾರಂಭಿಸಲು ಹಾಗೂ ಇತರೆ ಇಲಾಖೆಗಳ ತಾಲ್ಲೂಕು ಮಟ್ಟದ ಕಚೇರಿಗಳನ್ನು ಆರ್ಥಿಕ ಇಲಾಖೆಯ ಸಹಮತಿಯೊಂದಿಗೆ ಹಂತ ಹಂತವಾಗಿ ತೆರೆಯಲು ಆಯಾ ಇಲಾಖೆಗಳಿಗೆ ಅನುಮತಿ ನೀಡಲಾಗಿದೆ.<br><br>ನೂತನ ತಾಲ್ಲೂಕುಗಳಲ್ಲಿ ಪ್ರಮುಖ ಇಲಾಖೆಗಳ ತಾಲ್ಲೂಕು ಮಟ್ಟದ ಕಚೇರಿಗಳನ್ನು ಪ್ರಾರಂಭಿಸಲು ಸಂಬಂಧಪಟ್ಟ ಸಚಿವಾಲಯದ ಇಲಾಖೆಗಳ ಮುಖ್ಯಸ್ಥರೊಂದಿಗೆ ಈ ಹಿಂದೆ ಸಭೆ ನಡೆಸಿ ಹೊಸ ತಾಲ್ಲೂಕುಗಳಲ್ಲಿ ಪೂರ್ಣ ಪ್ರಮಾಣದಲ್ಲಿ ಕಚೇರಿ ಪ್ರಾರಂಭಿಸಲು ಅನುವಾಗುವಂತೆ ತುರ್ತು ಕ್ರಮ ವಹಿಸಲು ಹಾಗೂ ಹುದ್ದೆಗಳನ್ನು ಸೃಜಿಸಲು ಕ್ರಮ ಕೈಗೊಳ್ಳುವಂತೆ ನಿರ್ದೇಶನ ನೀಡಲಾಗಿದೆ. ಹಾಗೂ ಸಂಬಂಧಪಟ್ಟ ಜಿಲ್ಲೆಗಳ ಜಿಲ್ಲಾಧಿಕಾರಿಗಳಿಗೆ ಪತ್ರ ಬರೆದು, ತಾಲ್ಲೂಕು ಮಟ್ಟದಲ್ಲಿ ಕಾರ್ಯ ನಿರ್ವಹಿಸಬೇಕಾದ ಪ್ರಮುಖ ಇಲಾಖೆಗಳ ಕಚೇರಿಗಳನ್ನು ಪ್ರಾರಂಭಿಸಲು ಸಂಬಂಧಪಟ್ಟ ಇಲಾಖೆಗಳಿಗೆ ಪ್ರಸ್ತಾವನೆ ಸಲ್ಲಿಸಲು ಸೂಕ್ತ ನಿರ್ದೇಶನ ನೀಡಲಾಗಿದೆ. ಆದರಂತೆ ಹಂತ-ಹಂತವಾಗಿ ಕಚೇರಿಗಳನ್ನು ಪ್ರಾರಂಭಿಸಲಾಗುವುದು. |
| ಇ) | ದೇವರ ಹಿಪ್ಪರಗಿ ಪಟ್ಟಣದಲ್ಲಿ ಎಲ್ಲಾ ಇಲಾಖೆಗಳ ತಾಲ್ಲೂಕು ಕಛೇರಿಗಳನ್ನು ಯಾವಾಗ ಪ್ರಾರಂಭಿಸಲಾಗುವುದು ಹಾಗೂ ಬೇಕಾಗುವ ಕಾಲಮಿತಿ ಎಷ್ಟು; | |
| ಈ) | ಪ್ರಸ್ತುತ ದೇವರ ಹಿಪ್ಪರಗಿ ಪಟ್ಟಣದಲ್ಲಿ ಯಾವ ಯಾವ ಇಲಾಖೆಯ ಕಛೇರಿಗಳನ್ನು ಕಾರ್ಯಾರಂಭ ಮಾಡಲಾಗಿದೆ? (ಇಲಾಖಾವಾರು ಸಹಿತ ವಿವರ ನೀಡುವುದು) | ದೇವರ ಹಿಪ್ಪರಗಿ ತಾಲ್ಲೂಕಿನಲ್ಲಿ ಪ್ರಸ್ತುತ ಕೆಳಕಂಡ ಕಛೇರಿಗಳು ಕಾರ್ಯನಿರ್ವಹಿಸುತ್ತಿವೆ.<br>1) ತಾಲ್ಲೂಕು ಕಛೇರಿ<br>2) ತಾಲ್ಲೂಕು ಪಂಚಾಯಿತಿ ಕಛೇರಿ<br>3) ಉಪ ಖಜಾನೆ |

**ಸಂಖ್ಯೆ: ಕಂಇ/6/ಎಲ್‌ಆರ್‌ಡಿ/2021**

(ಆರ್.ಅಶೋಕ)
ಕಂದಾಯ ಸಚಿವರು

ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ :: 296
ಸದಸ್ಯರ ಹೆಸರು :: ಶ್ರೀ ಯಶವಂತರಾಯಗೌಡ ವಿಠಲಗೌಡ ಪಾಟೀಲ್ (ಇಂಡಿ)
ಉತ್ತರಿಸುವ ದಿನಾಂಕ: :: 01.02.2021
ಉತ್ತರಿಸುವ ಸಚಿವರು :: ಕಂದಾಯ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ವಿಜಯಪುರ ಜಿಲ್ಲೆಯ ಇಂಡಿ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಕೆಲವು ಹಳ್ಳಿಗಳಲ್ಲಿ ಮೃತ ವ್ಯಕ್ತಿಗಳ ಅಂತ್ಯಸಂಸ್ಕಾರಕ್ಕೆ ಸ್ಮಶಾನ ಭೂಮಿ ಲಭ್ಯವಿಲ್ಲದೇ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ? | ಬಂದಿರುತ್ತದೆ |
| ಆ) | ಬಂದಿದ್ದಲ್ಲಿ, ಯಾವ ಯಾವ ಗ್ರಾಮಗಳಲ್ಲಿ ಸ್ಮಶಾನ ಭೂಮಿ ಲಭ್ಯವಿರುವುದಿಲ್ಲ; (ವಿವರ ನೀಡುವುದು) | ಸಾಲೋಟಗಿ, ಶಿವಪೂರ, ಬಿಕೆ.ಗೊರನಾಳ, ಶಿರಗೂರ ಇನಾಂ, ಭುಯ್ಯಾರ, ತೆಗ್ಗಿಹಳ್ಳಿ, ಅರ್ಜುಣಗಿ ಕೆಡಿ, ಚಿಕ್ಕಮಣ್ಣೂರ, ಗಾಂಧಿನಗರ, ಬರಗುಡಿ, ಪಡನೂರ, ಲೋಣಿ ಕೆಡಿ, ಅಂಗದಳ್ಳಿ, ಬೈರುಣಗಿ, ಝಳಕಿ, ಮೈಲಾರ, ಅಥರ್ಗಾ, ರಾಜನಾಳ, ಬಂಥನಾಳ, ಹಳಗುಣಕಿ, ಬೆನಕನಹಳ್ಳಿ ಮತ್ತು ವಿಜಯನಗರ ಗ್ರಾಮಗಳಲ್ಲಿ ಸ್ಮಶಾನ ಭೂಮಿ ಲಭ್ಯವಿರುವುದಿಲ್ಲ. |
| ಇ) | ಸ್ಮಶಾನ ಭೂಮಿ ಲಭ್ಯವಿಲ್ಲದ ಗ್ರಾಮಗಳಲ್ಲಿ ಅಂತ್ಯಸಂಸ್ಕಾರ ನೆರವೇರಿಸಲು ಕೈಗೊಂಡಿರುವ ಕ್ರಮಗಳೇನು; ಸದರಿ ಗ್ರಾಮಗಳಲ್ಲಿ ಸ್ಮಶಾನ ಭೂಮಿಯನ್ನು ಇದುವರೆವಿಗೂ ಮಂಜೂರು ಮಾಡದಿರಲು ಕಾರಣಗಳೇನು; (ವಿವರ ನೀಡುವುದು) | ಸರ್ಕಾರಿ ಜಮೀನು ಲಭ್ಯವಿಲ್ಲದ ಕಾರಣ ಸ್ಮಶಾನಕ್ಕಾಗಿ ಭೂಮಿ ಕಾಯ್ದಿರಿಸಿರುವುದಿಲ್ಲ. |
| ಈ) | ಯಾವಾಗ ಸದರಿ ಗ್ರಾಮಗಳಿಗೆ ಸ್ಮಶಾನ ಭೂಮಿ ಮಂಜೂರು ಮಾಡಲಾಗುವುದು; ಅದಕ್ಕಾಗಿ ಸರ್ಕಾರ ಕೈಗೊಂಡಿರುವ ಕ್ರಮಗಳೇನು (ವಿವರ ನೀಡುವುದು) | ರುದ್ರಭೂಮಿ ಇಲ್ಲದಿರುವ ಗ್ರಾಮಗಳಲ್ಲಿ ಸರ್ಕಾರಿ ಜಮೀನು ಲಭ್ಯ ಇದ್ದಲ್ಲಿ ರುದ್ರಭೂಮಿಗೆ ಸರ್ಕಾರಿ ಜಮೀನು ಕಾಯ್ದಿರಿಸಲಾಗುವುದು. ಸರ್ಕಾರಿ ಜಮೀನು ಲಭ್ಯವಿಲ್ಲದಿದ್ದ ಪ್ರಕರಣಗಳಲ್ಲಿ ಅಗತ್ಯವಾದ ಖಾಸಗಿ ಜಮೀನನ್ನು ಭೂ ಮಾಲೀಕರಿಂದ ನೇರವಾಗಿ ಖರೀದಿಸಲು ಜಮೀನಿನ ಮಾರ್ಗಸೂಚಿ ಬೆಲೆಯ 3 ಪಟ್ಟು ಹೆಚ್ಚು ಬೆಲೆಯನ್ನು ನಿಗದಿಪಡಿಸುವ ಅಧಿಕಾರವನ್ನು ಜಿಲ್ಲಾಧಿಕಾರಿಗಳಿಗೆ ಪ್ರತ್ಯಾಯೋಜಿಸಿ ಸರ್ಕಾರದ ಸುತ್ತೋಲೆ ಸಂಖ್ಯೆ: ಆರ್‌ಡಿ 06 ಭೂಸ್ವಾವ್ಯಾ 2011, ದಿನಾಂಕ: 06.06.2012ರಲ್ಲಿ ಅವಕಾಶ ಕಲ್ಪಿಸಲಾಗಿದೆ. |
| ಉ) | ಹಾಲಿ ಇರುವ ಸ್ಮಶಾನ ಭೂಮಿ ಅಭಿವೃದ್ಧಿಗೆ ಸರ್ಕಾರ ಕೈಗೊಂಡಿರುವ ಕ್ರಮಗಳೇನು (ವಿವರ ನೀಡುವುದು) | ಸರ್ಕಾರದಿಂದ ಪ್ರತಿ ವರ್ಷ ಅನುದಾನ ಬಿಡುಗಡೆಯಾಗುತ್ತಿದ್ದು, ಈ ಅನುದಾನದಲ್ಲಿ ಸ್ಮಶಾನ ಭೂಮಿ ಅಭಿವೃದ್ಧಿಗೆ ಕ್ರಮ ಕೈಗೊಳ್ಳಲಾಗುತ್ತಿದೆ. |

ಸಂಖ್ಯೆ: ಆರ್‌ಡಿ 1 ಎಲ್‌ಜಿಜೆ 2021

(ಆರ್.ಅಶೋಕ್)
ಕಂದಾಯ ಸಚಿವರು

## ಕರ್ನಾಟಕ ವಿಧಾನಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 297 |
| ಸದಸ್ಯರ ಹೆಸರು | : | ಯಶವಂತರಾಯಗೌಡ ವಿಠ್ಠಲಗೌಡ ಪಾಟೀಲ್ (ಇಂಡಿ) |
| ಉತ್ತರಿಸುವ ಸಚಿವರು | : | ಕಂದಾಯ ಸಚಿವರು |
| ಉತ್ತರಿಸುವ ದಿನಾಂಕ | : | 01.02.2021 |

********

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಇಂಡಿ ಪಟ್ಟಣದಲ್ಲಿ ರೂ.10.00 ಕೋಟಿ ವೆಚ್ಚದಲ್ಲಿ ನಿರ್ಮಿಸಿರುವ 3 ಮಹಡಿಗಳ ಮಿನಿ ವಿಧಾನಸೌಧ ಕಟ್ಟಡದ ನಿರ್ವಹಣೆಯನ್ನು ಮಾಡಲು ಸೂಕ್ತ ಸಿಬ್ಬಂದಿ ಇಲ್ಲದೇ ಇರುವುದು ಹಾಗೂ ಅಂಗವಿಕಲರಿಗೆ, ವೃದ್ಧರು, ಅಶಕ್ತರಿಗೆ ಲಿಫ್ಟ್ ಯಂತ್ರವಿಲ್ಲದೇ ಇರುವುದರಿಂದ ಮೆಟ್ಟಿಲುಗಳ ಮೂಲಕ 3 ಮಹಡಿಗಳನ್ನು ಹತ್ತುವುದು ಕಷ್ಟವಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು |
| ಆ) | ಹಾಗಿದ್ದಲ್ಲಿ, ಲಿಫ್ಟ್ ಯಂತ್ರ ಅಳವಡಿಸಲು ಹಾಗೂ ಸದರಿ ಕಟ್ಟಡದ ಸ್ವಚ್ಛತೆ ಹಾಗೂ ನಿರ್ವಹಣೆಗೆ ಸೂಕ್ತ ಸಿಬ್ಬಂದಿ ವರ್ಗದವರನ್ನು ನೇಮಕ ಮಾಡಲು ಸರ್ಕಾರ ಆಸಕ್ತಿ ಹೊಂದಿದೆಯೇ; | ಲಿಫ್ಟ್ ಅಳವಡಿಸುವ ಪ್ರಸ್ತಾವನೆ ಜಿಲ್ಲಾಧಿಕಾರಿ, ವಿಜಯಪುರ ಇವರಿಂದ ಸ್ವೀಕೃತವಾಗಿದ್ದು, ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ ಪರಿಶೀಲನೆಯಲ್ಲಿದೆ. |
| ಇ) | ಸದರಿ ಕಟ್ಟಡದ ನಿರ್ವಹಣೆಗೆ ಸೂಕ್ತ ಸಿಬ್ಬಂದಿ ಹಾಗೂ ಲಿಫ್ಟ್ ಯಂತ್ರವನ್ನು ಅಳವಡಿಸಲು ಸರ್ಕಾರ ಕೈಗೊಳ್ಳುವ ಕ್ರಮಗಳೇನು; (ವಿವರ ನೀಡುವುದು) | ಜಿಲ್ಲಾಧಿಕಾರಿಗಳಿಗೆ ಪ್ರತ್ಯಾಯೋಜಿಸುವ ಅಧಿಕಾರದನ್ವಯ ಕಟ್ಟಡ ಸ್ವಚ್ಛತೆ ಮತ್ತು ನಿರ್ವಹಣೆಗಾಗಿ ಹೊರಗುತ್ತಿಗೆ ಆಧಾರದ ಮೇಲೆ ಸಿಬ್ಬಂದಿ ನೇಮಕ ಮಾಡಿಕೊಳ್ಳಲು ಅವಕಾಶ ಕಲ್ಪಿಸಲಾಗಿದೆ. |
| ಈ) | ಯಾವ ಕಾಲಮಿತಿಯೊಳಗೆ ಲಿಫ್ಟ್ ಯಂತ್ರ ಹಾಗೂ ನಿರ್ವಹಣಾ ಸಿಬ್ಬಂದಿಯನ್ನು ನೇಮಕ ಮಾಡಲಾಗುವುದು? (ವಿವರ ನೀಡುವುದು) | |

ಕಂಇ 13 ಡಬ್ಲ್ಯೂಬಿಆರ್ 2021

(ಆರ್. ಅಶೋಕ)
ಕಂದಾಯ ಸಚಿವರು

## ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 303 |
| ಸದಸ್ಯರ ಹೆಸರು | ಶ್ರೀ ಅಬ್ಬಯ್ಯ ಪ್ರಸಾದ್ |
| ಉತ್ತರಿಸುವ ದಿನಾಂಕ: | 01-02-2021 |
| ಉತ್ತರಿಸುವವರು | ಹಿಂದೂ ಧಾರ್ಮಿಕ ಮತ್ತು ಧರ್ಮಾದಾಯ ದತ್ತಿ ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು. |

| | ಪ್ರಶ್ನೆ | ಉತ್ತರ |
|---|---|---|
| ಅ | ಹುಬ್ಬಳ್ಳಿ-ಧಾರವಾಡ ಪೂರ್ವ ವ್ಯಾಪ್ತಿಯಲ್ಲಿ 2018 ರಿಂದ ಇಲ್ಲಿಯವರೆಗೆ ಎಷ್ಟು ಅನುದಾನ ಬಿಡುಗಡೆ ಮಾಡಲಾಗಿದೆ; (ವರ್ಷವಾರು ವಿವರ ನೀಡುವುದು.) | ಹುಬ್ಬಳ್ಳಿ ಧಾರವಾಡ ಪೂರ್ವ ವ್ಯಾಪ್ತಿಯಲ್ಲಿ 2018 ರಿಂದ 2020-21 ರವರೆಗೆ ಒಟ್ಟು ರೂ.113.01 ಲಕ್ಷಗಳ ಅನುದಾನ ಬಿಡುಗಡೆ ಮಾಡಲಾಗಿದೆ. ವಿವರ ಕೆಳಕಂಡಂತಿದೆ. |

(ರೂ.ಲಕ್ಷಗಳಲ್ಲಿ)

| ಯೋಜನೆ | 2018-19 | 2019-20 | 2020-21 |
|---|---|---|---|
| ದುರಸ್ಥಿ ಜೀರ್ಣೋದ್ಧಾರ/ಅಭಿವೃದ್ಧಿ | 0.00 | 0.00 | 83.00 |
| ಆರಾಧನಾ ಯೋಜನೆ | 4.24 | 4.24 | 3.30 |
| ಪರಿಶಿಷ್ಠ ಜಾತಿ ಉಪಯೋಜನೆ | 3.38 | 6.76 | 5.28 |
| ಗಿರಿಜನ ಉಪಯೋಜನೆ | 1.01 | 1.01 | 0.79 |
| ಒಟ್ಟು | 8.63 | 12.01 | 92.37 |

| | ಪ್ರಶ್ನೆ | ಉತ್ತರ |
|---|---|---|
| ಆ | ಅನುದಾನ ನೀಡಲು ಇರುವ ಅರ್ಹತೆ ಮತ್ತು ಮಾನದಂಡಗಳೇನು? (ವಿವರ ನೀಡುವುದು) | ದೇವಾಲಯಗಳ/ಧಾರ್ಮಿಕ ಸಂಸ್ಥೆಗಳ ಅಭಿವೃದ್ಧಿಗೆ ಅನುದಾನ ಬಿಡುಗಡೆ ಮಾಡಲು ಪ್ರತ್ಯೇಕ ಯೋಜನೆವಾರು ಆದೇಶಗಳಂತೆ ಮಾರ್ಗಸೂಚಿಗಳನ್ನು ಹೊರಡಿಸಲಾಗಿದೆ. ವಿವರ ಕೆಳಕಂಡಂತಿದೆ. |

| ಯೋಜನೆ | ಸರ್ಕಾರದ ಆದೇಶ ಸಂಖ್ಯೆ ದಿನಾಂಕ: |
|---|---|
| ದುರಸ್ಥಿ ಜೀರ್ಣೋದ್ಧಾರ/ಅಭಿವೃದ್ಧಿ | ಕಂಇ 95 ಮುಅಬಿ 2010, ದಿನಾಂಕ:20.09.2010 |
| ಆರಾಧನಾ ಯೋಜನೆ | ಕಂಇ 87 ಮುಅಬಿ 2010, ದಿನಾಂಕ:10.10.2008 & ಕಂಇ 208 ಮುಅಬಿ 2011, ದಿನಾಂಕ:14.09.2011 |
| ಪರಿಶಿಷ್ಠ ಜಾತಿ ಉಪಯೋಜನೆ ಮತ್ತು ಗಿರಿಜನ ಉಪಯೋಜನೆ | ಕಂಇ 189 ಮುಅಬಿ 2011, ದಿನಾಂಕ:19.09.2011 |

(ಸಂಖ್ಯೆ:ಕಂಇ 18 ಮುಸಪ್ರ 2021)

(ಕೋಟಾ ಶ್ರೀನಿವಾಸ ಪೂಜಾರಿ)
ಹಿಂದೂ ಧಾರ್ಮಿಕ ಮತ್ತು ಧರ್ಮಾದಾಯ ದತ್ತಿ
ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು.

# ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 304 |
| ಸದಸ್ಯರ ಹೆಸರು | : | ಶ್ರೀ ಅಬ್ಬಯ್ಯ ಪ್ರಸಾದ್ (ಹುಬ್ಬಳ್ಳಿ-ಧಾರವಾಡ ಪೂರ್ವ) |
| ಉತ್ತರಿಸುವ ದಿನಾಂಕ | : | 01.02.2021. |
| ಉತ್ತರಿಸುವ ಸಚಿವರು | : | ಉಪಮುಖ್ಯಮಂತ್ರಿ<br>ಲೋಕೋಪಯೋಗಿ ಇಲಾಖೆ |

| ಕ್ರ.ಸಂ. | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ರಾಷ್ಟ್ರೀಯ ಹೆದ್ದಾರಿ-4 ಹುಬ್ಬಳ್ಳಿ-ಧಾರವಾಡ ಬೈಪಾಸ್ ರಸ್ತೆಯಲ್ಲಿ ಅತಿ ಹೆಚ್ಚು ಅಪಘಾತ ಹಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ |
| ಆ) | ಬಂದಿದ್ದಲ್ಲಿ ಸದರಿ ಹೆದ್ದಾರಿ ರಸ್ತೆಗಳ ಕಾಮಗಾರಿಯನ್ನು ಕೈಗೊಂಡು ಅಭಿವೃದ್ಧಿ ಪಡಿಸಲಾಗುವುದೇ; | ಹುಬ್ಬಳ್ಳಿ-ಧಾರವಾಡ ಬೈಪಾಸ್ ರಸ್ತೆಯನ್ನು 06 ಪಥದ ರಸ್ತೆಯನ್ನಾಗಿ ಅಭಿವೃದ್ಧಿಪಡಿಸಲು NHAI ವತಿಯಿಂದ ವಿಸ್ತೃತ ಯೋಜನಾ ವರದಿ ತಯಾರಿಕೆಗೆ ಸಮಾಲೋಚಕನೆಯನ್ನು ನೇಮಿಸಲಾಗಿದ್ದು, ವರದಿ ತಯಾರಿಕೆ ಹಂತದಲ್ಲಿದೆ. ಸದರಿ ಕಾಮಗಾರಿಗೆ ಕೇಂದ್ರ ಭೂಸಾರಿಗೆ ಮತ್ತು ಹೆದ್ದಾರಿ ಸಚಿವಾಲಯ, ನವದೆಹಲಿ ವತಿಯಿಂದ ಅನುಮೋದನೆ ದೊರೆತ ಮೇಲೆ NHAI ವತಿಯಿಂದ ಕಾಮಗಾರಿ ಕೈಗೆತ್ತಿಕೊಳ್ಳಲಾಗುವುದು. |
| ಇ) | ಹಾಗಿಲ್ಲದಿದ್ದಲ್ಲಿ ವಿಳಂಬವಾಗಲು ಕಾರಣಗಳೇನು? | ಹಾಲಿ ಹುಬ್ಬಳ್ಳಿ-ಧಾರವಾಡ ಬೈಪಾಸ್ ನಿರ್ವಹಿಸುತ್ತಿರುವ ಗುತ್ತಿಗೆದಾರರು ಮತ್ತು ಕೇಂದ್ರ ರಸ್ತೆ ಸಾರಿಗೆ ಮತ್ತು ಹೆದ್ದಾರಿ ಸಚಿವಾಲಯ, ನವದೆಹಲಿ ನಡುವೆ ಏರ್ಪಟ್ಟಿರುವ ಕರಾರಿನಂತೆ 2024ರಲ್ಲಿಗೆ ಗುತ್ತಿಗೆದಾರ ಅವಧಿ ಮುಕ್ತಾಯವಾಗಲಿದೆ. ಅಲ್ಲಿಯವರೆಗೆ ಚಾಲ್ತಿಯಲ್ಲಿರುವ ಕರಾರು ಒಪ್ಪಂದಕ್ಕೆ ದಕ್ಕೆಯಾಗದಂತೆ 06 ಪಥದ ರಸ್ತೆ ಅಭಿವೃದ್ಧಿ ಕಾಮಗಾರಿ ಕೈಗೊಳ್ಳಬಹುದೆಂದು ಹಾಲಿ ಗುತ್ತಿಗೆದಾರರು ಸಮ್ಮತಿ ಪತ್ರ ನೀಡಿರುತ್ತಾರೆ ಹಾಗೂ ಈ ಬಗ್ಗೆ ರಾಜ್ಯ, ಕೇಂದ್ರ ಮತ್ತು ಗುತ್ತಿಗೆದಾರರ ಸಮಿತಿ ಸಭೆಯನ್ನು ಏರ್ಪಡಿಸಿ ಅಂತಿಮಗೊಳಿಸುವಂತೆ ಕೋರಿರುತ್ತಾರೆ.<br>ಅದರಂತೆ ಹಾಲಿ ಗುತ್ತಿಗೆದಾರರು ಮತ್ತು ಇಲಾಖೆ ನಡುವೆ ಯಾವುದೇ ವಿವಾದಗಳಿಗೆ ಆಸ್ಪದವಾಗದಂತೆ ಸಮಿತಿ ರಚಿಸಿ ಮೇಲ್ದರ್ಜೇಗೇರಿಸುವ ಕಾಮಗಾರಿ ಕೈಗೊಳ್ಳುವ ಬಗ್ಗೆ ಅಂತಿಮ ತೀರ್ಮಾನ ತೆಗೆದುಕೊಳ್ಳುವಂತೆ ಸರ್ಕಾರದಿಂದ ದಿನಾಂಕ:30.12.2020 ರಂದು ಕೇಂದ್ರ ರಸ್ತೆ ಸಾರಿಗೆ ಮತ್ತು ಹೆದ್ದಾರಿ ಸಚಿವಾಲಯಕ್ಕೆ ಪತ್ರ ಬರೆಯಲಾಗಿದೆ.<br>ಈ ಮಧ್ಯೆ ಹುಬ್ಬಳ್ಳಿ-ಧಾರವಾಡ ಬೈಪಾಸ್ ನಿರ್ವಹಿಸುತ್ತಿರುವ ಗುತ್ತಿಗೆದಾರರು ಎದುರಿಸುತ್ತಿರುವ ಹಲವು ಸಮಸ್ಯೆಗಳನ್ನು ರಾಜ್ಯ ಸರ್ಕಾರ ಬಗೆಹರಿಸಿ ವಿವಾದಮುಕ್ತ (encumbrance free) ಜಮೀನನ್ನು ಹಸ್ತಾಂತರಿಸುವಂತೆ ಭಾರತೀಯ ರಾಷ್ಟ್ರೀಯ ಹೆದ್ದಾರಿ ಪ್ರಾಧಿಕಾರದವರು ರಾಜ್ಯ ಸರ್ಕಾರವನ್ನು ಕೋರಿದ್ದು, ಈ ವಿಷಯವು ಸರ್ಕಾರದ ಪರಿಶೀಲನೆಯಲ್ಲಿದೆ. |

ಲೋಇ 17 ಎಲ್‌ಎಕ್ಯೂ 2021 (ಇ)

(ಗೋವಿಂದ ಎಂ. ಕಾರಜೋಳ)
ಉಪಮುಖ್ಯಮಂತ್ರಿ
ಲೋಕೋಪಯೋಗಿ ಇಲಾಖೆ.

ಕರ್ನಾಟಕ ವಿಧಾನಸಭೆ
15ನೇ ವಿಧಾನಸಭೆ
9ನೇ ಅಧಿವೇಶನ

| | | |
|---|---|---|
| ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ | : | 309 |
| ಸದಸ್ಯರ ಹೆಸರು | : | ಶ್ರೀ. ಬಂಡೆಪ್ಪ ಖಾಶೆಂಪುರ್ (ಬೀದರ್ ದಕ್ಷಿಣ) |
| ಉತ್ತರಿಸುವ ದಿನಾಂಕ | : | 01-02-2021 |
| ಉತ್ತರಿಸುವ ಸಚಿವರು | : | ಮಾನ್ಯ ಉಪಮುಖ್ಯಮಂತ್ರಿಗಳು ಹಾಗೂ ಲೋಕೋಪಯೋಗಿ ಸಚಿವರು |

| ಕ್ರ ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ಬೀದರ್ ದಕ್ಷಿಣ ಕ್ಷೇತ್ರದಲ್ಲಿ ಕಳೆದ ವರ್ಷ ಪ್ರವಾಹದಿಂದ ಹಾನಿಗೊಳಗಾದ ರಸ್ತೆಗಳು ಯಾವುವು ಹಾಗೂ ಎಷ್ಟು ಕಿ.ಮೀ. ರಸ್ತೆ ಹಾನಿಯಾಗಿದೆ? | 2019-20ನೇ ಸಾಲಿನಲ್ಲಿ ಬೀದರ್ ದಕ್ಷಿಣ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಪ್ರವಾಹದಿಂದ ಯಾವುದೇ ರಸ್ತೆಗಳು ಹಾನಿಯಾಗಿರುವುದಿಲ್ಲ.<br><br>2020-21ನೇ ಸಾಲಿನಲ್ಲಿ ಬೀದರ್ ದಕ್ಷಿಣ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಪ್ರವಾಹದಿಂದ ಹಾನಿಗೊಳಗಾಗಿರುವ ರಸ್ತೆಗಳ ವಿವರ ಹಾಗೂ ಸದರಿ ರಸ್ತೆಗಳನ್ನು ದುರಸ್ಥಿ ಪಡಿಸಲು ಒದಗಿಸಿದ ಅನುದಾನದ ವಿವರ ಕೆಳಕಂಡಂತಿದೆ. |
| ಆ) | ಪ್ರವಾಹದಿಂದ ಹಾನಿಯಾದ ರಸ್ತೆಗಳನ್ನು ಸರಿಪಡಿಸಲು ಕೈಗೊಂಡ ಕ್ರಮಗಳೇನು ಹಾಗೂ ಸದರಿ ರಸ್ತೆಗಳನ್ನು ಸರಿಪಡಿಸಲು ಮಂಜೂರು ಮಾಡಲಾದ ಅನುದಾನವೆಷ್ಟು? | (see table below) |
| ಇ) | ಸದರಿ ರಸ್ತೆಗಳನ್ನು ಸರಿಪಡಿಸಲು ಅವಶ್ಯಕವಿರುವ ಅನುದಾನವನ್ನು ಯಾವಾಗ ಬಿಡುಗಡೆ ಮಾಡಲಾಗುವುದು? | |
| ಈ) | ಈ ರಸ್ತೆಗಳನ್ನು ಯಾವ ಕಾಲಮಿತಿಯೊಳಗೆ ಸರಿಪಡಿಸಲಾಗುವುದು? | ಮೇಲ್ಕಂಡ ಕಾಮಗಾರಿಗಳಿಗೆ ಈಗಾಗಲೇ ಗುತ್ತಿಗೆ ನಿಗಧಿಪಡಿಸಲಾಗಿದ್ದು, ಸದರಿ ಕಾಮಗಾರಿಗಳನ್ನು 2020-21ನೇ ಸಾಲಿನ ಆರ್ಥಿಕ ವರ್ಷದಲ್ಲಿಯೇ ಪೂರ್ಣಗೊಳಿಸಲಾಗುವುದು. |

(ರೂ.ಲಕ್ಷಗಳಲ್ಲಿ)

| ಕ್ರ ಸಂ | ಹಾನಿಗೊಳಗಾಗಿರುವ ರಸ್ತೆಯ ವಿವರ | ಉದ್ದ (ಕಿ.ಮೀ) | ಅನುದಾನ |
|---|---|---|---|
| 1) | ಎಸ್.ಹೆಚ್-9 ರ ಕಿ.ಮೀ. 412.20 ರಿಂದ 415.20 (ಮೀನಕೇರಾ ಕ್ರಾಸ್‌ದಿಂದ ನೂರ್ ಫಂಕ್ಷನ್ ಹಾಲ್) ಮನ್ನಾಎಖೆಳ್ಳಿ ಗ್ರಾಮ ವ್ಯಾಪ್ತಿ ರಸ್ತೆ. (ಜಿಮುರ) | 3.00 | 12.50 |
| 2) | ಚಿಟಗುಪ್ಪ-ಬೇಮಳಖೇಡಾ ರಸ್ತೆಯ ಕಿ.ಮೀ. 0.00 ರಿಂದ 28.00 ರವರೆಗೆ ಆಯ್ದ ಭಾಗಗಳು. (ಜಿಮುರ) | 3.00 | 11.50 |
| 3) | ಚಾಂಗ್ಲೆರ್ ದಿಂದ ಮುತ್ತಂಗಿ ರಸ್ತೆ ಕಿ.ಮೀ. 0.00 ರಿಂದ 7.50 ರವರೆಗೆ ಆಯ್ದ ಭಾಗಗಳು. (ಜಿಮುರ) | 1.50 | 6.00 |
| 4) | ಕಮಠಾಣಾ-ಹಾಲಳ್ಳಿ ವಾಯಾ ಬಾವಗಿ ರಸ್ತೆ ಕಿ.ಮೀ. 10.10 ರಿಂದ 10.50 ರವರೆಗೆ. (ಜಿಮುರ) | 0.40 | 6.50 |
| 5) | ಮನ್ನಾಎಖೆಳ್ಳಿ-ಚೆಣೆರಂಜೋಳ್ ರಸ್ತೆ ಕಿ.ಮೀ. 4.30 ಮತ್ತು 5.00 ರಲ್ಲಿನ ಅಡ್ಡಮೋರಿಗಳು. (ಜಿಮುರ) | 2 ಸಂಖ್ಯೆ | 10.00 |
| | | ಒಟ್ಟು | 46.50 |

ಲೋಇ/103/ಐಎಫ್ಎ/2021

(ಗೋವಿಂದ ಎಂ ಕಾರಜೋಳ)
ಉಪಮುಖ್ಯಮಂತ್ರಿಗಳು ಹಾಗೂ
ಲೋಕೋಪಯೋಗಿ ಸಚಿವರು

## ಕರ್ನಾಟಕ ವಿಧಾನಸಭೆ

| | | |
|---|---|---|
| 1 | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 310 |
| 2 | ಸದಸ್ಯರ ಹೆಸರು | ಶ್ರೀ ಬಂಡೆಪ್ಪ ಖಾಶೆಂಪುರ್ (ಬೀದರ್ ದಕ್ಷಿಣ) |
| 3 | ವಿಷಯ | ದಾಖಲೆರಹಿತ ಕಂದಾಯ ಗ್ರಾಮಗಳು |
| 4 | ಉತ್ತರಿಸಬೇಕಾದ ದಿನಾಂಕ | 01/02/2021 |
| 5 | ಉತ್ತರಿಸುವ ಸಚಿವರು | ಮಾನ್ಯ ಕಂದಾಯ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಬೀದರ್ ದಕ್ಷಿಣ ಕ್ಷೇತ್ರದಲ್ಲಿ ವಿಠಲಪೂರ ಗ್ರಾಮವನ್ನು ಕಂದಾಯ ಗ್ರಾಮವನ್ನಾಗಿ ಘೋಷಿಸಲಾಗಿದೆಯೇ; | ಹೌದು.<br>ಕಂಇ 196 ಕಂಗ್ರಾರ 2016, ದಿನಾಂಕ: 19.10.2017 ರಂದು ಅಂತಿಮ ಅಧಿಸೂಚನೆ ಹೊರಡಿಸಲಾಗಿದೆ. |
| ಆ) | ಕಂದಾಯ ಗ್ರಾಮವನ್ನಾಗಿ ಘೋಷಿಸಲು ಇರುವ ಮಾನದಂಡಗಳೇನು; | ಕುಟುಂಬಗಳ ಸಂಖ್ಯೆ ಸುಮಾರು 50 ಅಥವಾ ಜನಸಂಖ್ಯೆ ಸುಮಾರು 250ನ್ನು ಹೊಂದಿರುವ ದಾಖಲೆರಹಿತ ಜನವಸತಿ ಪ್ರದೇಶಗಳು. ಗ್ರಾಮಕ್ಕಿರಬೇಕಾದ ಜಮೀನಿನ ವಿಸ್ತೀರ್ಣ ಕನಿಷ್ಠ ಸುಮಾರು 100 ಎಕರೆ ಅಥವಾ ಅದಕ್ಕೆ ಮೇಲ್ಪಟ್ಟು-(ಈ ಷರತ್ತನ್ನು ಬೆಟ್ಟಗುಡ್ಡಗಳ ತಪ್ಪಲು ಮತ್ತು ಅರಣ್ಯ ಪ್ರದೇಶದೊಳಗಿನ ಜನವಸತಿ ಪ್ರದೇಶಗಳ ಪ್ರಕರಣದಲ್ಲಿ ಸಕಾರಣದ ಸಮೇತ ಸಡಿಲಿಸಬಹುದು) ಮೂಲ ಗ್ರಾಮಠಾಣಾಕ್ಕೆ ಹೊಂದಿಕೊಂಡಿರಬಾರದು (ಅಂದಾಜು 1 ಕಿ.ಮೀ. ಅಂತರ ಸೂಕ್ತ) |
| ಇ) | ವಿಠಲಪೂರ ಗ್ರಾಮವು ಎಲ್ಲಾ ಮಾನದಂಡಗಳನ್ನು ಹೊಂದಿದ್ದರೂ, ಕಂದಾಯ ಗ್ರಾಮವನ್ನಾಗಿ ಘೋಷಿಸದಿರಲು ಕಾರಣಗಳೇನು; | ಈಗಾಗಲೇ ವಿಠಲಾಪುರ ಗ್ರಾಮವನ್ನು ಕಂಇ 196 ಕಂಗ್ರಾರ 2016, ದಿನಾಂಕ: 19.10.2017 ರಂದು ಕಂದಾಯ ಗ್ರಾಮವಾಗಿ ಪರಿವರ್ತಿಸಿ ಅಂತಿಮ ಅಧಿಸೂಚನೆ ಹೊರಡಿಸಲಾಗಿದೆ. |
| ಈ) | ಹಾಗಿದ್ದಲ್ಲಿ ವಿಠಲಪೂರ ಗ್ರಾಮವನ್ನು ಯಾವಾಗ ಕಂದಾಯ ಗ್ರಾಮವನ್ನಾಗಿ ಘೋಷಿಸಲಾಗುವುದು? | ಈಗಾಗಲೇ ಕಂದಾಯ ಗ್ರಾಮವಾಗಿ ಘೋಷಿಸಲಾಗಿದೆ. |

ಕಂಇ 01 ಪಿಎಲ್‌ಸಿ 2021

(ಆರ್. ಅಶೋಕ್)
ಕಂದಾಯ ಸಚಿವರು

**ಕರ್ನಾಟಕ ವಿಧಾನಸಭೆ**
**15ನೇ ವಿಧಾನಸಭೆ**
**9ನೇ ಅಧಿವೇಶನ**

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 313 |
| ಮಾನ್ಯ ಸದಸ್ಯರ ಹೆಸರು | : | ಶ್ರೀ. ಶಿವಾನಂದ ಎಸ್. ಪಾಟೀಲ್ (ಬಸವನಬಾಗೇವಾಡಿ) |
| ಉತ್ತರಿಸುವ ದಿನಾಂಕ | : | 01-02-2021 |
| ಉತ್ತರಿಸುವ ಸಚಿವರು | : | ಮಾನ್ಯ ಉಪ ಮುಖ್ಯಮಂತ್ರಿಗಳು, (ಲೋಕೋಪಯೋಗಿ ಸಚಿವರು) |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ವಿಜಯಪುರ ಜಿಲ್ಲೆಯ ಬಸವನ ಬಾಗೇವಾಡಿ ಪಟ್ಟಣದಲ್ಲಿ ಲೋಕೋಪಯೋಗಿ ಇಲಾಖೆಯ ಸೇತುವೆ ಮಂಜೂರಾಗಿದೆಯೇ; | ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತದ ವತಿಯಿಂದ ಕಿರು ಸೇತುವೆ ಪ್ಯಾಕೇಜ್ A1ನಲ್ಲಿ 28 ಸೇತುವೆ ನಿರ್ಮಾಣ ಕಾಮಗಾರಿಗಳು ಒಳಗೊಂಡಿದ್ದು, ಇವುಗಳಲ್ಲಿ ವಿಜಯಪುರ ಜಿಲ್ಲೆಯ 8 ಸೇತುವೆಗಳಲ್ಲಿ ಬಸವನ ಬಾಗೇವಾಡಿ ತಾಲ್ಲೂಕು ಬಾರಖೇಡ್ – ಬೀಳಗಿ ರಸ್ತೆಯ ಕಿಮೀ 0.5 ರಲ್ಲಿ ಸೇತುವೆ ಕಾಮಗಾರಿಯು ರೂ.2.86 ಕೋಟಿಗಳ ಮೊತ್ತಕ್ಕೆ ಮಂಜೂರಾಗಿರುತ್ತದೆ. |
| ಆ) | ಹಾಗಿದ್ದಲ್ಲಿ, ಮಂಜೂರಾದ ಸದರಿ ಸೇತುವೆ ಕೆಲಸವನ್ನು ಯಾವ ಗುತ್ತಿಗೆದಾರರು ನಿರ್ಮಿಸುತ್ತಿದ್ದಾರೆ; | ಮೆ॥ ಕೆ.ಎಂ.ವಿ ಪ್ರಾಜೆಕ್ಟ್ಸ್ ಹೈದಾರಬಾದ್ ರವರಿಗೆ ಸೇತುವೆ ಕಾಮಗಾರಿಯನ್ನು ಟೆಂಡರ್ ಮುಖೇನ ಗುತ್ತಿಗೆ ವಹಿಸಲಾಗಿದೆ. |
| ಇ) | ಪ್ರಸ್ತುತ ಸೇತುವೆ ಕಾಮಗಾರಿ ಪ್ರಗತಿಯು ಯಾವ ಹಂತದಲ್ಲಿದೆ; ಪೂರ್ಣಗೊಳಿಸಲು ಆಗಿರುವ ವಿಳಂಬಕ್ಕೆ ಕಾರಣಗಳೇನು? | ಸೇತುವೆಯ ಭಾಗವು ಪೂರ್ಣಗೊಂಡಿದ್ದು, ಸೇತುವೆಯ ಅಪ್ರೋಚ್ ರಸ್ತೆಯ ಜಿ.ಎಸ್.ಬಿ ಕಾಮಗಾರಿಯು ಪೂರ್ಣಗೊಂಡಿದ್ದು, ರಿಜಿಡ್‌ಪೇವ್‌ಮೆಂಟ್ ಕಾಂಕ್ರೀಟ್ ರಸ್ತೆ ನಿರ್ಮಾಣ ಮಾಡಬೇಕಾಗಿರುತ್ತದೆ. ಕೋವಿಡ್ 19 ರ ಸಾಂಕ್ರಾಮಿಕದ ಲಾಕ್‌ಡೌನ್‌ನಿಂದಾಗಿ, ಕಾರ್ಮಿಕರ ಹಾಗೂ ಸಾಮಾಗ್ರಿಗಳ ಕೊರತೆ ಹಾಗೂ ಅಧಿಕ ಮಳೆಯಿಂದಲೂ ಸಹ ಕಾಮಗಾರಿ ವಿಳಂಬವಾಗಿರುತ್ತದೆ. ಕಾಮಗಾರಿಯನ್ನು ನಿಗದಿತ ಅವಧಿಯೊಳಗೆ ಪೂರ್ಣಗೊಳಿಸದಿರುವುದಕ್ಕೆ ನಿಯಮಾನುಸಾರ ಗುತ್ತಿಗೆದಾರರ ಮೇಲೆ ಕ್ರಮ ವಹಿಸಲಾಗುತ್ತದೆ. ಕಾಮಗಾರಿಯನ್ನು ತ್ವರಿತವಾಗಿ ಪೂರ್ಣಗೊಳಿಸಲು ಯೋಜಿಸಲಾಗಿದೆ. |

ಸಂಖ್ಯೆ: ಲೋಇ E-40 ಇಎಪಿ 2021

(ಗೋವಿಂದ ಎಂ. ಕಾರಜೋಳ)
ಮಾನ್ಯ ಉಪ ಮುಖ್ಯಮಂತ್ರಿಗಳು,
ಲೋಕೋಪಯೋಗಿ ಇಲಾಖೆ

**ಕರ್ನಾಟಕ ವಿಧಾನಸಭೆ**
**15ನೇ ವಿಧಾನಸಭೆ**
**9ನೇ ಅಧಿವೇಶನ**

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 316 |
| ಮಾನ್ಯ ಸದಸ್ಯರ ಹೆಸರು | : | ಶ್ರೀ. ಶಿವಾನಂದ ಎಸ್. ಪಾಟೀಲ್ (ಬಸವನಬಾಗೇವಾಡಿ) |
| ಉತ್ತರಿಸುವ ದಿನಾಂಕ | : | 01-02-2021 |
| ಉತ್ತರಿಸುವ ಸಚಿವರು | : | ಮಾನ್ಯ ಉಪ ಮುಖ್ಯಮಂತ್ರಿಗಳು, (ಲೋಕೋಪಯೋಗಿ ಸಚಿವರು) |

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| ಅ) | ವಿಜಯಪುರ ಜಿಲ್ಲೆಯ ಬಸವನ ಬಾಗೇವಾಡಿ ತಾಲ್ಲೂಕಿನ ಡೋಣೂರ ಹತ್ತಿರ ಡೋಣಿ ನದಿಗೆ ಸೇತುವೆ ನಿರ್ಮಿಸುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; | ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತ ವತಿಯಿಂದ ಒಟ್ಟು 504 ಸೇತುವೆಗಳ ಪಟ್ಟಿಯನ್ನು ಅನುಮೋದನೆಗಾಗಿ ಆರ್ಥಿಕ ಇಲಾಖೆಗೆ ಸಲ್ಲಿಸಲಾಗಿದ್ದು, ಸದರಿ ಪಟ್ಟಿಯಲ್ಲಿ ವಿಜಯಪುರ ಜಿಲ್ಲೆಯ ಬಸವನ ಬಾಗೇವಾಡಿ ತಾಲ್ಲೂಕಿನ ಡೋಣೂರ ಹತ್ತಿರ ಡೋಣಿ ನದಿಗೆ ಸೇತುವೆ ನಿರ್ಮಿಸುವ ಪ್ರಸ್ತಾವನೆಯು ಸೇರಿರುತ್ತದೆ. ಆರ್ಥಿಕ ಇಲಾಖೆಯು ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದ್ದು, ಹಿಂಬರಹ ಸಂಖ್ಯೆ: FD 208 FC-2/2020, ದಿನಾಂಕ: 11-09-2020 ರಲ್ಲಿ ಈ ಕೆಳಗಿನಂತೆ ತಿಳಿಸಿರುತ್ತದೆ.<br><br>"The outstanding commitments of KRDCL are already being very high. Hence, Administrative Department is advised not to take up any new works till the previous works are completed and closed financially"<br><br>ಅದರಂತೆ, ಸದರಿ ಕಾಮಗಾರಿಗಳನ್ನು ಕೈಬಿಡಲಾಗಿದೆ. |
| ಆ) | ಹಾಗಿದ್ದಲ್ಲಿ, ಸೇತುವೆ ನಿರ್ಮಿಸಲು ಕೈಗೊಂಡಿರುವ ಕ್ರಮಗಳೇನು; | |
| ಇ) | ಇದಕ್ಕಾಗಿ ತಗಲುವ ವೆಚ್ಚ ಎಷ್ಟು; ಯಾವ ಕಾಲಮಿತಿಯೊಳಗೆ ಸೇತುವೆ ನಿರ್ಮಿಸಲಾಗುವುದು? | |

ಸಂಖ್ಯೆ. ಲೋಇ E-31 ಇಎಪಿ 2021

(ಗೋವಿಂದ ಎಂ. ಕಾರಜೋಳ)
ಮಾನ್ಯ ಉಪ ಮುಖ್ಯಮಂತ್ರಿಗಳು,
ಲೋಕೋಪಯೋಗಿ ಇಲಾಖೆ

## ಕರ್ನಾಟಕ ವಿಧಾನ ಸಭೆ

| | | |
|---|---|---|
| ಮಾನ್ಯ ಸದಸ್ಯರ ಹೆಸರು | : | ಶ್ರೀ ಖಾದರ್ ಯು.ಟಿ. (ಮಂಗಳೂರು) |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | **318** |
| ಉತ್ತರಿಸಬೇಕಾದ ದಿನಾಂಕ | : | 01.02.2021 |
| ಉತ್ತರಿಸಬೇಕಾದ ಸಚಿವರು | : | ವಸತಿ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ವಿವಿಧ ವಸತಿ ಯೋಜನೆಯಡಿ ಪ್ರತಿ ಗ್ರಾಮ ಪಂಚಾಯಿತಿಗೆ 20 ಮನೆಗಳಂತೆ ಅರ್ಹ ಫಲಾನುಭವಿಗಳನ್ನು ಆಯ್ಕೆ ಮಾಡುವ ಪ್ರಕ್ರಿಯೆ ಪೂರ್ಣಗೊಂಡಿದೆಯೇ ; | ಪ್ರತಿ ಪಂಚಾಯಿತಿಗೆ 20 ಮನೆಗಳಂತೆ ಅರ್ಹ ಫಲಾನುಭವಿಗಳನ್ನು ಆಯ್ಕೆ ಮಾಡುವ ಪ್ರಕ್ರಿಯೆಗೆ ಸಂಬಂಧಿಸಿದಂತೆ ಸರ್ಕಾರದ ಸುತ್ತೋಲೆ ಸಂಖ್ಯೆ:ವಇ 8 ಹೆಚ್ಎಮ್ಮೆ 2020, ದಿನಾಂಕ: 09.11.2020 ರಲ್ಲಿ ಫಲಾನುಭವಿಗಳ ಆಯ್ಕೆ, ಮೀಸಲಾತಿ ಬಗ್ಗೆ ಮಾರ್ಗಸೂಚಿಯನ್ನು ಹೊರಡಿಸಿದ್ದು, ಅದರನ್ವಯ ಫಲಾನುಭವಿಗಳ ಆಯ್ಕೆ ಪ್ರಕ್ರಿಯೆ ಪ್ರಗತಿಯಲ್ಲಿದೆ. |
| (ಆ) | ಪೂರ್ಣಗೊಂಡಿದ್ದಲ್ಲಿ ಇಲ್ಲಿಯವರೆಗೆ ಮನೆ ನಿರ್ಮಾಣಕ್ಕೆ ಆದೇಶ ನೀಡದಿರಲು ಕಾರಣವೇನು ? | ಉದ್ಭವಿಸುವುದಿಲ್ಲ. |

ಸಂಖ್ಯೆ :ವಇ ಹೆಚ್ಎಎಂ 2021

(ವಿ. ಸೋಮಣ್ಣ)
ವಸತಿ ಸಚಿವರು

# ಕರ್ನಾಟಕ ವಿಧಾನಸಭೆ

1) ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 320

2) ಸದಸ್ಯರ ಹೆಸರು ಶ್ರೀ ಖಾದರ್ ಯು.ಟಿ. (ಮಂಗಳೂರು)

3) ಉತ್ತರಿಸಬೇಕಾದ ದಿನಾಂಕ 01-02-2021

4) ಉತ್ತರಿಸಬೇಕಾದ ಸಚಿವರು ಮಾನ್ಯ ಮೀನುಗಾರಿಕೆ ಹಾಗೂ ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವರು

| | ಪ್ರಶ್ನೆ | ಉತ್ತರ |
|---|---|---|
| ಅ) | ಮೀನುಗಾರಿಕೆ ಕಿಸಾನ್ ಕ್ರೆಡಿಟ್ ಕಾರ್ಡ್ ವಿತರಿಸುವ ಉದ್ದೇಶ ಸರ್ಕಾರದ ಮುಂದಿದೆಯೇ; | ಹೌದು. |
| ಆ) | ಹಾಗಿದ್ದಲ್ಲಿ, ಈ ಪ್ರಕ್ರಿಯೆಯು ಯಾವ ಹಂತದಲ್ಲಿದೆ? (ವಿವರ ನೀಡುವುದು) | ಮೀನುಗಾರಿಕೆ ಕಿಸಾನ್ ಕ್ರೆಡಿಟ್ ಕಾರ್ಡ್ ಯೋಜನೆಯನ್ನು 2019-20ನೇ ಸಾಲಿನಿಂದ ಅನುಷ್ಠಾನಗೊಳಿಸಲಾಗುತ್ತಿದೆ. ಈ ಯೋಜನೆ ಯಡಿಯಲ್ಲಿ ಇಲ್ಲಿಯವರೆಗೆ ಒಟ್ಟು 15480 ಕಿಸಾನ್ ಕ್ರೆಡಿಟ್ ಕಾರ್ಡ್ ಅರ್ಜಿಗಳು ಸ್ವೀಕೃತವಾಗಿರುತ್ತದೆ. ಈ ಪೈಕಿ 4169 ಮೀನುಗಾರರಿಗೆ ವಿವಿಧ ಬ್ಯಾಂಕುಗಳಿಂದ ಕಿಸಾನ್ ಕ್ರೆಡಿಟ್ ಕಾರ್ಡ್ ಗಳನ್ನು ವಿತರಿಸಲಾಗಿದ್ದು, ಇವುಗಳಿಂದ ಒಟ್ಟು ರೂ.1,616.04 ಲಕ್ಷಗಳನ್ನು ಜನವರಿ 2021ರ ಅಂತ್ಯಕ್ಕೆ ಕ್ರೆಡಿಟ್ ಸೌಲಭ್ಯವಾಗಿ ಪಡೆದಿರುತ್ತಾರೆ. |

ಸಂಖ್ಯೆ: ಪಸಂಮೀ ಇ-38 ಮೀಇಯೋ 2021

(ಎಸ್. ಅಂಗಾರ)
ಮೀನುಗಾರಿಕೆ ಹಾಗೂ
ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವರು

## ಕರ್ನಾಟಕ ವಿಧಾನ ಸಭೆ

| | | |
|---|---|---|
| ಮಾನ್ಯ ಸದಸ್ಯರ ಹೆಸರು | : | ಶ್ರೀ ಹಾಲಪ್ಪ ಹರತಾಳ್ ಹೆಚ್.(ಸಾಗರ) |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | **327** |
| ಉತ್ತರಿಸಬೇಕಾದ ದಿನಾಂಕ | : | 01.02.2021 |
| ಉತ್ತರಿಸಬೇಕಾದ ಸಚಿವರು | : | ವಸತಿ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ರಾಜ್ಯದಲ್ಲಿ 2018-19 ನೇ ಸಾಲಿನಲ್ಲಿ ಬಸವ ಆಶ್ರಯ ವಸತಿ ಯೋಜನೆಯಡಿಯಲ್ಲಿ ಗ್ರಾಮ ಸಭೆಗಳ ಆಶ್ರಯ ಮನೆಗಳನ್ನು ಆಯ್ಕೆಮಾಡಿ ಅನುಮೋದನೆಗೆ ಸಲ್ಲಿಸಿರುವುದು ಸರಕಾರದ ಗಮನಕ್ಕೆ ಬಂದಿದೆಯೇ ; | ಬಂದಿದೆ |
| (ಆ) | ಸದರಿ ಮನೆಗಳಿಗೆ ಅನುಮೋದನೆ ನೀಡಿ, ಅನುದಾನ ಬಿಡುಗಡೆ ಮಾಡದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ; | ರಾಜ್ಯದಲ್ಲಿ 2018-19 ನೇ ಸಾಲಿನ ಬಸವ ವಸತಿ ಯೋಜನೆಯಡಿ ಸರ್ಕಾರದಿಂದ ಒಟ್ಟು 154520 ಗುರಿ ನೀಡಲಾಗಿತ್ತು. ತದನಂತರ ಸರ್ಕಾರದ ಆದೇಶ ಸಂಖ್ಯೆ:ವಇ 12 ಹೆಚ್‌ಎಹೆಚ್ 2020, ದಿನಾಂಕ:19.05.2020 ರನ್ವಯ ಬಸವ ವಸತಿ, ಡಾ|| ಬಿ.ಆರ್ ಅಂಬೇಡ್ಕರ್ ನಿವಾಸ್ ಮತ್ತು ವಾಜಪೇಯಿ ನಗರ ವಸತಿ ಯೋಜನೆಯಡಿಯಲ್ಲಿ ಆಯ್ಕೆಯಾಗದ ಮತ್ತು ಆಯ್ಕೆಯಾಗಿ ವಿವಿಧ ಲಾಗಿನ್ ಹಂತದಲ್ಲಿರುವ ಹಾಗೂ ನಿಗದಿತ ಸಮಯದೊಳಗೆ ಮನೆ ಪ್ರಾರಂಭ ಮಾಡಿಕೊಳ್ಳದೇ ಬ್ಲಾಕ್ ಮಾಡಲಾದ ಮನೆಗಳನ್ನು ರದ್ದುಪಡಿಸಲಾಗಿದೆ.<br><br>2018-19 ನೇ ಸಾಲಿಗೆ ನೀಡಲಾದ ಗುರಿಗೆ ಎದುರಾಗಿ 467 ಫಲಾನುಭವಿಗಳನ್ನು ಆಯ್ಕೆಗೊಳಿಸಿ ಅನುಮೋದನೆ ನೀಡಲಾಗಿದ್ದು, ಈ ಮಂಜೂರಾತಿಯಾಗಿರುವ ಮನೆಗಳಿಗೆ ಸಂಬಂಧಪಟ್ಟಂತೆ 'ಇಂದಿರಾ ಮನೆ' ಮೊಬೈಲ್ ಆಪ್ ಮೂಲಕ ಮನೆಗಳ ಪ್ರಗತಿಯನ್ನು ಜಿ.ಪಿ.ಎಸ್ ಗೆ ಅಳವಡಿಸಿ ಅರ್ಹಗೊಂಡ ನಂತರ ಸದರಿ ಮನೆಗಳ ಪ್ರಗತಿಯನ್ನು ಮತ್ತೊಮ್ಮೆ Geo ಆಧಾರಿತ Vigil App ಮೂಲಕ ಗ್ರಾಮೀಣ ಪ್ರದೇಶದಲ್ಲಿ ಮುಖ್ಯ ಕಾರ್ಯ ನಿರ್ವಹಣಾಧಿಕಾರಿಯವರು, ಜಿಲ್ಲಾ ಪಂಚಾಯತಿ ಹಾಗೂ ನಗರ ಪ್ರದೇಶದಲ್ಲಿ ಜಿಲ್ಲಾಧಿಕಾರಿಗಳು ಪರಿಶೀಲಿಸಿ, ಅನುದಾನ ಬಿಡುಗಡೆಗೆ ಶಿಫಾರಸ್ಸು ಮಾಡಿರುವ ಮನೆಗಳಿಗೆ ಹಾಗೂ ಆಧಾರ್ ಜೋಡಣೆಯಾದ ಫಲಾನುಭವಿಗಳ ಬ್ಯಾಂಕ್ ಖಾತೆಗಳಿಗೆ ನೇರವಾಗಿ ಅನುದಾನ ಬಿಡುಗಡೆ ಮಾಡಲಾಗುತ್ತಿದೆ.<br><br>ರಾಜ್ಯದಲ್ಲಿ 2018-19 ನೇ ಸಾಲಿನ ಬಸವ ವಸತಿ ಯೋಜನೆಯಡಿ ಸರ್ಕಾರದಿಂದ ನಿಗದಿಪಡಿಸಿದ ಗುರಿಗೆ ಎದುರಾಗಿ ಮಂಜೂರಾತಿ ಪಡೆದ ಫಲಾನುಭವಿಗಳಿಗೆ ಭೌತಿಕ ಪ್ರಗತಿಗನುಗುಣವಾಗಿ ಈವರೆಗೂ ರೂ.1.21 ಕೋಟಿಗಳನ್ನು ಬಿಡುಗಡೆ ಮಾಡಲಾಗಿದೆ. |
| (ಇ) | ಸದರಿ ಮನೆಗಳಿಗೆ ಅನುಮೋದನೆ ನೀಡಿ ಅನುದಾನ ಬಿಡುಗಡೆ ಮಾಡಲು ಸರ್ಕಾರಕ್ಕಿರುವ ತೊಂದರೆಗಳೇನು ; (ವಿವರ ಒದಗಿಸುವುದು) | |
| (ಈ) | ಈ ಬಗ್ಗೆ ಕೈಗೊಂಡ ಕ್ರಮಗಳೇನು ? (ವಿವರ ಒದಗಿಸುವುದು) | |

ಸಂಖ್ಯೆ :ವಇ 43 ಹೆಚ್‌ಎಎಂ 2021

(ವಿ. ಸೋಮಣ್ಣ)
ವಸತಿ ಸಚಿವರು

# ಕರ್ನಾಟಕ ವಿಧಾನಸಭೆ

| | |
|---|---|
| ಮಾನ್ಯ ಸದಸ್ಯರ ಹೆಸರು | ಶ್ರೀ ಕರುಣಾಕರ ರೆಡ್ಡಿ ಜಿ. (ಹರಪನಹಳ್ಳಿ) |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 329 |
| ಉತ್ತರಿಸಬೇಕಾದ ದಿನಾಂಕ | 01.02.2021 |
| ಉತ್ತರಿಸಬೇಕಾದ ಸಚಿವರು | ವಸತಿ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | 2018ನೇ ಸಾಲಿನಲ್ಲಿ ಕೇಂದ್ರ ಸರ್ಕಾರದ ಪಿ.ಎಂ.ಎ.ವೈ. ಯೋಜನೆಯಡಿಯಲ್ಲಿ ಮನೆಗಳನ್ನು ನಿರ್ಮಾಣ ಮಾಡಲು ರೂ.25 ಕೋಟಿ ಅನುದಾನ ಮಂಜೂರು ಮಾಡಲು ಘೋಷಣೆಯಾಗಿದ್ದು, ಅದರಂತೆ ಫಲಾನುಭವಿಗಳಿಗೆ ನೋಂದಣಿ ಮಾಡಿಕೊಂಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ; | 2018 ನೇ ಸಾಲಿನಲ್ಲಿ ಕೇಂದ್ರ ಸರ್ಕಾರದ ಪಿ.ಎಂ.ಎ.ವೈ ಯೋಜನೆಯಡಿಯಲ್ಲಿ ಮನೆಗಳನ್ನು ನಿರ್ಮಾಣ ಮಾಡಲು ರೂ. 25.00 ಕೋಟಿ ಅನುದಾನ ಮಂಜೂರು ಮಾಡಿ ಘೋಷಣೆಯಾಗಿ ಫಲಾನುಭವಿಗಳಿಗೆ ನೋಂದಣಿ ಮಾಡಿಕೊಡುವ ಯಾವುದೇ ಪ್ರಸ್ತಾವನೆಯು ಸರ್ಕಾರದ ಮುಂದೆ ಇರುವುದಿಲ್ಲ. |
| (ಆ) | ಬಂದಿದ್ದಲ್ಲಿ, ಇದುವರೆಗೂ ಫಲಾನುಭವಿಗಳಿಗೆ ಹಣ ಬಿಡುಗಡೆಯಾಗದೇ ಇರುವುದಕ್ಕೆ ಕಾರಣವೇನು ? (ಸಂಪೂರ್ಣ ವಿವರ ನೀಡುವುದು) | ಅನ್ವಯಿಸುವುದಿಲ್ಲ. |

ಸಂಖ್ಯೆ: ವಇ 21 ಹೆಚ್‌ಎಫ್‌ಎ 2021

(ವಿ. ಸೋಮಣ್ಣ)
ವಸತಿ ಸಚಿವರು

# ಕರ್ನಾಟಕ ವಿಧಾನ ಸಭೆ

| | | |
|---|---|---|
| ಮಾನ್ಯ ಸದಸ್ಯರ ಹೆಸರು | : | ಶ್ರೀ ಕರುಣಾಕರ ರೆಡ್ಡಿ .ಜಿ. (ಹರಪನಹಳ್ಳಿ) |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | **330** |
| ಉತ್ತರಿಸಬೇಕಾದ ದಿನಾಂಕ | : | 01.02.2021 |
| ಉತ್ತರಿಸಬೇಕಾದ ಸಚಿವರು | : | ವಸತಿ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ಕಳೆದ 2 ವರ್ಷಗಳಿಂದ ಹರಪನಹಳ್ಳಿ ವಿಧಾನ ಸಭಾ ಕ್ಷೇತ್ರಕ್ಕೆ ಆಶ್ರಯ ಯೋಜನೆಯಡಿಯಲ್ಲಿ ಮಂಜೂರಾಗಿರುವ ಮನೆಗಳೆಷ್ಟು ; | 2018-19 ರಿಂದ 2020-21 ನೇ ಸಾಲಿನವರೆಗೆ ಹರಪನಹಳ್ಳಿ ವಿಧಾನ ಸಭಾ ಕ್ಷೇತ್ರಕ್ಕೆ ವಿವಿಧ ವಸತಿ ಯೋಜನೆಯಡಿ 19 ಮನೆಗಳನ್ನು ಮಂಜೂರು ಮಾಡಲಾಗಿದೆ. |
| (ಆ) | ಸದರಿ ಮಂಜೂರಾದ ಮನೆಗಳು ಸಂಪೂರ್ಣವಾಗಿ ಪೂರ್ಣಗೊಂಡು, ಫಲಾನುಭವಿಗಳಿಗೆ ಹಣ ಬಿಡುಗಡೆಯಾಗಿದೆಯೇ ; | ಮಂಜೂರಾದ 19 ಮನೆಗಳ ಪೈಕಿ 6 ಮನೆಗಳು ಪೂರ್ಣಗೊಂಡಿದ್ದು, ಇನ್ನುಳಿದ ಮನೆಗಳು ವಿವಿಧ ಹಂತದ ಪ್ರಗತಿಯಲ್ಲಿರುತ್ತವೆ. ಜಿ.ಪಿ.ಎಸ್ ಪ್ರಗತಿಗನುಗುಣವಾಗಿ ಒಟ್ಟಾರೆಯಾಗಿ ರೂ.3.59 ಲಕ್ಷಗಳನ್ನು ಫಲಾನುಭವಿಗಳಿಗೆ ಬಿಡುಗಡೆ ಮಾಡಲಾಗಿದೆ. ಜಿ.ಪಿ.ಎಸ್ ಪ್ರಗತಿಗನುಗುಣವಾಗಿ ಅನುದಾನ ಬಿಡುಗಡೆಯಾಗುತ್ತಿದ್ದು, ಉಳಿದ ಮನೆಗಳಿಗೆ ಪ್ರಗತಿಗನುಸಾರವಾಗಿ ಶೀಘ್ರವಾಗಿ ಅನುದಾನ ಬಿಡುಗಡೆಗೆ ಕ್ರಮ ವಹಿಸಲಾಗುವುದು. |
| (ಇ) | ಇಲ್ಲದಿದ್ದಲ್ಲಿ, ಫಲಾನುಭವಿಗಳಿಗೆ ಹಣ ಬಿಡುಗಡೆಯಾಗದೇ ಇರುವುದಕ್ಕೆ ಕಾರಣವೇನು ? (ಸಂಪೂರ್ಣ ವಿವರ ನೀಡುವುದು) | |

ಸಂಖ್ಯೆ :ವಇ 44 ಹೆಚ್‌ಎಎಂ 2021

**(ವಿ. ಸೋಮಣ್ಣ)**
ವಸತಿ ಸಚಿವರು

# ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 333 |
| ಸದಸ್ಯರ ಹೆಸರು | : | ಡಾ॥ ರಂಗನಾಥ್ ಹೆಚ್.ಡಿ (ಕುಣಿಗಲ್) |
| ಉತ್ತರಿಸುವ ದಿನಾಂಕ | : | 01.02.2021 |
| ಉತ್ತರಿಸುವ ಸಚಿವರು | : | ಉಪ ಮುಖ್ಯಮಂತ್ರಿಗಳು, ಲೋಕೋಪಯೋಗಿ ಇಲಾಖೆ |

| ಕ್ರ.ಸಂ | ಪ್ರಶ್ನೆಗಳು | ಉತ್ತರ |
|---|---|---|
| ಅ) | ಕುಣಿಗಲ್ ವೃತ್ತದಲ್ಲಿ 300 ಮೀಟರ್ ರಸ್ತೆಯಲ್ಲಿ ಗುಂಡಿಗಳು ಬಿದ್ದಿರುವುದರಿಂದ ಸಂಚಾರಕ್ಕೆ ತೊಂದರೆಯಾಗುತ್ತಿದ್ದು, ಈ ರಸ್ತೆಯ ದುರಸ್ಥಿಗಾಗಿ ಸರ್ಕಾರ ಕೈಗೊಂಡಿರುವ ಕ್ರಮಗಳೇನು ? | ಕುಣಿಗಲ್ ಪಟ್ಟಣದಲ್ಲಿ ಹಾದುಹೋಗಿರುವ ರಸ್ತೆಯು ಹಳೆ ರಾಷ್ಟ್ರೀಯ ಹೆದ್ದಾರಿ-48ರ ಭಾಗವಾಗಿರುತ್ತದೆ. ಕುಣಿಗಲ್ ವೃತ್ತದಲ್ಲಿ ಸದರಿ ರಸ್ತೆಯ 300 ಮೀಟರ್ ಉದ್ದದಲ್ಲಿ ಬಿದ್ದಿರುವ ಗುಂಡಿಗಳನ್ನು ಪ್ರಸಕ್ತ ಸಾಲಿನಲ್ಲಿ ವಾರ್ಷಿಕ ರಸ್ತೆ ನಿರ್ವಹಣೆಗಾಗಿ ಹಂಚಿಕೆಯಾಗಿರುವ ಅನುದಾನದಲ್ಲಿ ಗುಂಡಿಗಳನ್ನು ಮುಚ್ಚಿ ಸುಗಮ ವಾಹನ ಸಂಚಾರಕ್ಕೆ ಅನುವು ಮಾಡಿಕೊಡಲಾಗಿರುತ್ತದೆ. |
| ಆ) | ಈ ರಸ್ತೆಯ ಕಾಮಗಾರಿಯು ರಾಜ್ಯ ಹೆದ್ದಾರಿ ಮತ್ತು ಕೆಶಿಪ್ ಮಧ್ಯ ಉಂಟಾದಂತಹ ಗೊಂದಲದಿಂದ ಸ್ಥಗಿತಗೊಂಡಿದ್ದು, ಈ ರಸ್ತೆ ನಿರ್ಮಾಣಕ್ಕಾಗಿ ಯಾವಾಗ ಅನುದಾನ ಬಿಡುಗಡೆ ಮಾಡಲಾಗುವುದು ? (ವಿವರ ನೀಡುವುದು) | ಪ್ರಸ್ತಾಪಿಸಿರುವ ಕುಣಿಗಲ್ ವೃತ್ತದಲ್ಲಿನ 300 ಮೀ. ರಸ್ತೆಯ ದುರಸ್ಥಿ ಕೆಲಸವು ಕೆಶಿಪ್ ಯೋಜನೆಯಡಿ ಸೇರಿರುವುದಿಲ್ಲ. ಸದರಿ ರಸ್ತೆಯು ಕುಣಿಗಲ್ ಪಟ್ಟಣದಲ್ಲಿ ಹಾದು ಹೋಗುತ್ತಿರುವ ಹಳೆಯ ರಾಷ್ಟ್ರೀಯ ಹೆದ್ದಾರಿಯ ಭಾಗವಾಗಿರುತ್ತದೆ.<br><br>ಪ್ರಸಕ್ತ ಸಾಲಿನಲ್ಲಿ ಕೋವಿಡ್-19 ಪೆಂಡಾಮಿಕ್ ಖಾಯಿಲೆಯಿಂದ ರಾಜ್ಯದಲ್ಲಿ ಆರ್ಥಿಕ ಸಂಪನ್ಮೂಲದ ಕೊರತೆ ಹಾಗೂ ಈಗಾಗಲೇ ಇಲಾಖೆಯಲ್ಲಿ ಚಾಲ್ತಿ ಇರುವ ಮುಂದುವರೆದ ಕಾಮಗಾರಿಗಳಿಗೆ ಅನುದಾನದ ಕೊರತೆಯಿರುವುದರಿಂದ ಪ್ರಸಕ್ತ ಸಾಲಿನಲ್ಲಿ ಸದರಿ 300 ಮೀಟರ್ ರಸ್ತೆಯನ್ನು ದುರಸ್ತಿಗೊಳಿಸಲು ಸಾಧ್ಯವಾಗುತ್ತಿಲ್ಲ. ಮುಂದಿನ ದಿನಗಳಲ್ಲಿ ಅನುದಾನದ ಲಭ್ಯತೆಯನುಸಾರ ಸದರಿ ರಸ್ತೆಯನ್ನು ಅಭಿವೃದ್ಧಿಪಡಿಸಲಾಗುವುದು. |

ಲೋಇ 12 ಸಿಕ್ಯೂಎನ್ 2021(ಇ)

(ಗೋವಿಂದ ಎಂ. ಕಾರಜೋಳ)
ಉಪ ಮುಖ್ಯಮಂತ್ರಿಗಳು,
ಲೋಕೋಪಯೋಗಿ ಇಲಾಖೆ

## ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 338
ಸದಸ್ಯರ ಹೆಸರು : ಶ್ರೀ ಮಂಜುನಾಥ್ ಎ. (ಮಾಗಡಿ)
ಉತ್ತರಿಸುವ ದಿನಾಂಕ : 01-02-2021
ಉತ್ತರಿಸುವ ಸಚಿವರು : ಕಂದಾಯ ಸಚಿವರು

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಈ ಹಿಂದೆ ರೈತರು ಹಲವಾರು ವರ್ಷಗಳಿಂದ ಸರ್ಕಾರಿ ಜಮೀನನ್ನು ಸಾಗುವಳಿ ಮಾಡಿಕೊಂಡು ಬರುತ್ತಿದ್ದ ಹಿನ್ನೆಲೆಯಲ್ಲಿ ಸರ್ಕಾರದಿಂದ ನಮೂನೆ 50-53 ರಂತೆ ರೈತರಿಗೆ ಹಂಚಿಕೆ ಮಾಡಿದ ಜಮೀನಿಗೆ ಸಾಗುವಳಿ ಚೀಟಿ ವಿತರಣೆ ಮಾಡಿದ್ದು, ರೈತರ ಹೆಸರಿನಲ್ಲಿ ಪಹಣಿ ಹಾಗೂ ಮ್ಯೂಟೇಷನ್ ಹಾಗೂ ಕಂದಾಯ ಇದ್ದರೂ ಸಹ ಅರಣ್ಯ ಇಲಾಖೆಯವರು ಜಮೀನನ್ನು ರೈತರಿಂದ ಕಸಿದುಕೊಳ್ಳುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಅರಣ್ಯ ಭೂಮಿಯನ್ನು ಅನಧಿಕೃತವಾಗಿ ಮಂಜೂರು ಮಾಡಿ ರೈತರ ಹೆಸರಿನಲ್ಲಿ ಪಹಣಿ ಹಾಗೂ ಮ್ಯುಟೇಷನ್ ಕಂದಾಯ ಇಲಾಖೆಯಿಂದ ನೀಡಿದ್ದರೂ ಸಹ ಅದು ಅಧಿಸೂಚನೆಯಂತೆ ಅರಣ್ಯ ಪ್ರದೇಶವಾಗಿರುತ್ತದೆ. ಅರಣ್ಯ ಭೂಮಿಯನ್ನು ಮಂಜೂರು ಮಾಡಲು ಕಾನೂನಿನಲ್ಲಿ ಅವಕಾಶವಿರುವುದಿಲ್ಲ. ಅರಣ್ಯ ಪ್ರದೇಶದಲ್ಲಿ ಆಗಿರುವ ಅನಧಿಕೃತ ಮಂಜೂರಿ ಪ್ರದೇಶವನ್ನು ಕರ್ನಾಟಕ ಅರಣ್ಯ ಕಾಯ್ದೆ 1963 ರ ಸೆಕ್ಷನ್ 64ಎ ಪ್ರಕಾರ ತೆರವುಗೊಳಿಸಲು ಕ್ರಮ ಕೈಗೊಳ್ಳಲಾಗುತ್ತಿದೆ. |
| ಆ) | ಹಾಗಿದ್ದಲ್ಲಿ, ಈ ಹಿಂದೆ ರೈತರಿಗೆ ಹಂಚಿಕೆ ಮಾಡಲಾದ ಜಮೀನಿಗೆ ಸರ್ವೆ ಮಾಡಿಸಿ, ವಿನಃ ಕಾರಣ ರೈತರಿಗೆ ಅರಣ್ಯ ಇಲಾಖೆಯವರು ತೊಂದರೆ ನೀಡುತ್ತಿರುವುದನ್ನು ತಪ್ಪಿಸಲು ಸರ್ಕಾರ ಕ್ರಮ ಕೈಗೊಳ್ಳಲಾಗುವುದೇ; | ಕಂದಾಯ ಇಲಾಖೆ & ಅರಣ್ಯ ಇಲಾಖೆಯಲ್ಲಿ ಪರಸ್ಪರ ಆಗಬೇಕಾಗಿರುವ ವಿಷಯಗಳ ಕುರಿತು ಈಗಾಗಲೇ ಮಾನ್ಯ ಕಂದಾಯ ಸಚಿವರು ಹಾಗೂ ಅರಣ್ಯ, ಪರಿಸರ & ಜೀವಿಶಾಸ್ತ್ರ ಇಲಾಖೆ ಸಚಿವರ ಅಧ್ಯಕ್ಷತೆಯಲ್ಲಿ ದಿನಾಂಕ:07.01.2015 ರಂದು ನಡೆದ ಸಭೆಯಲ್ಲಿ ಸದರಿ ವಿಷಯದ ಬಗ್ಗೆ ಚರ್ಚಿಸಿ ಕೆಲವು ನಿರ್ಣಯಗಳನ್ನು ಕೈಗೊಳ್ಳಲಾಗಿರುತ್ತದೆ.<br><br>ಅದರಂತೆ ಸರ್ಕಾರದ ಸುತ್ತೋಲೆ ಸಂ:ಅಪಜೀ 45 ಎಫ್‌ಜಿಎಲ್ 2015, ದಿನಾಂಕ:13.03.2015 ರ ಸುತ್ತೋಲೆಯನ್ವಯ ಅರಣ್ಯ ಸಂರಕ್ಷಣಾ ಕಾಯ್ದೆ 1980 ಜಾರಿಗೆ ಬರುವ ಪೂರ್ವದಲ್ಲಿ ಅಧಿಸೂಚನೆಯಂತೆ ಕಂದಾಯ ದಾಖಲೆಗಳಲ್ಲಿ ಅರಣ್ಯ ಎಂದು ನಮೂದಾಗದ ಪ್ರಯುಕ್ತ ಸಕ್ಷಮ ಪ್ರಾಧಿಕಾರಗಳು ಅರಣ್ಯ ಜಮೀನನ್ನು ಮಂಜೂರು ಮಾಡಿರುವ ಪ್ರಕರಣಗಳಲ್ಲಿ ಅರಣ್ಯ ಸಂರಕ್ಷಣಾ ಕಾಯ್ದೆಯಡಿ ಅರಣ್ಯ ಅಧಿಸೂಚನೆಯಿಂದ ಹೊರತುಪಡಿಸಲು (De-Notification) ಕೇಂದ್ರ ಸರ್ಕಾರದಿಂದ ಅನುಮತಿ ಪಡೆಯಲು ಕ್ರಮ ಕೈಗೊಳ್ಳಬೇಕಾಗಿದ್ದು, ಈ ಪ್ರಕರಣಗಳಲ್ಲಿ ರೈತರನ್ನು ಒಕ್ಕಲೆಬ್ಬಿಸಲು ಅವಕಾಶವಿರುವುದಿಲ್ಲ. |
| ಇ) | ಅರಣ್ಯ ಕಾಯ್ದೆಗೆ ತಿದ್ದುಪಡಿ ತಂದು, ಈ ಹಿಂದೆ ಕಂದಾಯ ಇಲಾಖಾ ವತಿಯಿಂದ ನೀಡಿದ ಸಾಗುವಳಿ ಭೂಮಿಯನ್ನು ರೈತರಿಗೆ ಹಿಂದಿರುಗಿಸುವ ಉದ್ದೇಶ ಸರ್ಕಾರಕ್ಕೆ ಇದೆಯೇ; | |
| ಈ) | ಅರಣ್ಯ ಇಲಾಖೆ ಹಾಗೂ ಕಂದಾಯ ಇಲಾಖೆ ಸಂಘರ್ಷದಿಂದಾಗಿ ರೈತರಿಗೆ ಆಗುತ್ತಿರುವ ತೊಂದರೆಯನ್ನು ಶಾಶ್ವತವಾಗಿ ಬಗೆಹರಿಸಲಾಗುವುದೇ? | |

**ಸಂಖ್ಯೆ: ಆರ್‌ಡಿ 14 ಎಲ್‌ಜಿಕ್ಯೂ 2021**

(ಆರ್. ಅಶೋಕ)
ಕಂದಾಯ ಸಚಿವರು

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 340
ಸದಸ್ಯರ ಹೆಸರು : ಶ್ರೀ ಮಂಜುನಾಥ್ ಎ. (ಮಾಗಡಿ)
ಉತ್ತರಿಸುವ ದಿನಾಂಕ : 01–02–2021
ಉತ್ತರಿಸುವ ಸಚಿವರು : ಕಂದಾಯ ಸಚಿವರು

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಮಾಗಡಿ ವಿಧಾನ ಸಭಾ ಕ್ಷೇತ್ರದ ರಾಮನಗರ ತಾಲ್ಲೂಕು ಬಿಡದಿ ಹೋಬಳಿ ಬಾನಂದೂರು ಗ್ರಾಮದ ಸರ್ವೆ ನಂ. 106, 109, 110, 111 ಹಾಗೂ 244ರಲ್ಲಿ ಒಟ್ಟು 28–33 ಎಕರೆ/ಗುಂಟೆ ಸರ್ಕಾರಿ ಜಮೀನನ್ನು ವಿವಿಧ ಖಾಸಗಿ ಸಂಸ್ಥೆಗಳು ಅಕ್ರಮವಾಗಿ ಒತ್ತುವರಿ ಮಾಡಿಕೊಂಡಿರುವುದನ್ನು ಸರ್ಕಾರದ ವಶಕ್ಕೆ ಪಡೆಯಲಾಗಿದೆಯೇ; | ಮಾಗಡಿ ವಿಧಾನ ಸಭಾ ಕ್ಷೇತ್ರದ ರಾಮನಗರ ತಾಲ್ಲೂಕು ಬಿಡದಿ ಹೋಬಳಿ ಬಾನಂದೂರು ಗ್ರಾಮದ ಸ.ನಂ 106, 109, 110, 111 ಹಾಗೂ 244 ರಲ್ಲಿ ಒಟ್ಟು 28–33 ಎಕರೆ/ಗುಂಟೆ ಸರ್ಕಾರಿ ಜಮೀನನ್ನು ಈಗಲ್‌ಟನ್ ಸಂಸ್ಥೆಯವರು ಅನಧಿಕೃತವಾಗಿ ಒತ್ತುವರಿ ಮಾಡಿಕೊಂಡಿದ್ದು, ಮಾನ್ಯ ಸರ್ವೋಚ್ಚ ನ್ಯಾಯಾಲಯದ ಸಿವಿಲ್–ಅಪೀಲು ನಂ 5181–5182/2003 ರ ಪ್ರಕರಣದಲ್ಲಿ ದಿನಾಂಕ:16.01.2014 ರ ಆದೇಶದಂತೆ ಒತ್ತುವರಿಯಿಂದ ಹಿಂಪಡೆದು ಸರ್ಕಾರದ ವಶಕ್ಕೆ ಪಡೆಯಲಾಗಿದೆ. |
| ಆ) | ಹಾಗಿದ್ದಲ್ಲಿ, ಯಾವ ಯಾವ ಖಾಸಗಿ ಸಂಸ್ಥೆಗಳು ಯಾವ ಯಾವ ಉದ್ದೇಶಕ್ಕೆ ಅಕ್ರಮವಾಗಿ ಜಮೀನನ್ನು ಅಕ್ರಮಿಸಿಕೊಂಡಿರುತ್ತವೆ; (ಸಂಪೂರ್ಣ ವಿವರ ನೀಡುವುದು) | ಈ ಜಮೀನು ಈಗಲ್‌ಟನ್ ಸಂಸ್ಥೆಯವರಿಂದ ಕೃಷಿಯೇತರ ವಾಣಿಜ್ಯ ಉದ್ದೇಶಕ್ಕೆ ಅನಧಿಕೃತವಾಗಿ ಒತ್ತುವರಿಯಾಗಿದ್ದು, ಈ ಜಮೀನನ್ನು ಮಾನ್ಯ ಸರ್ವೋಚ್ಚ ನ್ಯಾಯಾಲಯದ ದಿನಾಂಕ:16.01.2014 ರ ಅಂತಿಮ ಆದೇಶದಂತೆ ಒತ್ತುವರಿಯಿಂದ ಹಿಂಪಡೆಯಲಾಗಿರುತ್ತದೆ. |
| ಇ) | ಮೇಲ್ಕಂಡ ಸರ್ವೆಗಳಿಗೆ ವಿವಿಧ ಖಾಸಗಿ ಸಂಸ್ಥೆಗಳು ಯಾವ ಉದ್ದೇಶಗಳಿಗಾಗಿ ಸರ್ಕಾರದಿಂದ ಜಮೀನನ್ನು ಮಂಜೂರು ಮಾಡಿಸಿಕೊಂಡಿರುತ್ತವೆ; (ಸರ್ಕಾರದ ಆದೇಶ ಪ್ರತಿಯೊಂದಿಗೆ ವಿವರ ನೀಡುವುದು) | ಮೇಲ್ಕಂಡ ಸ.ನಂ ಜಮೀನುಗಳನ್ನು ಯಾವುದೇ ಖಾಸಗಿ ಸಂಸ್ಥೆಗಳಿಗೆ ಸರ್ಕಾರವು ಮಂಜೂರು ಮಾಡಿರುವುದಿಲ್ಲ. |
| ಈ) | ಮಂಜೂರಾಗಿರುವ ಜಮೀನಿಗೆ ಸರ್ಕಾರ ನಿಗದಿಪಡಿಸಿರುವ ಮಾನದಂಡ ಹಾಗೂ ವಿಧಿಸಿರುವ ಶುಲ್ಕದ ಮೊತ್ತವೆಷ್ಟು? (ಸಂಪೂರ್ಣ ವಿವರ ನೀಡುವುದು) | ಉದ್ಭವಿಸುವುದಿಲ್ಲ. |

**ಸಂಖ್ಯೆ: ಆರ್‌ಡಿ 15 ಎಲ್‌ಜಿಕ್ಯೂ 2021**

(ಆರ್. ಅಶೋಕ)
ಕಂದಾಯ ಸಚಿವರು.

# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 341 |
| ಸದಸ್ಯರ ಹೆಸರು | ಶ್ರೀ ನರೇಂದ್ರ.ಆರ್ |
| ಉತ್ತರಿಸುವ ದಿನಾಂಕ: | 01-02-2021 |
| ಉತ್ತರಿಸುವವರು | ಹಿಂದೂ ಧಾರ್ಮಿಕ ಮತ್ತು ಧರ್ಮಾದಾಯ ದತ್ತಿ ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು. |

| | ಪ್ರಶ್ನೆ | ಉತ್ತರ |
|---|---|---|
| ಅ | ಕಳೆದ ಮೂರು ವರ್ಷಗಳಿಂದ ಹನೂರು ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಬರುವ ದೇವಾಲಯಗಳ ಅಭಿವೃದ್ಧಿಗೆ ಅನುದಾನ ಮಂಜೂರು ಮಾಡದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಚಾಮರಾಜನಗರ ಜಿಲ್ಲೆ, ಹನೂರು ವಿಧಾನ ಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಬರುವ ದೇವಾಲಯಗಳ ಅಭಿವೃದ್ಧಿಗಾಗಿ ಈ ಕೆಳಕಂಡ ಯೋಜನೆಯಗಳಡಿ ಒಟ್ಟು ರೂ.30.01ಲಕ್ಷಗಳ ಅನುದಾನವನ್ನು ಬಿಡುಗಡೆ ಮಾಡಲಾಗಿರುತ್ತದೆ. (ಕೆಳಗಿನ ಕೋಷ್ಟಕ ನೋಡಿ) |
| ಆ | ಬಂದಿದ್ದಲ್ಲಿ, ಈ ಭಾಗದ ದೇವಾಲಯಗಳ ಅಭಿವೃದ್ಧಿಗಾಗಿ ಅನುದಾನ ಬಿಡುಗಡೆ ಮಾಡಲು ಸರ್ಕಾರ ತೆಗೆದುಕೊಂಡಿರುವ ಕ್ರಮಗಳೇನು? (ಸಂಪೂರ್ಣ ವಿವರ ನೀಡುವುದು) | ಪ್ರಶ್ನೆ ಉದ್ಭವಿಸುವುದಿಲ್ಲ. |

ರೂ.ಲಕ್ಷಗಳಲ್ಲಿ

| ಯೋಜನೆ | 2018-2019 | 2019-2020 | 2020-2021 |
|---|---|---|---|
| ಆರಾಧನಾ | 4.24 | 4.24 | 3.30 |
| ಪರಿಶಿಷ್ಠ ಜಾತಿ ಉಪಯೋಜನೆ | 3.38 | 6.76 | 5.28 |
| ಗಿರಿಜನ ಉಪಯೋಜನೆ | 1.01 | 1.01 | 0.79 |
| **ಒಟ್ಟು** | **8.63** | **12.01** | **9.37** |

(ಸಂಖ್ಯೆಕಂಇ 18 ಮುಸಪ್ರ 2021)

(ಕೋಟಾ ಶ್ರೀನಿವಾಸ ಪೂಜಾರಿ)
ಹಿಂದೂ ಧಾರ್ಮಿಕ ಮತ್ತು ಧರ್ಮಾದಾಯ ದತ್ತಿ
ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು.

## ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 342
ಸದಸ್ಯರ ಹೆಸರು : ಶ್ರೀ ನರೇಂದ್ರ ಆರ್. (ಹನೂರು)
ಉತ್ತರಿಸುವ ಸಚಿವರು : ಕಂದಾಯ ಸಚಿವರು
ಉತ್ತರಿಸುವ ದಿನಾಂಕ : 01.02.2021

********

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಹನೂರು ಹೊಸ ತಾಲ್ಲೂಕು ಕೇಂದ್ರವಾಗಿದ್ದು, ಈ ಕೇಂದ್ರದಲ್ಲಿ ತಾಲ್ಲೂಕು ಮಟ್ಟದ ಕಛೇರಿಗಳ ಸಂಕೀರ್ಣಕ್ಕಾಗಿ ಮಿನಿ ವಿಧಾನಸೌಧ ನಿರ್ಮಾಣ ಮಾಡುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; | ಹೌದು |
| ಆ) | ಹಾಗಿದ್ದಲ್ಲಿ, ಮಿನಿ ವಿಧಾನಸೌಧ ನಿರ್ಮಾಣ ಮಾಡಲು ಸರ್ಕಾರ ತೆಗೆದುಕೊಂಡಿರುವ ಕ್ರಮಗಳೇನು; (ಸಂಪೂರ್ಣ ವಿವರ ನೀಡುವುದು) | ಹನೂರು ತಾಲ್ಲೂಕಿನಲ್ಲಿ ಮಿನಿ ವಿಧಾನಸೌಧ ನಿರ್ಮಿಸಲು ಹನೂರು ಹೋಬಳಿ, ಹುಲ್ಲೇಪುರ ಗ್ರಾಮದ ಸ.ನಂ.312/ಡಿ ರಲ್ಲಿ ವಿಸ್ತೀರ್ಣ 7.76 ಎಕರೆ ಮತ್ತು 312/ಇ ರಲ್ಲಿ 1.17 ಎಕರೆ ವಿಸ್ತೀರ್ಣ ಒಟ್ಟು 8.93 ಎಕರೆ ಜಮೀನನ್ನು ಗುರುತಿಸಲಾಗಿದ್ದು, ಸದರಿ ಜಮೀನಿನಲ್ಲಿ ಕಟ್ಟಡ ಕಾಮಗಾರಿಯನ್ನು ರೂ.10.00 ಕೋಟಿಗಳ ವೆಚ್ಚದಲ್ಲಿ ಕೈಗೆತ್ತಿಕೊಳ್ಳಲು ಸವಿವರ ಅಂದಾಜು ಪಟ್ಟಿ ಮತ್ತು ನಕ್ಷೆಯೊಂದಿಗೆ ಪ್ರಸ್ತಾವನೆ ಸ್ವೀಕೃತವಾಗಿರುತ್ತದೆ.<br>ಹೊಸದಾಗಿ ರಚನೆಯಾದ ತಾಲ್ಲೂಕುಗಳಲ್ಲಿ ರೂ.10.00 ಕೋಟಿಗಳ ವೆಚ್ಚದಲ್ಲಿ ಎಲ್ಲಾ ಮೂಲಭೂತ ಸೌಲಭ್ಯಗಳನ್ನೊಳಗೊಂಡಂತೆ, ಮಿನಿ ವಿಧಾನಸೌಧ ನಿರ್ಮಿಸಲು ಸರ್ಕಾರದ ಸುತ್ತೋಲೆ ಸಂಖ್ಯೆ:ಕಂಇ/100/ಡಬ್ಲ್ಯೂಬಿಆರ್/2017, ದಿನಾಂಕ:31.10.2017 ರಲ್ಲಿ ಅವಕಾಶ ಕಲ್ಪಿಸಲಾಗಿದೆ.<br>ಪ್ರಸ್ತುತ ಪ್ರಸ್ತಾವನೆಗೆ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ ಪರಿಶೀಲನೆಯಲ್ಲಿದೆ. |
| ಇ) | ಮಿನಿ ವಿಧಾನಸೌಧ ನಿರ್ಮಾಣಕ್ಕಾಗಿ ಸ್ಥಳ ಗುರುತಿಸಲಾಗುವುದೇ ಹಾಗೂ ಕಟ್ಟಡ ನಿರ್ಮಾಣಕ್ಕಾಗಿ ನಿಗದಿಪಡಿಸಿರುವ ಅನುದಾನವೆಷ್ಟು ಹಾಗೂ ಪ್ರಸ್ತುತ ಪ್ರಸ್ತಾವನೆ ಯಾವ ಹಂತದಲ್ಲಿದೆ? (ಸಂಪೂರ್ಣ ವಿವರ ನೀಡುವುದು) | |

ಕಂಇ 08 ಡಬ್ಲ್ಯೂಬಿಆರ್ 2021

(ಆರ್. ಅಶೋಕ)
ಕಂದಾಯ ಸಚಿವರು

## ಕರ್ನಾಟಕ ವಿಧಾನ ಸಭೆ

ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ: 343
ಸದಸ್ಯರ ಹೆಸರು ಶ್ರೀ ನರೇಂದ್ರ ಆರ್ (ಹನೂರು)
ಉತ್ತರಿಸುವ ದಿನಾಂಕ: 01-02-2021
ಉತ್ತರಿಸುವ ಸಚಿವರು: ಉಪ ಮುಖ್ಯಮಂತ್ರಿಗಳು, ಲೋಕೋಪಯೋಗಿ ಇಲಾಖೆ

| ಕ್ರಮ ಸಂಖ್ಯೆ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ಹನೂರು ವಿಧಾನ ಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಬರುವ ರಾಮಾಪುರ –ನಾಲ್‌ರೋಡ್ ನಡುವಿನ ರಸ್ತೆಯು ಸಂಪೂರ್ಣ ಹದಗೆಟ್ಟು ಸಾರ್ವಜನಿಕರಿಗೆ ತುಂಬಾ ತೊಂದರೆ ಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಸರ್ಕಾರದ ಗಮನಕ್ಕೆ ಬಂದಿದೆ. |
| ಆ) | ಬಂದಿದ್ದಲ್ಲಿ, ಈ ರಸ್ತೆಯನ್ನು ಅಭಿವೃದ್ಧಿಪಡಿಸಲು ಸರ್ಕಾರ ತೆಗೆದುಕೊಂಡಿರುವ ಕ್ರಮಗಳೇನು? (ಸಂಪೂರ್ಣ ವಿವರ ನೀಡುವುದು) | ಸದರಿ ರಸ್ತೆಯು ಒಟ್ಟು 16.00 ಕಿ.ಮೀ ಉದ್ದವಿದ್ದು ಇದರಲ್ಲಿ ಕಳೆದ ಎರಡು ವರ್ಷಗಳಲ್ಲಿ 1.80 ಕಿ.ಮೀ ಉದ್ದದ ರಸ್ತೆಯನ್ನು ಅಭಿವೃದ್ಧಿಪಡಿಸಲಾಗಿದ್ದು, ಇನ್ನುಳಿದ 14.20 ಕಿ.ಮೀ ರಸ್ತೆಯಲ್ಲಿ ಹಾಳಾದ ಭಾಗಗಳನ್ನು ಈ ಕೆಳಕಂಡಂತೆ ಅಭಿವೃದ್ಧಿಪಡಿಸಿ ಸುಗಮ ಸಾರ್ವಜನಿಕ ಸಂಚಾರಕ್ಕೆ ಅನುವುಮಾಡಿಕೊಡಲಾಗಿರುತ್ತದೆ.<br>1. 2017–18ನೇ ಸಾಲಿನಲ್ಲಿ ಅಂದಾಜು ಮೊತ್ತ ರೂ.100.00 ಲಕ್ಷಗಳಿಗೆ ಸರಪಳಿ 98.20 ರಿಂದ 98.60 ಕಿ.ಮೀ ವರೆಗೆ (ರಾಮಾಪುರ ಗ್ರಾಮ ಪರಿಮಿತಿ) 0.40 ಕಿ.ಮೀ ಉದ್ದಕ್ಕೆ ರಸ್ತೆಯನ್ನು ಅಭಿವೃದ್ಧಿಪಡಿಸಲಾಗಿರುತ್ತದೆ<br>2. 2019–20 ನೇ ಸಾಲಿನಲ್ಲಿ ಅಂದಾಜು ಮೊತ್ತ ರೂ.300.00 ಲಕ್ಷಗಳಿಗೆ ಸರಪಳಿ 98.60 ರಿಂದ 100.00 ಕಿ.ಮೀ ವರೆಗೆ (ರಾಮಾಪುರ ಗ್ರಾಮ ಪರಿಮಿತಿ) 1.40 ಕಿ.ಮೀ ಉದ್ದಕ್ಕೆ ರಸ್ತೆಯನ್ನು ಅಭಿವೃದ್ಧಿಪಡಿಸಲಾಗಿರುತ್ತದೆ.<br>3. 2020–21ನೇ ಸಾಲಿನಲ್ಲಿ ಅಂದಾಜು ಮೊತ್ತ ರೂ.7.10 ಲಕ್ಷಗಳಿಗೆ ವಾರ್ಷಿಕ ರಸ್ತೆ ನಿರ್ವಹಣೆ ಕೈಗೊಂಡು ಕಾಮಗಾರಿಯು ಪ್ರಗತಿಯಲ್ಲಿರುತ್ತದೆ. |

ಲೋಇ 7 ಸಿಕ್ಯೂಎನ್ 2021(ಇ)

(ಗೋವಿಂದ ಎಂ. ಕಾರಜೋಳ)
ಉಪ ಮುಖ್ಯಮಂತ್ರಿಗಳು,
ಲೋಕೋಪಯೋಗಿ ಇಲಾಖೆ

# ಕರ್ನಾಟಕ ವಿಧಾನಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 347 |
| ಮಾನ್ಯ ವಿಧಾನಸಭೆ ಸದಸ್ಯರ ಹೆಸರು | : | ಶ್ರೀ ಬಾಲಕೃಷ್ಣ ಸಿ.ಎನ್. (ಶ್ರವಣಬೆಳಗೊಳ) |
| ಉತ್ತರಿಸುವ ದಿನಾಂಕ | : | 01/02/2021 |
| ಉತ್ತರಿಸುವ ಸಚಿವರು | : | ಮಾನ್ಯ ಉಪ ಮುಖ್ಯ ಮಂತ್ರಿಗಳು, ಲೋಕೋಪಯೋಗಿ ಇಲಾಖೆ. |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಚನ್ನರಾಯಪಟ್ಟಣ ಟೌನ್ ನಲ್ಲಿರುವ ಕೋರ್ಟ್ ಸಂಕೀರ್ಣ ಕಾಮಗಾರಿಯು ಪ್ರಸ್ತುತ ಯಾವ ಹಂತದಲ್ಲಿದೆ; | ಚನ್ನರಾಯಪಟ್ಟಣ ನಗರದಲ್ಲಿರುವ ಕೋರ್ಟ್ ಸಂಕೀರ್ಣ ಕಾಮಗಾರಿಯ ರೂ. 10.00 ಕೋಟಿಗಳ ಅಂದಾಜಿಗೆ ರಿಜಿಸ್ಟ್ರಾರ್ ಜನರಲ್, ಉಚ್ಚ ನ್ಯಾಯಾಲಯ ಬೆಂಗಳೂರು ಇವರಿಂದ ದಿನಾಂಕ: 22.09.2020ರಂದು ಮೇಲು ರುಜು ಆಗಿದ್ದು, ಪ್ರಸ್ತುತ ಟೆಂಡರ್ ಪ್ರಕ್ರಿಯೆಯಲ್ಲಿದ್ದು, ಟೆಂಡರ್ ಸ್ವೀಕೃತಿಯ ಕೊನೆಯ ದಿನಾಂಕ: 18.02.2021 ಆಗಿರುತ್ತದೆ. |
| ಆ) | ಸದರಿ ಕಾಮಗಾರಿಗಾಗಿ ರೂ. 10.00 ಕೋಟಿ ಅನುದಾನವನ್ನು ಬಿಡುಗಡೆ ಮಾಡಿರುವುದು ನಿಜವೇ; | ಸದರಿ ಕಾಮಗಾರಿಗಾಗಿ 2020-2021 ನೇ ಸಾಲಿನ ಮುಂದುವರೆದ ಕಾಮಗಾರಿಗಳಡಿ ರೂ. 4.00 ಕೋಟಿಗಳ ಅನುದಾನವನ್ನು ಬಿಡುಗಡೆ ಮಾಡಲು ಪ್ರಸ್ತಾಪಿಸಲಾಗಿದೆ. |
| ಇ) | ಹಾಗಿದ್ದಲ್ಲಿ, ಮುಂದುವರೆದ ಕಾಮಗಾರಿಗಾಗಿ ಅನುದಾನದ ಅವಶ್ಯಕತೆ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಸದರಿ ಕಾಮಗಾರಿಯ ಪ್ರಗತಿಯನ್ನಾಧರಿಸಿ ಹೆಚ್ಚುವರಿ ಅನುದಾನವನ್ನು ಬಿಡುಗಡೆಗೊಳಿಸಲು ಕ್ರಮ ವಹಿಸಲಾಗುವುದು. |
| ಈ) | ಬಂದಿದ್ದಲ್ಲಿ, ಪ್ರಸಕ್ತ ಸಾಲಿನಲ್ಲಿ ಹೆಚ್ಚುವರಿ ಅನುದಾನವನ್ನು ಒದಗಿಸಲಾಗುವುದೇ; ಎಷ್ಟು ಅನುದಾನವನ್ನು ಒದಗಿಸಲಾಗುವುದು (ವಿವರ ನೀಡುವುದು)? | |

ಸಂಖ್ಯೆ: ಲೋಇ 01 ಬಿಎಲ್ ಕ್ಯೂ 2021

(ಗೋವಿಂದ ಎಂ. ಕಾರಜೋಳ)
ಉಪ ಮುಖ್ಯ ಮಂತ್ರಿಗಳು,
ಲೋಕೋಪಯೋಗಿ ಇಲಾಖೆ.

**ಕರ್ನಾಟಕ ವಿಧಾನಸಭೆ**
**15ನೇ ವಿಧಾನಸಭೆ**
**9ನೇ ಅಧಿವೇಶನ**

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 351 |
| ಮಾನ್ಯ ಸದಸ್ಯರ ಹೆಸರು | : | ಶ್ರೀ. ಸಂಜೀವ ಮಠಂದೂರ್ (ಪುತ್ತೂರು) |
| ಉತ್ತರಿಸುವ ದಿನಾಂಕ | : | 01-02-2021 |
| ಉತ್ತರಿಸುವ ಸಚಿವರು | : | ಮಾನ್ಯ ಉಪ ಮುಖ್ಯಮಂತ್ರಿಗಳು, (ಲೋಕೋಪಯೋಗಿ ಸಚಿವರು) |

| ಕ್ರಸಂ | ಪ್ರಶ್ನೆಗಳು | ಉತ್ತರ |
|---|---|---|
| ಅ) | ಉಪ್ಪಿನಂಗಡಿ-ಕಡಬ-ಬಿಸ್ಲೆಘಾಟ್ ರಾಜ್ಯ ಹೆದ್ದಾರಿ ಅಭಿವೃದ್ಧಿ ಯೋಜನೆಯ ಮೂರನೇ ಹಂತದ ಕಾಮಗಾರಿಯಲ್ಲಿ ಪ್ಯಾಕೇಜ್ 251 ಎ ಮತ್ತು 251 ಬಿ ಯಡಿ ಪುತ್ತೂರು ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ರಸ್ತೆ ಕಾಮಗಾರಿಗಳು ಕಳಪೆಯಾಗಿ ಅಪೂರ್ಣವಾಗಿದ್ದು, ಗುತ್ತಿಗೆ ಅವಧಿ ಮುಗಿದಿದ್ದು, ಕಾರಣರಾದ ಗುತ್ತಿಗೆದಾರರನ್ನು ಕಪ್ಪು ಪಟ್ಟಿಗೆ ಸೇರಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು (ವಿವರ ನೀಡುವುದು) | ಉಪ್ಪಿನಂಗಡಿ-ಕಡಬ-ಬಿಸ್ಲೆಘಾಟ್ ರಾಜ್ಯ ಹೆದ್ದಾರಿ ಅಭಿವೃದ್ಧಿ ಯೋಜನೆಯ ಮೂರನೇ ಹಂತದ ಪ್ಯಾಕೇಜ್ 251 ಎ ಮತ್ತು 251 ಬಿ ಕಾಮಗಾರಿಯನ್ನು ಗುತ್ತಿಗೆದಾರರಾದ ಮೆ: ಇಕ್ಬಾಲ್ ಅಹಮದ್ ಇನ್‌ಫ್ರಾ ಪ್ರಾಜೆಕ್ಟ್ ಪ್ರೈ.ಲಿ., ಮಂಗಳೂರು ರವರಿಗೆ ದಿನಾಂಕ: 17.06.2016 ರಂದು ಕಾರ್ಯಾದೇಶ ನೀಡಿದ್ದು, ದಿನಾಂಕ: 16.09.2017 ರಂದು ಪೂರ್ಣಗೊಳಿಸಬೇಕಾಗಿರುತ್ತದೆ. ತದನಂತರ ಕಾಲಾವಧಿ ವಿಸ್ತರಣೆ ದಿನಾಂಕ: 31.03.2018 ರವರೆಗೆ ನೀಡಿದ್ದರು ಗುತ್ತಿಗೆದಾರರು ಕಾಮಗಾರಿಯನ್ನು ಪ್ರಾರಂಭಿಸದೇ ಇರುವುದರಿಂದ ಹಲವಾರು ಬಾರಿ ನೋಟೀಸ್ ನೀಡಿದ್ದರು ಕಾಮಗಾರಿಯನ್ನು ಪೂರ್ಣಗೊಳಿಸಲು ಯಾವುದೇ ಕ್ರಮ ಕೈಗೊಂಡಿರುವುದಿಲ್ಲ. ಅದ್ದರಿಂದ ಸದರಿ ಕಾಮಗಾರಿಯನ್ನು ರದ್ದುಗೊಳಿಸಿ ಹೊಸದಾಗಿ ಟೆಂಡರ್ ಕರೆಯುವ ಪ್ರಸ್ತಾವನೆ ಸರ್ಕಾರದ ಪರಿಶೀಲನೆಯಲ್ಲಿದೆ. |
| ಆ) | ಸದರಿ ರಸ್ತೆಯ ಉಳಿಕೆ ಕಾಮಗಾರಿಯನ್ನು ಮರು ಟೆಂಡರ್ ಮೂಲಕ ಬೇರೆ ಗುತ್ತಿಗೆದಾರರಿಂದ ಕೈಗೊಳ್ಳುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ? | |

ಸಂಖ್ಯೆ. ಲೋಇ E-32 ಇಎಪಿ 2021

(ಗೋವಿಂದ ಎಂ. ಕಾರಜೋಳ)
ಮಾನ್ಯ ಉಪ ಮುಖ್ಯಮಂತ್ರಿಗಳು,
ಲೋಕೋಪಯೋಗಿ ಇಲಾಖೆ

## ಕರ್ನಾಟಕ ವಿಧಾನಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 352 |
| ಸದಸ್ಯರ ಹೆಸರು | : | ಶ್ರೀ ಭೀಮಾ ನಾಯ್ಕ ಎಸ್.<br>(ಹಗರಿಬೊಮ್ಮನಹಳ್ಳಿ) |
| ಉತ್ತರಿಸುವ ಸಚಿವರು | : | ಕಂದಾಯ ಸಚಿವರು |
| ಉತ್ತರಿಸುವ ದಿನಾಂಕ | : | 01.02.2021 |

*********

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಹಗರಿಬೊಮ್ಮನಹಳ್ಳಿ ವಿಧಾನಸಭಾ ಕ್ಷೇತ್ರದ ಕೊಟ್ಟೂರು ಪಟ್ಟಣವು ನೂತನ ತಾಲ್ಲೂಕು ಕೇಂದ್ರವಾಗಿದ್ದು, ಮಿನಿ ವಿಧಾನಸೌಧ ನಿರ್ಮಾಣ ಕಾರ್ಯ ಯಾವಾಗ ಪ್ರಾರಂಭಿಸಲಾಗುವುದು; | ಕೊಟ್ಟೂರು ಮಿನಿ ವಿಧಾನಸೌಧ ನಿರ್ಮಾಣಕ್ಕಾಗಿ ಕೊಟ್ಟೂರು ತಾಲ್ಲೂಕು ಮತ್ತು ಗ್ರಾಮದ ಸ.ನಂ.732/ಎ ಮತ್ತು 733/ಎ ಗಳಲ್ಲಿ ಒಟ್ಟು 2.61 ಎಕರೆ ವಿಸ್ತೀರ್ಣದ ಜಮೀನನ್ನು ಗುರುತಿಸಿದ್ದು, ಸದರಿ ಜಮೀನು Local Fund Road ವರ್ಗಕ್ಕೆ ಸೇರಿರುವುದರಿಂದ, ಕರ್ನಾಟಕ ಭೂ ಕಂದಾಯ ಕಾಯ್ದೆ 1964ರ ಕಲಂ 68(1) ರಡಿ ಡಿ ರಿಜರ್ವ್ ಮಾಡಿ ಜಮೀನು ಕಾಯ್ದಿರಿಸಲು ಜಿಲ್ಲಾಧಿಕಾರಿಗಳ ಹಂತದಲ್ಲಿ ಪ್ರಾಥಮಿಕ ಅಧಿಸೂಚನೆ ನಮೂನೆ 27ನ್ನು ಪ್ರಕಟಿಸಲಾಗಿರುತ್ತದೆ.<br><br>ಜಮೀನು ಕಾಯ್ದಿರಿಸುವ ಅಂತಿಮ ಪ್ರಕ್ರಿಯೆ ಪೂರ್ಣಗೊಂಡ ನಂತರ ಕೊಟ್ಟೂರು ತಾಲ್ಲೂಕಿನಲ್ಲಿ ಹೊಸ ಮಿನಿ ವಿಧಾನಸೌಧ ಕಟ್ಟಡ ನಿರ್ಮಿಸಲು ಜಿಲ್ಲಾಧಿಕಾರಿಗಳಿಂದ ಸವಿವರ ಅಂದಾಜು ಪಟ್ಟಿ ಪಡೆದು ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ ಕ್ರಮವಹಿಸಲಾಗುತ್ತದೆ. |
| ಆ) | ಸದರಿ ಮಿನಿ ವಿಧಾನಸೌಧ ನಿರ್ಮಾಣಕ್ಕೆ ನಿವೇಶನವನ್ನು ಗುರುತಿಸಲಾಗಿದೆಯೇ ಮತ್ತು ನಿವೇಶನ ಹಸ್ತಾಂತರ ಪ್ರಕ್ರಿಯೆ ಯಾವ ಹಂತದಲ್ಲಿದೆ (ವಿವರ ನೀಡುವುದು)? | |

ಕಂಇ 5 ಡಬ್ಲ್ಯೂಬಿಆರ್ 2021

(ಆರ್. ಅಶೋಕ)
ಕಂದಾಯ ಸಚಿವರು

ಕರ್ನಾಟಕ ವಿಧಾನಸಭೆ
15ನೇ ವಿಧಾನಸಭೆ
9ನೇ ಅಧಿವೇಶನ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 353
ಮಾನ್ಯ ಸದಸ್ಯರ ಹೆಸರು : ಶ್ರೀ. ಭೀಮಾ ನಾಯ್ಕ ಎಸ್(ಹಗರಿಬೊಮ್ಮನಹಳ್ಳಿ)
ಉತ್ತರಿಸುವ ದಿನಾಂಕ : 01-02-2021
ಉತ್ತರಿಸುವ ಸಚಿವರು : ಮಾನ್ಯ ಉಪ ಮುಖ್ಯಮಂತ್ರಿಗಳು, (ಲೋಕೋಪಯೋಗಿ ಸಚಿವರು)

| ಕ್ರಮ ಸಂಖ್ಯೆ | ಪ್ರಶ್ನೆಗಳು | ಉತ್ತರ |
|---|---|---|
| ಅ) | ಹಗರಿಬೊಮ್ಮನಹಳ್ಳಿ ವಿಧಾನಸಭಾ ಕ್ಷೇತ್ರದ ಹಂಪಿ-ಕಮಲಾಪುರ ರಾಜ್ಯ ಹೆದ್ದಾರಿ 131ಕಿ.ಮೀ. 158.00 ರಿಂದ 180.75 ರವರೆಗೆ ರಸ್ತೆ ತೀರ ಹದಗೆಟ್ಟು ಸಾರ್ವಜನಿಕರಿಗೆ ತೊಂದರೆ ಉಂಟಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: | ಹಗರಿ ಬೊಮ್ಮನಹಳ್ಳಿ ವಿಧಾನ ಸಭಾ ಕ್ಷೇತ್ರದ ಹಂಪಿ-ಕಮಲಾಪುರ ರಾಜ್ಯ ಹೆದ್ದಾರಿ-131 ರ ಕಿ.ಮೀ 158.00 ರಿಂದ 180.75 ರವರೆಗೆ ರಸ್ತೆಯನ್ನು ಅಭಿವೃದ್ಧಿ ಪಡಿಸಲು ರಾಜ್ಯ ಹೆದ್ದಾರಿ ಅಭಿವೃದ್ಧಿ ಯೋಜನೆ ಹಂತ-4, ಘಟ್ಟ-2 ರಲ್ಲಿ ಕೈಗೊಳ್ಳುವ ಪ್ರಸ್ತಾವನೆಯು ಪರಿಶೀಲನಾ ಹಂತದಲ್ಲಿದೆ. |
| ಆ) | ಬಂದಿದ್ದಲ್ಲಿ, ಸದರಿ ರಸ್ತೆ ದುರಸ್ಥಿಗೆ ಸರ್ಕಾರ ಯಾವ ಕ್ರಮ ಕೈಗೊಂಡಿದೆ ಮತ್ತು ಅನುದಾನ ಯಾವಾಗ ಬಿಡುಗಡೆ ಮಾಡಲಾಗುವುದು: | ಸದರಿ ಪ್ರಸ್ತಾವನೆಯು ಪರಿಶೀಲನಾ ಹಂತದಲ್ಲಿದೆ. |
| ಇ) | ಸದರಿ ರಸ್ತೆ ದುರಸ್ಥಿ ಕುರಿತಂತೆ ರೂ:1650.00 ಲಕ್ಷ ಮೊತ್ತಕ್ಕೆ ಅಂದಾಜು ಪಟ್ಟಿಯನ್ನು ಸಿದ್ದಪಡಿಸಿ ಪ್ರಸ್ತಾವನೆ ಸಲ್ಲಿಸಲಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: | ಸದರಿ ಪ್ರಸ್ತಾವನೆಯನ್ನು ಎಸ್.ಹೆಚ್.ಡಿ.ಪಿ ಹಂತ-4ರ ಘಟ್ಟ-2ರಲ್ಲಿ ರೂ:1650.00 ಲಕ್ಷಗಳ ಅಂದಾಜು ಮೊತ್ತದಲ್ಲಿ ಕೈಗೆತ್ತಿಕೊಳ್ಳಲು ಪ್ರಸ್ತಾಪಿಸಿದ್ದು, ಪರಿಶೀಲನಾ ಹಂತದಲ್ಲಿದೆ. |
| ಈ) | ಸದರಿ ಪ್ರಸ್ತಾವನೆ ಯಾವ ಹಂತದಲ್ಲಿದೆ? | |

ಸಂಖ್ಯೆ. ಲೋಇ E-36 ಇಎಪಿ 2020

(ಗೋವಿಂದ ಎಂ. ಕಾರಜೋಳ)
ಮಾನ್ಯ ಉಪ ಮುಖ್ಯಮಂತ್ರಿಗಳು,
ಲೋಕೋಪಯೋಗಿ ಇಲಾಖೆ

**ಕರ್ನಾಟಕ ವಿಧಾನಸಭೆ**
**15ನೇ ವಿಧಾನಸಭೆ, 9ನೇ ಅಧಿವೇಶನ**

| | | |
|---|---|---|
| ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ | : | 353 |
| ಸದಸ್ಯರ ಹೆಸರು | : | ಶ್ರೀ. ಭೀಮಾ ನಾಯ್ಕ ಎಸ್ (ಹಗರಿಬೊಮ್ಮನಹಳ್ಳಿ) |
| ಉತ್ತರಿಸುವ ದಿನಾಂಕ | : | 01-02-2021 |
| ಉತ್ತರಿಸುವ ಸಚಿವರು | : | ಮಾನ್ಯ ಉಪಮುಖ್ಯಮಂತ್ರಿಗಳು ಹಾಗೂ ಲೋಕೋಪಯೋಗಿ ಸಚಿವರು |

| ಕ್ರಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ಹಗರಿಬೊಮ್ಮನಹಳ್ಳಿ ವಿಧಾನಸಭಾ ಕ್ಷೇತ್ರದ ಹಂಪಿ-ಕಮಲಾಪುರ ರಾಜ್ಯ ಹೆದ್ದಾರಿ – 131ರ ಕಿ.ಮೀ 158.00 ರಿಂದ 180.75ರವರೆಗೆ ರಸ್ತೆ ತೀರ ಹದಗೆಟ್ಟು ಸಾರ್ವಜನಿಕರಿಗೆ ತೊಂದರೆ ಉಂಟಾಗುತ್ತಿರುವುದು ಸರ್ಕಾರಕ್ಕೆ ಬಂದಿದೆಯೇ; | ಸರ್ಕಾರದ ಗಮನಕ್ಕೆ ಬಂದಿದೆ. |
| ಆ) | ಬಂದಿದ್ದಲ್ಲಿ, ಸದರಿ ರಸ್ತೆ ದುರಸ್ತಿಗೆ ಸರ್ಕಾರ ಯಾವ ಕ್ರಮ ಕೈಗೊಂಡಿದೆ ಮತ್ತು ಅನುದಾನ ಯಾವಾಗ ಬಿಡುಗಡೆ ಮಾಡಲಾಗುವುದು; | ಹಂಪಿ-ಕಮಲಾಪುರ ರಾಜ್ಯ ಹೆದ್ದಾರಿ – 131ರ ಕಿ.ಮೀ 158.00 ರಿಂದ 180.75ರವರೆಗಿನ ಸರಪಳಿಯಲ್ಲಿ ಕೈಗೆತ್ತಿಕೊಂಡಿರುವ ಕಾಮಗಾರಿಗಳ ವಿವರ ಕೆಳಕಂಡಂತಿದೆ. (ರೂ.ಲಕ್ಷಗಳಲ್ಲಿ) |

| ಕ್ರ ಸಂ. | ಲೆಕ್ಕ ಶೀರ್ಷಿಕೆ | ವರ್ಷ | ಕಾಮಗಾರಿಯ ಹೆಸರು | ಅಂದಾಜು ಮೊತ್ತ | ಕಾಮಗಾರಿಯ ಪ್ರಸ್ತುತ ಹಂತ |
|---|---|---|---|---|---|
| 1 | 5054–ರಾಜ್ಯ ಹೆದ್ದಾರಿ | 2016–17 | 2016–17ನೇ ಸಾಲಿನಲ್ಲಿ ರಾಜ್ಯ ಹೆದ್ದಾರಿ–131 ಹಂಪಿ-ಕಮಲಾಪುರ–ಹಗರಿಬೊಮ್ಮನಹಳ್ಳಿ ರಸ್ತೆ ಕಿ.ಮೀ 177.26 ರಿಂದ 178.00 ರವರೆಗೆ ಅಭಿವೃದ್ಧಿ | 125.00 | ಕಾಮಗಾರಿ ಪೂರ್ಣಗೊಂಡಿದೆ |
| 2 | 5054–ರಾಜ್ಯ ಹೆದ್ದಾರಿ | 2018–19 | 2018–19ನೇ ಸಾಲಿನಲ್ಲಿ ರಾಜ್ಯ ಹೆದ್ದಾರಿ–131 ಹಂಪಿ-ಕಮಲಾಪುರ–ಹಗರಿಬೊಮ್ಮನಹಳ್ಳಿ ರಸ್ತೆ ಕಿ.ಮೀ 174.80 ರಿಂದ 177.20ರವರೆಗೆ ಅಭಿವೃದ್ಧಿ | 300.00 | ಕಾಮಗಾರಿ ಪೂರ್ಣಗೊಂಡಿದೆ |
| 3 | ಡಿ.ಎಂ.ಎಫ್ | 2019–20 | 2019–20ನೇ ಸಾಲಿನಲ್ಲಿ ರಾಜ್ಯ ಹೆದ್ದಾರಿ–131 ಹಂಪಿ-ಕಮಲಾಪುರ–ಹಗರಿಬೊಮ್ಮನಹಳ್ಳಿ ರಸ್ತೆ ಕಿ.ಮೀ 178.00 ರಿಂದ 178.30ರವರೆಗೆ ಅಭಿವೃದ್ಧಿ | 60.00 | ಕಾಮಗಾರಿ ಪ್ರಗತಿಯಲ್ಲಿದೆ |

| ಕ್ರಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಇ) | ಸದರಿ ರಸ್ತೆಯ ದುರಸ್ತಿ ಕುರಿತಂತೆ ರೂ.1650.00 ಲಕ್ಷಗಳ ಮೊತ್ತಕ್ಕೆ ಅಂದಾಜು ಪಟ್ಟಿಯನ್ನು ಸಿದ್ದಪಡಿಸಿ ಪ್ರಸ್ತಾವನೆ ಸಲ್ಲಿಸಲಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಸದರಿ ರಸ್ತೆಯನ್ನು ರಾಜ್ಯ ಹೆದ್ದಾರಿ ಅಭಿವೃದ್ಧಿ ಯೋಜನೆ (ಎಸ್.ಹೆಚ್.ಡಿ.ಪಿ) ಹಂತ–4ರ ಘಟ್ಟ–2ರಲ್ಲಿ ರೂ:1650.00ಲಕ್ಷಗಳ ಅಂದಾಜು ಮೊತ್ತದಲ್ಲಿ ಕೈಗೆತ್ತಿಕೊಳ್ಳಲು ಪ್ರಸ್ತಾಪಿಸಿದ್ದು, ಪ್ರಸ್ತಾವನೆಯು ಪರಿಶೀಲನೆ ಹಂತದಲ್ಲಿದೆ. |
| ಈ) | ಸದರಿ ಪ್ರಸ್ತಾವನೆಯು ಯಾವ ಹಂತದಲ್ಲಿದೆ. | |

**ಲೋಇ/74/ಐಎಫ್‌ಎ/2021**

(ಗೋವಿಂದ ಎಂ ಕಾರಜೋಳ)
ಉಪಮುಖ್ಯಮಂತ್ರಿಗಳು ಹಾಗೂ
ಲೋಕೋಪಯೋಗಿ ಸಚಿವರು

## ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 602
ಮಾನ್ಯ ಸದಸ್ಯರ ಹೆಸರು : ಶ್ರೀ ಹೂಲಗೇರಿ.ಡಿ.ಎಸ್.(ಲಿಂಗಸಗೂರು)
ಉತ್ತರಿಸುವ ದಿನಾಂಕ : 01/02/2021
ಉತ್ತರಿಸುವ ಸಚಿವರು : ಮಾನ್ಯ ಉಪಮುಖ್ಯಮಂತ್ರಿಗಳು, ಲೋಕೋಪಯೋಗಿ ಇಲಾಖೆ.

| ಕ್ರಸ | ಪ್ರಶ್ನೆ | ಉತ್ತರ |
|---|---|---|
| ಅ) | ರಾಯಚೂರು ಜಿಲ್ಲೆಯ ಲಿಂಗಸಗೂರು ಹಾಗೂ ಮುದಗಲ್ಲ ಪಟ್ಟಣದಲ್ಲಿ ನೂತನ ಪ್ರವಾಸಿ ಮಂದಿರ ನಿರ್ಮಾಣ ಮಾಡಲು ಸರ್ಕಾರ ಕೈಗೊಂಡ ಕ್ರಮಗಳೇನು; | ರಾಯಚೂರು ಜಿಲ್ಲೆಯ ಲಿಂಗಸಗೂರು ಪಟ್ಟಣ ಹಾಗೂ ಮುದಗಲ್ಲ ಪಟ್ಟಣದಲ್ಲಿ ಹಾಲಿ ಇರುವ ಪ್ರವಾಸಿ ಮಂದಿರಗಳು ಸುಸ್ಥಿತಿಯಲ್ಲಿರುತ್ತದೆ. ಪ್ರಸಕ್ತ ಸಾಲಿನಲ್ಲಿ ಹೊಸ ಪ್ರವಾಸಿ ಮಂದಿರ ನಿರ್ಮಾಣ ಮಾಡುವ ಪ್ರಸ್ತಾವನೆ ಇರುವುದಿಲ್ಲ. |
| ಆ) | ಸದರಿ ಜಿಲ್ಲೆಯ ಲಿಂಗಸಗೂರು ತಾಲ್ಲೂಕಿನ ಆಮದಿಹಾಳ ಗ್ರಾಮದ ಹತ್ತಿರ ಇಂದಿರಾಗಾಂಧಿ ವಸತಿ ಶಾಲೆ ನಿರ್ಮಾಣ ಮಾಡಲು ಸರ್ಕಾರ ಕೈಗೊಂಡ ಕ್ರಮಗಳೇನು; | ಈ ಕಾಮಗಾರಿಯು ಮೂಲತ: ಸಮಾಜ ಕಲ್ಯಾಣ ಇಲಾಖೆಯ ಕಾಮಗಾರಿಯಾಗಿರುತ್ತದೆ. ಲೋಕೋಪಯೋಗಿ ಇಲಾಖೆಯ ಎಸ್.ಸಿ.ಪಿ ಯೋಜನೆಯಡಿ 2020-21ನೇ ಸಾಲಿನ ಅನುದಾನದಲ್ಲಿ ಈ ಕಾಮಗಾರಿಯನ್ನು ಕೈಗೊಳ್ಳಲು ರೂ.25.00 ಕೋಟಿ ಮೊತ್ತಕ್ಕೆ ಡಿ.ಪಿ.ಆರ್ ತಯಾರಿಸಲಾಗಿದ್ದು, ಆಡಳಿತಾತ್ಮಕ ಅನುಮೋದನೆ ನೀಡುವ ಪ್ರಸ್ತಾವನೆ ಪರಿಶೀಲನೆಯಲ್ಲಿದೆ. |
| ಇ) | ಲಿಂಗಸಗೂರು ವಿಧಾನಸಭಾ ಕ್ಷೇತ್ರದಲ್ಲಿ ಹಾದುಹೋಗಿರುವ NH-150-ಎ ತಿಂಥಣಿ ಬ್ರಿಡ್ಜ್‌ದಿಂದ ಮುಡಬಾಳ ಕ್ರಾಸ್‌ವರೆಗೆ ರಸ್ತೆ ಅಭಿವೃದ್ಧಿಗೊಳಿಸಲು ಸರ್ಕಾರ ತೆಗೆದುಕೊಂಡು ಕ್ರಮಗಳೇನು; | ರಾಷ್ಟ್ರೀಯ ಹೆದ್ದಾರಿ ಸಂಖ್ಯೆ: 150(ಎ) ತಿಂಥಣಿ ಬ್ರಿಡ್ಜ್ (ಕಿ.ಮೀ 89.300) ರಿಂದ ಹಟ್ಟಿ ಗೋಲ್ಡ ಮೈನ್ ರಸ್ತೆಯ ವರೆಗೆ (ಕಿ.ಮೀ 113.00) ಸುಮಾರು 5.00 ಕಿ.ಮೀ ಮೀಸಲು ಅರಣ್ಯ ಪ್ರದೇಶ ಇರುವುದರಿಂದ ಅರಣ್ಯ ಇಲಾಖೆಯ ಸಹಮತಿ ಹಾಗೂ ಭೂ-ಸ್ವಾಧೀನ ಪಡಿಸಿಕೊಂಡು, ಯೋಜನಾ ವರದಿಯನ್ನು ತಯಾರಿಸಿದ ನಂತರ ಕಾಮಗಾರಿಗಳನ್ನು ಕೈಗೊಳ್ಳಲಾಗುವುದು. |
| ಈ) | ಲಿಂಗಸಗೂರು ಪಟ್ಟಣದಲ್ಲಿ ರಿಂಗ್ ರಸ್ತೆ ನಿರ್ಮಾಣ ಮಾಡಲು ಸರ್ಕಾರ ತೆಗೆದುಕೊಂಡ ಕ್ರಮಗಳೇನು. | ಲಿಂಗಸಗೂರು ಪಟ್ಟಣದಲ್ಲಿ ರಿಂಗ್ ರಸ್ತೆ ನಿರ್ಮಾಣ ಕಾಮಗಾರಿಯು ತಾತ್ವಿಕವಾಗಿ ಅನುಮೋದನೆಗೊಂಡ NH-.150(ಎ), ಭೀಮರಾಯನಗುಡಿ-ಶಾಹಪೂರ-ಸೂರಪೂರ-ಲಿಂಗಸಗೂರ-ಮಸ್ಕಿ-ಸಿಂಧನೂರ ಬೈ-ಪಾಸ್ ನಿರ್ಮಿಸುವ ಕಾಮಗಾರಿಯಲ್ಲಿ ಪ್ರಸ್ತಾಪಿತ ಕಾಮಗಾರಿಯು ಒಳಗೊಂಡಿರುತ್ತದೆ. ಆದರೆ, ತಾತ್ವಿಕವಾಗಿ ರಾಷ್ಟ್ರೀಯ ಹೆದ್ದಾರಿಯನ್ನಾಗಿ ಮೇಲ್ದರ್ಜೆಗೆ ಪರಿವರ್ತಿಸುವ ಯೋಜನೆಗಳು ನೀತಿ ಆಯೋಗದ ಅಡಿ ಪರಿಶೀಲನೆಯಲ್ಲಿ ಇರುವುದರಿಂದ ಪ್ರಸ್ತುತ ಸ್ಥಗಿತಗೊಂಡಿದೆ. ನೀತಿ ಆಯೋಗದಿಂದ ಮಂಜೂರಾತಿ ದೊರೆತ ನಂತರ ಕಾಮಗಾರಿಯನ್ನು ಕೈಗೊಳ್ಳಲಾಗುವುದು. |

ಸಂಖ್ಯೆ: ಲೋಇ 02 ಬಿಎಲ್‌ಕ್ಯೂ 2021

(ಗೋವಿಂದ.ಎಂ.ಕಾರಜೋಳ)
ಉಪಮುಖ್ಯಮಂತ್ರಿ,
ಲೋಕೋಪಯೋಗಿ ಇಲಾಖೆ

## ಕರ್ನಾಟಕ ವಿಧಾನಸಭೆ

ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ: 608
ಸದಸ್ಯರ ಹೆಸರು ಶ್ರೀ ರಘುಪತಿ ಭಟ್ ಕೆ. (ಉಡುಪಿ)
ಉತ್ತರಿಸುವ ದಿನಾಂಕ: 01.02.2021
ಉತ್ತರಿಸುವ ಸಚಿವರು: ಉಪ ಮುಖ್ಯಮಂತ್ರಿಗಳು, ಲೋಕೋಪಯೋಗಿ ಇಲಾಖೆ

| ಕ್ರಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ರಸ್ತೆ ಅಗಲೀಕರಣ ಸಮಯದಲ್ಲಿ ರಸ್ತೆಯು ಮಾರ್ಜಿನ್‌ನಲ್ಲಿ ಬರುವ ಮರಗಳಿಂದ ಪೈಪ್‌ಲೈನ್, ವಿದ್ಯುತ್ ಕಂಬಗಳಿಂದ ಓ.ಎಫ್.ಸಿ. ಕೇಬಲ್‌ಗಳನ್ನು ಸ್ಥಳಾಂತರಿಸಲು ಅರಣ್ಯ ಇಲಾಖೆಯಿಂದ ಅನುಮತಿ ಪಡೆಯಬೇಕಾಗಿರುವುದರಿಂದ ಕಾಮಗಾರಿಗಳನ್ನು ಕೈಗೊಳ್ಳಲು ತುಂಬಾ ವಿಳಂಬವಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ರಸ್ತೆಯ ಅಗಲೀಕರಣ ಸಮಯದಲ್ಲಿ ರಸ್ತೆಯ ಮಾರ್ಜಿನ್‌ನಲ್ಲಿ ಬರುವ ಮರ, ಪೈಪ್‌ಲೈನ್, ವಿದ್ಯುತ್ ಕಂಬ ಮತ್ತು ಓ.ಎಫ್.ಸಿ. ಕೇಬಲ್‌ಗಳನ್ನು ಸ್ಥಳಾಂತರಿಸಲು ಈ ಕೆಳಕಂಡ ಪ್ರಾಧಿಕಾರಗಳನ್ನು ಸಂಪರ್ಕಿಸಿ ರಸ್ತೆ ಅಗಲೀಕರಣ ಕಾಮಗಾರಿಯನ್ನು ನಿರ್ವಹಿಸಲಾಗುತ್ತದೆ.<br>• ಮರಗಳನ್ನು ತೆರವುಗೊಳಿಸಲು ಅರಣ್ಯ ಇಲಾಖೆಗೆ<br>• ಕುಡಿಯುವ ನೀರಿನ ಪೈಪ್‌ಲೈನ್‌ಗಳನ್ನು ಸ್ಥಳಾಂತರಿಸಲು ನಗರ / ಪಟ್ಟಣ ನೀರು ಸರಬರಾಜು ಮಂಡಳಿಗೆ ಮತ್ತು ಸ್ಥಳೀಯ ಸಂಸ್ಥೆಗಳಿಗೆ<br>• ವಿದ್ಯುತ್ ಕಂಬಗಳನ್ನು ಸ್ಥಳಾಂತರಿಸಲು ಸಂಬಂಧಿಸಿದ ವಿದ್ಯುತ್ ಮಂಡಳಿಗಳಿಗೆ<br>• ಓ.ಎಫ್.ಸಿ. ಕೇಬಲ್‌ಗಳನ್ನು ಸ್ಥಳಾಂತರಿಸ ಬೇಕಾಗಿದ್ದಲ್ಲಿ ಬಿ.ಎಸ್.ಎನ್.ಎಲ್. ಇಲಾಖೆ / ಸಂಬಂಧಿಸಿದ ಕಂಪನಿಗಳಿಗೆ<br><br>ಇಲಾಖೆಗೆ ಸಂಬಂಧಿಸಿದಂತೆ ರಾಷ್ಟ್ರೀಯ ಹೆದ್ದಾರಿ, ರಾಜ್ಯ ಹೆದ್ದಾರಿ ಮತ್ತು ಜಿಲ್ಲಾ ಮುಖ್ಯ ರಸ್ತೆಗಳ ಅಗಲೀಕರಣಕ್ಕೆ ಸಂಬಂಧಿಸಿದಂತೆ ಮರ, ಪೈಪ್‌ಲೈನ್, ವಿದ್ಯುತ್ ಕಂಬ ಮತ್ತು ಓ.ಎಫ್.ಸಿ. ಕೇಬಲ್‌ಗಳನ್ನು ಸ್ಥಳಾಂತರಿಸಲು ಉಂಟಾಗುವ ಅಡಚಣೆಗಳನ್ನು ನಿವಾರಿಸಲು ಮುಖ್ಯ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ಪ್ರತೀ ಮಾಹೆ ವಿಡಿಯೋ ಕಾನ್ಫರೆನ್ಸ್ ಸಭೆ ಕರೆದು ಎಲ್ಲಾ ಜಿಲ್ಲಾಧಿಕಾರಿಗಳು / ಜಿಲ್ಲಾ ಮುಖ್ಯಾಧಿಕಾರಿಗಳೊಂದಿಗೆ ಚರ್ಚಿಸಿ ಅಡಚಣೆಗಳ ನಿವಾರಣೆಗೆ ಸೂಕ್ತ ನಿರ್ದೇಶನಗಳನ್ನು ನೀಡಲಾಗುತ್ತಿದೆ.<br><br>ಅಲ್ಲದೇ ಮರಗಳ ತೆರವು, ರಕ್ಷಿತಾರಣ್ಯ ಪ್ರದೇಶದಲ್ಲಿ ರಸ್ತೆ ನಿರ್ಮಾಣಕ್ಕೆ ಸಂಬಂಧಿಸಿದಂತೆ ಉಂಟಾಗುವ ಅಡಚಣೆಗಳನ್ನು ನಿವಾರಿಸಲು ಅಪರ ಮುಖ್ಯ ಕಾರ್ಯದರ್ಶಿಗಳು ಹಾಗೂ ಪಿಸಿಸಿಎಫ್ ಅರಣ್ಯ ಇಲಾಖೆ ಇವರೊಂದಿಗೆ ಪ್ರತೀ ಮಾಹೆಯ ಸಭೆ ನಡೆಸಿ ಅರಣ್ಯ ಇಲಾಖೆಗೆ ಸಂಬಂಧಿಸಿದ ಅಡಚಣೆಗಳನ್ನು ಬಗೆಹರಿಸಲು ಕ್ರಮವಹಿಸಲಾಗುತ್ತಿದೆ. |
| ಆ) | ಶೀಘ್ರವಾಗಿ ಅಗಲೀಕರಣದ ಕಾಮಗಾರಿಗಳನ್ನು ಕೈಗೊಳ್ಳಲು ಮತ್ತು ಸಮಸ್ಯೆಯನ್ನು ಶಾಶ್ವತವಾಗಿ ಪರಿಹರಿಸಲು ಸರ್ಕಾರ ಕೈಗೊಂಡ ಕ್ರಮಗಳೇನು? | |

ಲೋಇ 6 ಸಿಕ್ಯೂಎನ್ 2021(ಇ)

(ಗೋವಿಂದ ಎಂ. ಕಾರಜೋಳ)
ಉಪ ಮುಖ್ಯಮಂತ್ರಿಗಳು,
ಲೋಕೋಪಯೋಗಿ ಇಲಾಖೆ

# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 610 |
| ಮಾನ್ಯ ಸದಸ್ಯರ ಹೆಸರು | ಶ್ರೀ ಆನಂದ್ ಸಿದ್ದು ನ್ಯಾಮಗೌಡ (ಜಮಖಂಡಿ) |
| ಉತ್ತರಿಸಬೇಕಾದ ದಿನಾಂಕ | 01.02.2021 |
| ಉತ್ತರಿಸುವ ಸಚಿವರು | ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಜಮಖಂಡಿ ಮತಕ್ಷೇತ್ರದ ಪಂಚಮಸಾಲಿ ಸಮುದಾಯ ಭವನದ ಕಟ್ಟಡಕ್ಕೆ 1 ಕೋಟಿ ಮಂಜೂರಾಗಿ 2 ವರ್ಷವಾದರೂ ಇದುವರೆವಿಗೂ ಮೊದಲನೇ ಕಂತು ಕೇವಲ 7 ಲಕ್ಷ ಬಿಡುಗಡೆ ಆಗಿದ್ದು, 2ನೇ ಕಂತಿನ 50 ಲಕ್ಷವನ್ನು ಯಾವಾಗ ಬಿಡುಗಡೆ ಮಾಡಲಾಗುವುದು; | ಜಮಖಂಡಿ ಮತಕ್ಷೇತ್ರದ ಪಂಚಮಸಾಲಿ ಸಮುದಾಯ ಭವನ ಕಟ್ಟಡ ನಿರ್ಮಾಣಕ್ಕೆ ಬಿಡುಗಡೆಯಾಗಿರುವ ಅನುದಾನ ರೂ. 7.50 ಲಕ್ಷಗಳಿಗೆ ನಿಯಮಾನುಸಾರ ಹಣ ಬಳಕೆ ಪ್ರಮಾಣ ಪತ್ರ ಹಾಗೂ ಪ್ರಗತಿ ವರದಿ ಸಲ್ಲಿಸಿದ ನಂತರ, ಸದರಿ ಸಮುದಾಯ ಭವನಕ್ಕೆ 2ನೇ ಕಂತಿನ ಅನುದಾನವನ್ನು ಬಿಡುಗಡೆ ಮಾಡಲು ಕ್ರಮವಹಿಸಲಾಗುವುದು. ಎರಡನೇ ಕಂತಿನ ಅನುದಾನ ಬಿಡುಗಡೆಯು ಸಹ ಲಭ್ಯವಿರುವ ಅನುದಾನ ಹಾಗೂ ರಾಜ್ಯದ ಒಟ್ಟಾರೆ ಬೇಡಿಕೆಯನ್ನು ಅವಲಂಭಿಸಿರುತ್ತದೆ. |
| ಆ) | ರಾಜ್ಯದಲ್ಲಿ 2019-20 ಮತ್ತು 2020-21 ನೇ ಸಾಲಿನಲ್ಲಿ ಸಮುದಾಯ ಭವನಗಳಿಗೆ ಮಂಜೂರು ಮಾಡಿದ ಭವನಗಳು ಯಾವುವು; (ಜಿಲ್ಲಾವಾರು ವಿವರ ನೀಡುವುದು) | ರಾಜ್ಯದಲ್ಲಿ 2019-20 ಮತ್ತು 2020-21 ನೇ ಸಾಲಿನಲ್ಲಿ ವಿವಿಧ ಸಮುದಾಯಗಳ ಅಭಿವೃದ್ಧಿ ಕಾರ್ಯಕ್ರಮದಡಿ ವಿವಿಧ ಸಂಘ-ಸಂಸ್ಥೆಗಳಿಗೆ ಸಮುದಾಯ ಭವನ/ ವಿದ್ಯಾರ್ಥಿ ನಿಲಯ ಕಟ್ಟಡ ನಿರ್ಮಾಣಕ್ಕೆ ಸಹಾಯಧನ ಮಂಜೂರು ಮಾಡಿದ ವಿವರಗಳನ್ನು ಇಲಾಖಾ ಜಾಲತಾಣ http://bcwd.karnataka.gov.in/ ರಲ್ಲಿ ನೀಡಲಾಗಿದೆ. |
| ಇ) | ಸದರಿ ಸಮುದಾಯ ಭವನಗಳಿಗೆ ಇಲ್ಲಿಯವರೆಗೆ ಎಷ್ಟು ಕಂತುಗಳಲ್ಲಿ ಹಣ ಬಿಡುಗಡೆ ಮಾಡಲಾಗಿದೆ.? (ಮಾಹಿತಿ ನೀಡುವುದು) | ಸದರಿ ಸಮುದಾಯ ಭವನ/ವಿದ್ಯಾರ್ಥಿ ನಿಲಯಗಳಿಗೆ ಬಿಡುಗಡೆ ಮಾಡಿರುವ ಅನುದಾದ ವಿವರಗಳನ್ನು ಇಲಾಖಾ ಜಾಲತಾಣ http://bcwd.karnataka.gov.in/ ರಲ್ಲಿ ನೀಡಲಾಗಿದೆ. |

ಸಂಖ್ಯೆ:ಹಿಂವಕ 60 ಬಿಎಂಎಸ್ 2021

(ಕೋಟ ಶ್ರೀನಿವಾಸ ಪೂಜಾರಿ)
ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : **613**
ಸದಸ್ಯರ ಹೆಸರು : ಶ್ರೀ ಕುಮಾರಸ್ವಾಮಿ ಎಂ. ಪಿ (ಮೂಡಿಗೆರೆ)
ಉತ್ತರಿಸಬೇಕಾದ ದಿನಾಂಕ : 01-02-2021
ಉತ್ತರಿಸುವ ಸಚಿವರು : ಮಾನ್ಯ ಕಂದಾಯ ಸಚಿವರು

| ಪ್ರಶ್ನೆ | ಉತ್ತರ |
|---|---|
| (ಅ) ದಿನಾಂಕ:25.11.2020 ರಂದು ಮೂಡಿಗೆರೆ ವಿಧಾನ ಸಭಾ ಕ್ಷೇತ್ರದ ವ್ಯಾಪ್ತಿಯ ವಸ್ತಾರೆ ಹಾಗೂ ಹಂಚರವಳ್ಳಿ ಗ್ರಾಮಗಳಲ್ಲಿ ಐವರು ಮಕ್ಕಳು ಜಮೀನಿಗೆ ಔಷಧಿ ಸಿಂಪಡಿಸುವಾಗ ಕಾಲು ಜಾರಿ ಕೆರೆಗೆ ಬಿದ್ದು ಮೃತಪಟ್ಟಿರುವ ವಿಷಯ ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| (ಆ) ಬಂದಿದ್ದಲ್ಲಿ, ಸದರಿ ಬಡ ರೈತ ಕುಟುಂಬಗಳಿಗೆ ನೀಡಿದ ಪರಿಹಾರ ಹಣದ ಮೊತ್ತವೆಷ್ಟು? | ಕಂದಾಯ ಇಲಾಖೆ (ವಿಪತ್ತು ನಿರ್ವಹಣೆ) ವ್ಯಾಪ್ತಿಯಲ್ಲಿ ಪ್ರಕೃತಿ ವಿಕೋಪ ಪರಿಹಾರ ಕಾರ್ಯಗಳನ್ನು ನಿರ್ವಹಿಸಲಾಗುತ್ತಿದ್ದು ಪ್ರಕೃತಿ ವಿಪತ್ತನ್ನು ಹೊರತಪಡಿಸಿ ಆಕಸ್ಮಿಕ ಸಾವು ಸಂಭವಿಸಿದಲ್ಲಿ ಕೇಂದ್ರ ಸರ್ಕಾರದ NDRF/SDRF ಮಾರ್ಗಸೂಚಿಯನುಸಾರ ಪರಿಹಾರ ನೀಡಲು ಅವಕಾಶವಿರುವುದಿಲ್ಲ.<br><br>ಜಿಲ್ಲಾಧಿಕಾರಿಗಳು, ಚಿಕ್ಕಮಗಳೂರು ಜಿಲ್ಲೆ ಇವರು ಮಾನ್ಯ ಮುಖ್ಯಮಂತ್ರಿಯವರ ಪರಿಹಾರ ನಿಧಿಯಿಂದ ಕುಟುಂಬಸ್ಥರಿಗೆ ಪರಿಹಾರ ಪಡೆಯಲು ಕ್ರಮ ವಹಿಸಲಾಗುತ್ತಿದೆ ಎಂದು ಮಾಹಿತಿ ನೀಡಿರುತ್ತಾರೆ. |

ಕಂಇ 32 ಟಿಎನ್‌ಆರ್ 2021

**(ಆರ್. ಅಶೋಕ)**
ಕಂದಾಯ ಸಚಿವರು

# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 617

ಸದಸ್ಯರ ಹೆಸರು : ಶ್ರೀ ಶಿವಣ್ಣ.ಬಿ (ಆನೇಕಲ್)

ಉತ್ತರಿಸುವ ದಿನಾಂಕ : 01.02.2021

ಉತ್ತರಿಸುವ ಸಚಿವರು : ಕೃಷಿ ಸಚಿವರು

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಆನೇಕಲ್ ತಾಲ್ಲೂಕಿಗೆ ಪ್ರತ್ಯೇಕವಾಗಿ ಕೃಷಿ ಸಹಾಯಕ ನಿರ್ದೇಶಕರ ಹುದ್ದೆ ಸೃಜಿಸುವ ಪ್ರಸ್ತಾವನೆ ಸರ್ಕಾರದ ಮುಂದೆ ಇದೆಯೇ; (ವಿವರ ನೀಡುವುದು) | ಸರ್ಕಾರದ ಹಂತದಲ್ಲಿ ಯಾವುದೇ ಪ್ರಸ್ತಾವನೆ ಇರುವುದಿಲ್ಲ. |
| ಆ) | ಪ್ರಸ್ತುತ ಆನೇಕಲ್ ಮತ್ತು ಬೆಂಗಳೂರು ದಕ್ಷಿಣ ತಾಲ್ಲೂಕುಗಳು ಎರಡಕ್ಕೂ ಒಂದೇ ಕೃಷಿ ಸಹಾಯಕ ನಿರ್ದೇಶಕರ ಹುದ್ದೆ ಇರುವುದರಿಂದ ಪರಿಣಾಮಕಾರಿಯಾಗಿ ಆಡಳಿತ ನಿರ್ವಹಿಸಲು ಸಾಧ್ಯವಾಗದೇ ಇರುವುದು ಸರ್ಕಾರದ ಗಮನಕ್ಕೆ ಇದೆಯೇ; (ಪೂರ್ಣ ವಿವರ ನೀಡುವುದು) | ಪ್ರಸ್ತುತ ಆನೇಕಲ್ ತಾಲ್ಲೂಕು ಹಾಗೂ ಬೆಂಗಳೂರು ದಕ್ಷಿಣ ತಾಲ್ಲೂಕು ಎರಡೂ ತಾಲ್ಲೂಕುಗಳಿಗೂ ಒಬ್ಬರೇ ಕೃಷಿ ಸಹಾಯಕ ನಿರ್ದೇಶಕರಿದ್ದು, ಸಮರ್ಪಕ ಆಡಳಿತ ನಿರ್ವಹಣೆಗೆ ತೊಂದರೆಯಾಗುತ್ತಿರುವ ಬಗ್ಗೆ ಯಾವುದೇ ದೂರು ಸಾರ್ವಜನಿಕರಿಂದ ಬಂದಿರುವುದಿಲ್ಲ. |

ಸಂಖ್ಯೆ:AGRI-AGS-15/2021

(ಬಿ.ಸಿ. ಪಾಟೀಲ)
ಕೃಷಿ ಸಚಿವರು

# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 619
ಸದಸ್ಯರ ಹೆಸರು : ಶ್ರೀ ಶಿವಣ್ಣ ಬಿ. (ಆನೇಕಲ್)
ಉತ್ತರಿಸುವ ಸಚಿವರು : ಕಂದಾಯ ಸಚಿವರು
ಉತ್ತರಿಸುವ ದಿನಾಂಕ : 01.02.2021

********

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಆನೇಕಲ್ ತಾಲ್ಲೂಕು ಕೇಂದ್ರದಲ್ಲಿರುವ ಮಿನಿ ವಿಧಾನಸೌಧದ ಕೆಲವು ಕೊಠಡಿಗಳು ಸೋರುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; (ಪೂರ್ಣ ವಿವರ ನೀಡುವುದು) | ಆನೇಕಲ್ ತಾಲ್ಲೂಕು ಕಛೇರಿಯ ಮಿನಿ ವಿಧಾನಸೌಧದಲ್ಲಿನ ಕೆಲವು ಕೊಠಡಿಗಳು ಮಳೆಗಾಲದಲ್ಲಿ ಸೋರುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿರುವುದಿಲ್ಲ. |
| ಆ) | ಈ ತಾಲ್ಲೂಕು ಕೇಂದ್ರದಲ್ಲಿರುವ ಮಿನಿ ವಿಧಾನ ಸೌಧದ ದುರಸ್ತಿ / ನವೀಕರಣಕ್ಕೆ ಪ್ರಸ್ತಾವನೆ ಬಂದಿದೆಯೇ; ನವೀಕರಣ ಕಾರ್ಯಕ್ಕೆ ಸರ್ಕಾರ ತೆಗೆದುಕೊಂಡಿರುವ ಕ್ರಮಗಳೇನು? (ಪೂರ್ಣ ವಿವರ ನೀಡುವುದು) | ಮಿನಿ ವಿಧಾನ ಸೌಧದ ದುರಸ್ತಿ / ನವೀಕರಣಕ್ಕೆ ಸಂಬಂಧಿಸಿದಂತೆ ಪ್ರಸ್ತಾವನೆ ಸರ್ಕಾರದಲ್ಲಿ ಸ್ವೀಕೃತವಾಗಿರುವುದಿಲ್ಲ. |

ಕಂಇ 10 ಡಬ್ಲ್ಯೂಬಿಆರ್ 2021

(ಆರ್. ಅಶೋಕ)
ಕಂದಾಯ ಸಚಿವರು

# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 627 |
| ಮಾನ್ಯ ಸದಸ್ಯರ ಹೆಸರು | ಶ್ರೀ ಖಾದರ್ ಯು.ಟಿ (ಮಂಗಳೂರು) |
| ಉತ್ತರಿಸಬೇಕಾದ ದಿನಾಂಕ | 01.02.2021 |
| ಉತ್ತರಿಸುವ ಸಚಿವರು | ಮಾನ್ಯ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು. |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಕಳೆದ ಎರಡು ವರ್ಷಗಳಿಂದ ರಾಜ್ಯದಲ್ಲಿನ ಹಿಂದುಳಿದ ವರ್ಗಗಳ ವಿದ್ಯಾರ್ಥಿ/ ವಿದ್ಯಾರ್ಥಿನಿಯರಿಗೆ ನೀಡಿರುವ ವಿದ್ಯಾರ್ಥಿ ವೇತನವೆಷ್ಟು; (ಸಂಪೂರ್ಣ ವಿವರ ನೀಡುವುದು) | ಕಳೆದ ಎರಡು ವರ್ಷಗಳಿಂದ ರಾಜ್ಯದಲ್ಲಿನ ಹಿಂದುಳಿದ ವರ್ಗಗಳ ವಿದ್ಯಾರ್ಥಿ/ವಿದ್ಯಾರ್ಥಿನಿಯರಿಗೆ ನೀಡಿರುವ ವರ್ಷವಾರು ವಿದ್ಯಾರ್ಥಿವೇತನ ಪಾವತಿಸಿರುವ ಮೊತ್ತ ಹಾಗೂ ವಿದ್ಯಾರ್ಥಿಗಳ ಸಂಖ್ಯೆಯ ವಿವರಗಳು ಈ ಕೆಳಕಂಡಂತಿದೆ: (see table below) |
| ಆ) | ಕಳೆದ ಎರಡು ವರ್ಷಗಳಿಂದ ಹಿಂದುಳಿದ ವರ್ಗಗಳ ಈ ವಿದ್ಯಾರ್ಥಿಗಳಿಗೆ ನೀಡಿರುವ ಲ್ಯಾಬ್ ಟ್ಯಾಪ್ (LABTOP) ಗಳೆಷ್ಟು.? (ವಿವರ ಒದಗಿಸುವುದು) | ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯಿಂದ ವಿದ್ಯಾರ್ಥಿಗಳಿಗೆ ಯಾವುದೇ ಲ್ಯಾಪ್‌ಟ್ಯಾಪ್ (LAPTOP) ಗಳನ್ನು ಒದಗಿಸಿರುವುದಿಲ್ಲ. |

| ಯೋಜನೆ | ವರ್ಷ | ಮಂಜುರಾದ ವಿದ್ಯಾರ್ಥಿಗಳ ಸಂಖ್ಯೆ | ಮಂಜೂರಾದ ಮೊತ್ತ |
|---|---|---|---|
| ಮೆಟ್ರಿಕ್ ಪೂರ್ವ ವಿದ್ಯಾರ್ಥಿ ವೇತನ | 2018-19 | 2134900 | 191.16 |
| | 2019-20 | 2056008 | 190.33 |
| ಮೆಟ್ರಿಕ್ ನಂತರದ ವಿದ್ಯಾರ್ಥಿ ವೇತನ | 2018-19 | 500505 | 110.91 |
| | 2019-20 | 323196 | 72.12 |

ಸಂಖ್ಯೆ:ಹಿಂವಕ 65 ಬಿಎಂಎಸ್ 2021

(ಕೋಟ ಶ್ರೀನಿವಾಸ ಪೂಜಾರಿ)
ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ

# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 630 |
| ಮಾನ್ಯ ಸದಸ್ಯರ ಹೆಸರು | ಶ್ರೀ ಕೌಜಲಗಿ ಮಹಾಂತೇಶ್ ಶಿವಾನಂದ್ (ಬೈಲಹೊಂಗಲ) |
| ಉತ್ತರಿಸಬೇಕಾದ ದಿನಾಂಕ | 01.02.2021 |
| ಉತ್ತರಿಸುವ ಸಚಿವರು | ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಬೆಳಗಾವಿ ಜಿಲ್ಲೆ, ಬೈಲಹೊಂಗಲ ಮತಕ್ಷೇತ್ರದ ಒಕ್ಕುಂದ, ಬೈಲವಾಡ ಮತ್ತು ದೇವಲಾಪುರ ಗ್ರಾಮಗಳಲ್ಲಿ ಮೆಟ್ರಿಕ್-ನಂತರದ ವಿದ್ಯಾರ್ಥಿ ವಸತಿನಿಲಯಗಳು ಅವಶ್ಯವಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು.<br>ಪ್ರಸ್ತುತ ಬೈಲಹೊಂಗಲ ಮತಕ್ಷೇತ್ರದಲ್ಲಿ ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯಿಂದ ಮೆಟ್ರಿಕ್-ನಂತರದ ಒಂದು ಬಾಲಕರ ಹಾಗೂ ಎರಡು ಬಾಲಕಿಯರ ವಿದ್ಯಾರ್ಥಿನಿಲಯಗಳು ಕಾರ್ಯನಿರ್ವಹಿಸುತ್ತಿರುತ್ತವೆ. |
| ಆ) | ಸದರಿ ಗ್ರಾಮಗಳಲ್ಲಿ ಮೆಟ್ರಿಕ್-ನಂತರದ ವಿದ್ಯಾರ್ಥಿ ವಸತಿನಿಲಯಗಳನ್ನು ಪ್ರಾರಂಭಿಸಲು ಸರ್ಕಾರದ ಮುಂದೆ ಪ್ರಸ್ತಾವನೆ ಇದೆಯೇ; ಇದ್ದಲ್ಲಿ, ಪ್ರಸ್ತಾವನೆಯು ಯಾವ ಹಂತದಲ್ಲಿರುತ್ತದೆ; | ಬೆಳಗಾವಿ ಜಿಲ್ಲೆ, ಬೈಲಹೊಂಗಲ ಮತಕ್ಷೇತ್ರದ ಒಕ್ಕುಂದ, ಬೈಲವಾಡ ಮತ್ತು ದೇವಲಾಪುರ ಗ್ರಾಮಗಳಲ್ಲಿ ಮೆಟ್ರಿಕ್-ನಂತರದ ವಿದ್ಯಾರ್ಥಿನಿಲಯಗಳ ಮಂಜೂರಾತಿಗೆ ಬೇಡಿಕೆ ಇದ್ದು, ಜಿಲ್ಲೆಯಿಂದ ಪ್ರಸ್ತಾವನೆ ಪಡೆಯಲು ಕ್ರಮವಹಿಸಲಾಗಿರುತ್ತದೆ.<br>ಆದಾಗ್ಯೂ, ಹೊಸ ವಿದ್ಯಾರ್ಥಿನಿಲಯಗಳ ಮಂಜೂರಾತಿಯು ಆಯಾ ಆರ್ಥಿಕ ವರ್ಷದಲ್ಲಿ ಒದಗಿಸುವ ಅನುದಾನದ ಲಭ್ಯತೆಯನ್ನು ಆಧರಿಸಿರುತ್ತದೆ. |
| ಇ) | ಹಾಗಿದ್ದಲ್ಲಿ, ವಿದ್ಯಾರ್ಥಿ ವಸತಿನಿಲಯಗಳನ್ನು ಪ್ರಾರಂಭಿಸಲು ಸರ್ಕಾರ ಕ್ರಮ ಕೈಗೊಳ್ಳುವುದೇ? | ಹೊಸ ವಿದ್ಯಾರ್ಥಿನಿಲಯಗಳ ಮಂಜೂರಾತಿಯು ರಾಜ್ಯದ ಒಟ್ಟಾರೆ ಬೇಡಿಕೆ ಹಾಗೂ ಆಯವ್ಯಯದ ಲಭ್ಯತೆಯನ್ನು ಅವಲಂಬಿಸಿರುತ್ತದೆ. |

ಸಂಖ್ಯೆ:ಹಿಂವಕ 59 ಬಿಎಂಎಸ್ 2021

(ಕೋಟ ಶ್ರೀನಿವಾಸ ಪೂಜಾರಿ)
ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ

# ಕರ್ನಾಟಕ ವಿಧಾನ ಸಭೆ

| | | |
|---|---|---|
| ಮಾನ್ಯ ಸದಸ್ಯರ ಹೆಸರು | : | ಶ್ರೀ ಬಸವರಾಜ್ ದಡೆಸುಗೂರ್ (ಕನಕಗಿರಿ) |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | **632** |
| ಉತ್ತರಿಸಬೇಕಾದ ದಿನಾಂಕ | : | 01.02.2021 |
| ಉತ್ತರಿಸಬೇಕಾದ ಸಚಿವರು | : | ವಸತಿ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ಕೊಪ್ಪಳ ಜಿಲ್ಲೆಯ, ಕನಕಗಿರಿ ಮತಕ್ಷೇತ್ರದ ವ್ಯಾಪ್ತಿಯಲ್ಲಿ ರಾಜೀವ ಗಾಂಧಿ ಗ್ರಾಮೀಣ ವಸತಿ ಯೋಜನೆಯಡಿಯಲ್ಲಿ ಮನೆ ನಿರ್ಮಿಸಿಕೊಂಡಿರುವ ಫಲಾನುಭವಿಗಳಿಗೆ ಮೊತ್ತ ಪಾವತಿಯಾಗದೇ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ; | ರಾಜ್ಯದಲ್ಲಿ ವಿವಿಧ ವಸತಿ ಯೋಜನೆಗಳಡಿ ನಿರ್ಮಿಸಿಕೊಂಡಿರುವ / ಪ್ರಗತಿಯಲ್ಲಿರುವ ಮನೆಗಳನ್ನು ಇಂದಿರಾ ಮನೆ ಮೊಬೈಲ್ ಆಪ್ ಮೂಲಕ ಮನೆಗಳ ಪ್ರಗತಿಯನ್ನು ಜಿ.ಪಿ.ಎಸ್ ಗೆ ಅಳವಡಿಸಿ ಅರ್ಹಗೊಂಡ ನಂತರ ಸದರಿ ಮನೆಗಳ ಪ್ರಗತಿಯನ್ನು ಮತ್ತೊಮ್ಮೆ Geo ಆಧಾರಿತ Vigil App ಮೂಲಕ ಗ್ರಾಮೀಣ ಪ್ರದೇಶದಲ್ಲಿ ಮುಖ್ಯ ಕಾರ್ಯ ನಿರ್ವಹಣಾಧಿಕಾರಿಯವರು, ಜಿಲ್ಲಾ ಪಂಚಾಯತಿ ಹಾಗೂ ನಗರ ಪ್ರದೇಶದಲ್ಲಿ ಜಿಲ್ಲಾಧಿಕಾರಿಗಳು ಪರಿಶೀಲಿಸಿ, ಅನುದಾನ ಬಿಡುಗಡೆಗೆ ಶಿಫಾರಸ್ಸು ಮಾಡಿರುವ ಮನೆಗಳಿಗೆ ಆಧಾರ್ ಜೋಡಣೆಯಾದ ಫಲಾನುಭವಿಗಳ ಬ್ಯಾಂಕ್ ಖಾತೆಗಳಿಗೆ ನೇರವಾಗಿ ಅನುದಾನ ಬಿಡುಗಡೆ ಮಾಡಲಾಗುತ್ತಿದೆ.<br><br>ಅದರಂತೆ ಕೊಪ್ಪಳ ಜಿಲ್ಲೆಯ, ಕನಕಗಿರಿ ಮತ ಕ್ಷೇತ್ರದ ವ್ಯಾಪ್ತಿಯಲ್ಲಿ ವಿಜಿಲ್ ಆಪ್‌ನಲ್ಲಿ ಪರಿಶೀಲಿಸಿ ವಿವಿಧ ವಸತಿ ಯೋಜನೆಗಳಡಿ ಈವರೆಗೆ ರೂ.11.61 ಕೋಟಿಗಳನ್ನು ಬಿಡುಗಡೆ ಮಾಡಲಾಗಿದ್ದು, ಉಳಿದ ಮನೆಗಳಿಗೆ ಪ್ರಗತಿಗನುಗುಣವಾಗಿ ಶೀಘ್ರವಾಗಿ ಅನುದಾನ ಬಿಡುಗಡೆಗೆ ಕ್ರಮವಹಿಸಲಾಗುತ್ತಿದೆ. |
| (ಆ) | ಬಂದಿದ್ದಲ್ಲಿ, ಸದರಿ ಫಲಾನುಭವಿಗಳಿಗೆ ಮೊತ್ತವನ್ನು ಪಾವತಿಸಲು ಸರ್ಕಾರ ತೆಗೆದುಕೊಂಡಿರುವ ಕ್ರಮಗಳೇನು ? | |

ಸಂಖ್ಯೆ :ವಇ 47 ಹೆಚ್‌ಎಎಂ 2021

(ವಿ. ಸೋಮಣ್ಣ)
ವಸತಿ ಸಚಿವರು

# ಕರ್ನಾಟಕ ವಿಧಾನಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 633 |
| ಸದಸ್ಯರ ಹೆಸರು | : | ಶ್ರೀ ಬಸವರಾಜ್ ದಡೆಸುಗೂರ್ (ಕನಕಗಿರಿ) |
| ಉತ್ತರಿಸುವ ಸಚಿವರು | : | ಕಂದಾಯ ಸಚಿವರು |
| ಉತ್ತರಿಸುವ ದಿನಾಂಕ | : | 01.02.2021 |

********

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕೊಪ್ಪಳ ಜಿಲ್ಲೆಯ, ಕನಕಗಿರಿ ಮತ್ತು ಕಾರಟಗಿ ನೂತನ ತಾಲ್ಲೂಕು ಕೇಂದ್ರವಾಗಿದ್ದು, ತಾಲ್ಲೂಕುಗಳಲ್ಲಿ ಮಿನಿ ವಿಧಾನಸೌಧ ಕಟ್ಟಡ ನಿರ್ಮಾಣ ಮಾಡುವ ಪ್ರಸ್ತಾವನೆ ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು<br><br>ಕನಕಗಿರಿ ಹೊಸ ತಾಲ್ಲೂಕಿನಲ್ಲಿ ಮಿನಿ ವಿಧಾನಸೌಧ ನಿರ್ಮಿಸಲು ಕನಕಗಿರಿ ಗ್ರಾಮದ ಸರ್ವೆ ನಂ.11/5, 11/6, 11/7, 11/8ರ ಒಟ್ಟು ವಿಸ್ತೀರ್ಣ 6-12 ಎಕರೆ ಮತ್ತು ಕಾರಟಗಿ ತಾಲ್ಲೂಕಿನಲ್ಲಿ ಮಿನಿ ವಿಧಾನಸೌಧ ನಿರ್ಮಿಸಲು ಕಾರಟಗಿ ಗ್ರಾಮದ ಸರ್ವೆ ನಂ.377ರ ವಿಸ್ತೀರ್ಣ 11-00 ಎಕರೆ ಜಮೀನನ್ನು ಸ್ವಾಧೀನಪಡಿಸಿಕೊಳ್ಳಲು ಜಿಲ್ಲಾಧಿಕಾರಿ ಕೊಪ್ಪಳ ಇವರಿಂದ ಪ್ರಸ್ತಾವನೆ ಸ್ವೀಕೃತವಾಗಿದ್ದು, ಅನುಮೋದನೆ ನೀಡುವ ಬಗ್ಗೆ ಸರ್ಕಾರದ ಪರಿಶೀಲನೆಯಲ್ಲಿದೆ. |
| ಆ) | ಬಂದಿದ್ದಲ್ಲಿ, ಸರ್ಕಾರವು ತೆಗೆದುಕೊಂಡ ಕ್ರಮಗಳೇನು (ಆದೇಶದ ಪ್ರತಿಗಳೊಂದಿಗೆ ವಿವರ ನೀಡುವುದು)? | |

ಕಂಇ 9 ಡಬ್ಲ್ಯೂಬಿಆರ್ 2021

(ಆರ್. ಅಶೋಕ)
ಕಂದಾಯ ಸಚಿವರು

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 10
ಸದಸ್ಯರ ಹೆಸರು : ಶ್ರೀ ಸುಬ್ಬಾರೆಡ್ಡಿ ಎಸ್.ಎನ್. (ಬಾಗೇಪಲ್ಲಿ)
ಉತ್ತರಿಸುವ ದಿನಾಂಕ : 01-02-2021
ಉತ್ತರಿಸುವ ಸಚಿವರು : ಕಂದಾಯ ಸಚಿವರು

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಬಾಗೇಪಲ್ಲಿ ತಾಲ್ಲೂಕಿನಲ್ಲಿ ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯ ವಿದ್ಯಾರ್ಥಿನಿಲಯಕ್ಕೆ ಹಸ್ತಾಂತರಿಸಲಾಗಿರುವ ಜಮೀನನ್ನು ರದ್ದು ಮಾಡಲು ಕಾರಣಗಳೇನು; | ಬಾಗೇಪಲ್ಲಿ ಗ್ರಾಮದ ಸ.ನಂ.137 ರಲ್ಲಿ 1-05 ಎಕರೆ/ಗುಂಟೆ ಜಮೀನನ್ನು ಮೆಟ್ರಿಕ್ ಪೂರ್ವ ಹಾಗೂ ಮೆಟ್ರಿಕ್ ನಂತರದ ಬಾಲಕಿಯರ ವಿದ್ಯಾರ್ಥಿ ನಿಲಯದ ನಿರ್ಮಾಣಕ್ಕಾಗಿ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ, ಬಾಗೇಪಲ್ಲಿ ರವರಿಗೆ ಜಿಲ್ಲಾಧಿಕಾರಿಯವರ ಅಧಿಕೃತ ಜ್ಞಾಪನ ಪತ್ರ ಸಂ:ಎಲ್.ಎನ್.ಡಿ.ಸಿ.ಆರ್165/2010-11 ದಿ:20/04/2011 ರನ್ವಯ ಮಂಜೂರು ಮಾಡಲಾಗಿರುತ್ತದೆ.<br>ಆದರೆ ಸದರಿ ಜಮೀನಿಗೆ ಸಂಬಂಧಿಸಿದಂತೆ ನ್ಯಾಯಾಲಯದಲ್ಲಿ ಪ್ರಕರಣ ಬಾಕಿ ಇದ್ದ ಕಾರಣ ಸದರಿ ಮಂಜೂರಾತಿಯನ್ನು ರದ್ದುಪಡಿಸಿ, ಪರ್ಯಾಯವಾಗಿ ಬಾಗೇಪಲ್ಲಿ ಗ್ರಾಮದ ಸ.ನಂ.148 ರಲ್ಲಿ 1-04 ಎಕರೆ/ಗುಂಟೆ ಜಮೀನನ್ನು ಬಿ.ಸಿ.ಎಂ. ಮೆಟ್ರಿಕ್ ಪೂರ್ವ ಮತ್ತು ನಂತರ ಬಾಲಕಿಯರ ವಿದ್ಯಾರ್ಥಿ ನಿಲಯ ನಿರ್ಮಾಣಕ್ಕಾಗಿ ತಾಲ್ಲೂಕು ಹಿಂದುಳಿದ ವರ್ಗಗಳ ಕಲ್ಯಾಣಾಧಿಕಾರಿಗಳು, ಬಾಗೇಪಲ್ಲಿ ತಾಲ್ಲೂಕು ರವರಿಗೆ ಜಿಲ್ಲಾಧಿಕಾರಿಯವರ ಅಧಿಕೃತ ಜ್ಞಾಪನ ಪತ್ರ ಸಂ:ಎಲ್.ಎನ್.ಡಿ.ಸಿ.ಆರ್/338/2015-16, ದಿನಾಂಕ:28/03/2016 ರನ್ವಯ ಮಂಜೂರು ಮಾಡಲಾಗಿರುತ್ತದೆ. |
| ಆ) | ಸರ್ವೆ ನಂ-138ರಲ್ಲಿ ಜಮೀನು ಲಭ್ಯವಿಲ್ಲ ಎಂದು ಜಿಲ್ಲಾಧಿಕಾರಿಗಳು ಆದೇಶ ರದ್ದು ಮಾಡಲು ಕಾರಣಗಳೇನು; | ಬಾಗೇಪಲ್ಲಿ ಗ್ರಾಮದ ಸ.ನಂ.138 ರ ಜಮೀನಿನ ಹಿಸ್ಸಾ ಸರ್ವೇ ಟಿಪ್ಪಣಿ ಪುಸ್ತಕದಂತೆ ಪ್ರಸ್ತಾಪಿತ ಜಮೀನು ಹಿಡುವಳಿ ಜಮೀನಾಗಿರುತ್ತದೆ. |
| ಇ) | ಸದರಿ ಜಮೀನಿನ ಮಂಜೂರಾತಿಗೆ ಪ್ರಸ್ತಾವನೆ ಸಲ್ಲಿಸುವಾಗ ಸರ್ವೆ, ನಕ್ಷೆ, ತಯಾರಿ ಮಾಡಲಾಗಿದ್ದು, ಮಂಜೂರಾತಿ ಆದೇಶ ನೀಡಲಾಗಿರುವುದು ನಿಜವೇ; | ಬಾಗೇಪಲ್ಲಿ ಗ್ರಾಮದ ಸ.ನಂ.137 ಮತ್ತು 148 ಜಮೀನುಗಳಿಗೆ ಸಂಬಂಧಿಸಿದಂತೆ ಸರ್ವೇ, ನಕ್ಷೆ, ತಯಾರಿ ಮಾಡಲಾಗಿದ್ದು, ಸದರಿ ಜಮೀನುಗಳಿಗೆ ಮಂಜೂರಾತಿ ಆದೇಶವನ್ನು ನೀಡಲಾಗಿರುತ್ತದೆ. |

| | | |
|---|---|---|
| ಈ) | ಹಾಗಿದ್ದಲ್ಲಿ, ಮಂಜೂರಾತಿ ಆದೇಶ ಆದ ನಂತರ ಜಮೀನು ಲಭ್ಯವಿಲ್ಲವೆಂದು ಆದೇಶ ರದ್ದು ಮಾಡಲಾಗಿದ್ದು, ಮಂಜೂರಾತಿ ಮಾಡುವಾಗ ಇದ್ದ ಜಮೀನು ಯಾವುದು; ಹಾಗಿದ್ದಲ್ಲಿ ತಪ್ಪಾಗಿ ಪ್ರಸ್ತಾವನೆ ಸಲ್ಲಿಸಲಾಗಿದೆಯೇ; | ಬಾಗೇಪಲ್ಲಿ ಗ್ರಾಮದ ಸ.ನಂ.137 ರಲ್ಲಿ 1–05 ಎಕರೆ/ಗುಂಟೆ ಜಮೀನನ್ನು ಮೆಟ್ರಿಕ್ ಪೂರ್ವ ಹಾಗೂ ಮೆಟ್ರಿಕ್ ನಂತರದ ಬಾಲಕಿಯರ ವಿದ್ಯಾರ್ಥಿ ನಿಲಯದ ನಿರ್ಮಾಣಕ್ಕಾಗಿ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ, ಬಾಗೇಪಲ್ಲಿ ರವರಿಗೆ ಜಿಲ್ಲಾಧಿಕಾರಿಯವರ ಅಧಿಕೃತ ಜ್ಞಾಪನ ಪತ್ರ ಸಂ:ಎಲ್.ಎನ್.ಡಿ.ಸಿ.ಆರ್165/2010–11 ದಿ:20/04/2011 ರನ್ವಯ ಮಂಜೂರು ಮಾಡಲಾಗಿರುತ್ತದೆ.<br>ಆದರೆ ಸದರಿ ಜಮೀನಿಗೆ ಸಂಬಂಧಿಸಿದಂತೆ ನ್ಯಾಯಾಲಯದಲ್ಲಿ ಪ್ರಕರಣ ಬಾಕಿ ಇದ್ದ ಕಾರಣ ಸದರಿ ಮಂಜೂರಾತಿಯನ್ನು ರದ್ದುಪಡಿಸಿ, ಪರ್ಯಾಯವಾಗಿ ಬಾಗೇಪಲ್ಲಿ ಗ್ರಾಮದ ಸ.ನಂ.148 ರಲ್ಲಿ 1–04 ಎಕರೆ/ಗುಂಟೆ ಜಮೀನನ್ನು ಬಿ.ಸಿ.ಎಂ. ಮೆಟ್ರಿಕ್ ಪೂರ್ವ ಮತ್ತು ನಂತರ ಬಾಲಕಿಯರ ವಿದ್ಯಾರ್ಥಿ ನಿಲಯ ನಿರ್ಮಾಣಕ್ಕಾಗಿ ತಾಲ್ಲೂಕು ಹಿಂದುಳಿದ ವರ್ಗಗಳ ಕಲ್ಯಾಣಾಧಿಕಾರಿಗಳು, ಬಾಗೇಪಲ್ಲಿ ತಾಲ್ಲೂಕು ರವರಿಗೆ ಜಿಲ್ಲಾಧಿಕಾರಿಯವರ ಅಧಿಕೃತ ಜ್ಞಾಪನ ಪತ್ರ ಸಂ:ಎಲ್.ಎನ್.ಡಿ.ಸಿ.ಆರ್/338/2015–16, ದಿನಾಂಕ:28/03/2016 ರನ್ವಯ ಮಂಜೂರು ಮಾಡಲಾಗಿರುತ್ತದೆ. |
| ಉ) | ಈ ಜಮೀನು ಭೂ ಕಬಳಿಕೆದಾರರ ಪಾಲಾಗಿರುವುದು ನಿಜವೇ; | ಬಾಗೇಪಲ್ಲಿ ಗ್ರಾಮದ ಸ.ನಂ.137 ರಲ್ಲಿ 1–05 ಎಕರೆ/ಗುಂಟೆ ಜಮೀನು ಮೆಟ್ರಿಕ್ ಪೂರ್ವ ಹಾಗೂ ಮೆಟ್ರಿಕ್ ನಂತರದ ಬಾಲಕಿಯರ ವಿದ್ಯಾರ್ಥಿ ನಿಲಯದ ನಿರ್ಮಾಣಕ್ಕಾಗಿ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ, ಬಾಗೇಪಲ್ಲಿ ರವರಿಗೆ ಮಂಜೂರು ಮಾಡಿರುವ ಪ್ರದೇಶದಲ್ಲಿ ಕೆಲವರು ಅಕ್ರಮವಾಗಿ ಕಟ್ಟಡಗಳನ್ನು ನಿರ್ಮಿಸಿಕೊಂಡು, ಕರ್ನಾಟಕ ಭೂ ಕಂದಾಯ ಅಧಿನಿಯಮ, 1964 ಕಲಂ 94ಸಿಸಿ ರಡಿಯಲ್ಲಿ ಅರ್ಜಿಗಳನ್ನು ಸಲ್ಲಿಸಿರುತ್ತಾರೆ. |
| ಊ) | ಹಾಗಿದ್ದಲ್ಲಿ ಸರ್ಕಾರ ಕೈಗೊಂಡಿರುವ ಕ್ರಮಗಳೇನು? | ಕರ್ನಾಟಕ ಭೂ ಕಂದಾಯ ಅಧಿನಿಯಮ, 1964 ಕಲಂ 94ಸಿಸಿ ರಡಿಯಲ್ಲಿ ಸಲ್ಲಿಸಿರುವ ಅರ್ಜಿಗಳನ್ನು ನಿಯಮಾನುಸಾರ ಪರಿಶೀಲಿಸಿ ಅಗತ್ಯ ಕ್ರಮ ಕೈಗೊಳ್ಳಲಾಗುತ್ತಿದೆ. |

**ಸಂಖ್ಯೆ: ಆರ್‌ಡಿ 04 ಎಲ್‌ಜಿಕ್ಯೂ 2021**

(ಆರ್. ಅಶೋಕ)
ಕಂದಾಯ ಸಚಿವರು.

# ಕರ್ನಾಟಕ ವಿಧಾನಸಭೆ

| | | |
|---|---|---|
| 1 | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 21 |
| 2 | ಸದಸ್ಯರ ಹೆಸರು | ಶ್ರೀ ಬಳ್ಳಾರಿ ವಿರೂಪಾಕ್ಷಪ್ಪ ರುದ್ರಪ್ಪ (ಬ್ಯಾಡಗಿ) |
| 3 | ಉತ್ತರಿಸಬೇಕಾದ ದಿನಾಂಕ | 01.02.2021 |
| 4 | ಉತ್ತರಿಸುವ ಸಚಿವರು | ಕಂದಾಯ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದ ಜಮೀನುಗಳ ಕಾಲುದಾರಿಗಳು ಯಂತ್ರೋಪಕರಣಗಳನ್ನು ಸಾಗಿಸುವ ರಸ್ತೆ ಗಳಾಗಿ ಮಾರ್ಪಾಡಾಗಿರುವುದರಿಂದ ರೈತರ ಮಧ್ಯೆ ತಂಟೆ ತಕರಾರುಗಳು ಹಾಗೂ ಪೊಲೀಸ್ ಕೇಸ್‌ಗಳಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ.<br>ರಾಜ್ಯದ ಕಂದಾಯ ಹಾಗೂ ಭೂಮಾಪನ ಇಲಾಖೆಯ ಗ್ರಾಮ ನಕಾಶೆಯಂತೆ ಸರ್ವೆ ನಂಬರ್ ಗಳಲ್ಲಿ ಹಿಸ್ಸಾ ಪೋಡಿಯಂತೆ ಹಿಸ್ಸಾ ನಂಬರ್ ಗಳಲ್ಲಿ ಜಮೀನುಗಳಿಗೆ ವ್ಯವಸಾಯ ಮಾಡಲು ನಕಾಶೆ ಕಂಡ ಬಂಡಿದಾರಿ, ಕಾಲುದಾರಿಯ ಸರ್ವೆ ನಂಬರ್ ಹಿಸ್ಸಾ ನಂಬರ್ ಗಳಲ್ಲಿ ಹಾದು ಹೋಗುತಿದ್ದಲ್ಲಿ ಬಳಕೆಗೆ ಹಕ್ಕು ಇರುತ್ತದೆ.<br>ನಕಾಶೆಯಲ್ಲಿ ಗುರುತಿಸದ ವ್ಯಕ್ತಿಗತ ಉಪಯೋಗಕ್ಕೆ ಬಳಸದೆ ಬಹು ವರ್ಷಗಳಿಂದ ಸಾರ್ವಜನಿಕ ಉಪಯೋಗಕ್ಕಾಗಿ ರೂಡಿಗತವಾಗಿ ಬಳಕೆಯಲ್ಲಿರುವ ರಸ್ತೆಗಳು, ಕಾಲುದಾರಿ ಹಾಗೂ ಬಂಡಿದಾರಿಗಳ ಅನುಭೋಗ/ವಹಿವಾಟು (easement) ಬಳಸುವ ಹಕ್ಕಿನ ಬಗ್ಗೆ ತಕರಾರುಗಳಿದ್ದಲ್ಲಿ/ಬಳಸಲು ತೊಂದರೆ ಯಾದಲ್ಲಿ ಕರ್ನಾಟಕ ಭೂ ಕಂದಾಯ ಅಧಿನಿಯಮ ಕಲಂ 67(2) ರ ಅಡಿಯಲ್ಲಿ ಉಪವಿಭಾಗಾಧಿಕಾರಿಗಳು ಇತ್ಯರ್ಥಪಡಿಸಲು ಅವಕಾಶ ಇರುತ್ತದೆ.<br>ಪ್ರಸ್ತುತ ಜಮೀನು ಸ್ಥಿತಿಗಳಂತೆ ಬಳಕೆಯಲ್ಲಿರುವ ರಸ್ತೆ, ಕಾಲುದಾರಿ, ಬಂಡಿದಾರಿ ಇತ್ಯಾದಿಗಳನ್ನು ಗ್ರಾಮ ನಕಾಶೆ ಗಳಲ್ಲಿ ಸಮಗ್ರವಾಗಿ ಗುರುತಿಸಿ ಇಂಡೀಕರಿಸುವ ಕಾರ್ಯವನ್ನು ಮರು ಭೂಮಾಪನ ಕಾಲದಲ್ಲಿ ಮಾಡಲಾಗುತ್ತದೆ.<br>ರಾಜ್ಯದಲ್ಲಿ ಮರು ಭೂಮಾಪನ ಕಾರ್ಯವನ್ನು ಹಂತ ಹಂತವಾಗಿ ರಾಜ್ಯದ ಎಲ್ಲಾ ಜಿಲ್ಲೆಗಳಲ್ಲಿ ಸರ್ವೆ ಆಫ್ ಇಂಡಿಯಾದ ಸಹಯೋಗದೊಂದಿಗೆ ಡ್ರೋನ್ ತಂತ್ರಾಂಶ ವನ್ನು ಬಳಸಿ ಮಾಡಲು ತೀರ್ಮಾನಿಸಲಾಗಿದ್ದು, ಮೊದಲ ಹಂತವಾಗಿ ಸರ್ಕಾರದ ಆದೇಶ ಸಂ.ಆರ್.ಡಿ.158 ಭೂದಾಸೇ 2018, ದಿನಾಂಕ: 07-11-2018 ಮತ್ತ 28-12-2018 ರಲ್ಲಿ ತುಮಕೂರು, ರಾಮನಗರ, ಹಾಸನ, ಬೆಳಗಾವಿ ಮತ್ತು ಉತ್ತರ ಕನ್ನಡ ಜಿಲ್ಲೆಗಳಲ್ಲಿ ಮಾಡಲು ಅನುಮತಿ ನೀಡಲಾಗಿದೆ. ಮತ್ತು ಸರ್ವೆ ಕಾರ್ಯ ಪ್ರಗತಿಯಲ್ಲಿದೆ.<br>ಉಳಿದ ಜಿಲ್ಲೆಗಳಿಗೂ ಸಹ ಹಂತ ಹಂತವಾಗಿ ಮರು ಭೂಮಾಪನ ಕಾರ್ಯವನ್ನು ವಿಸ್ತರಿಸಿ ಗ್ರಾಮ ನಕಾಶೆಗಳಲ್ಲಿ ಜಮೀನು ಸ್ಥಿತಿಯಂತೆ ಬಹಳ ವರ್ಷಗಳಿಂದ ಸಾರ್ವಜನಿಕ ಬಳಕೆಯಲ್ಲಿರುವ ರಸ್ತೆ, ಕಾಲುದಾರಿ, ಬಂಡಿದಾರಿಗಳನ್ನು ಕಾಲೋಚಿತಗೊಳಿಸಲು ನಕಾಶೆಯನ್ನು ಸಿದ್ಧಪಡಿಸಲಾಗು ವುದು. |
| ಆ) | ಬಂದಿದ್ದಲ್ಲಿ, ಸದರಿ ಕಾಲುದಾರಿಗಳನ್ನು ಕೃಷಿ ಚಟುವಟಿಕೆಗಳಿಗಾಗಿ ಅನುಕೂಲವಾಗುವಂತೆ ಪುನರ್ ಸರ್ವೆಗೊಳಿಸಿ ಕಂದಾಯ ನಕ್ಷೆ ಮಾರ್ಪಾಡು ಮಾಡಲು ಸರ್ಕಾರ ತೆಗೆದುಕೊಂಡ ಕ್ರಮವೇನು; (ವಿವರ ನೀಡುವುದು) | |

| | | |
|---|---|---|
| ಇ) | ಬ್ಯಾಡಗಿ ವಿಧಾನಸಭಾ ಕ್ಷೇತ್ರದಲ್ಲಿ ಇಂತಹ ಪ್ರಕರಣಗಳಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ? | ಬಂದಿದೆ.<br>ಬ್ಯಾಡಗಿ ವಿಧಾನಸಭಾ ಕ್ಷೇತ್ರದಲ್ಲಿ ಮರು ಭೂಮಾಪನ ಕಾರ್ಯವನ್ನು ಕೈಗೆತ್ತಿಕೊಂಡಿರುವುದಿಲ್ಲ. ಆದರೆ ಉಳಿದ ಜಿಲ್ಲೆಗಳಂತೆ ಹಾವೇರಿ ಜಿಲ್ಲೆಯ ಬ್ಯಾಡಗಿ ವಿಧಾನಸಭಾ ಕ್ಷೇತ್ರದಲ್ಲಿಯೂ ಸಹ ಮರು ಭೂಮಾಪನ ಕಾರ್ಯವನ್ನು ಹಂತ ಹಂತವಾಗಿ ಕೈಗೊಂಡು ಗ್ರಾಮ ನಕಾಶೆಗಳಲ್ಲಿ ಜಮೀನು ಸ್ಥಿತಿಯಂತೆ ಬಹಳ ವರ್ಷಗಳಿಂದ ಸಾರ್ವಜನಿಕ ಬಳಕೆಯಲ್ಲಿರುವ ರಸ್ತೆ, ಕಾಲುದಾರಿ, ಬಂಡಿದಾರಿಗಳನ್ನು ಕಾಲೋಚಿತಗೊಳಿಸಲು ನಕಾಶೆಯನ್ನು ಸಿದ್ಧಪಡಿಸಲಾಗುವುದು. |

**ಸಂಖ್ಯೆ: ಕಂಇ 13 ಎಸ್‌ಎಸ್‌ಸಿ 2021**

(ಆರ್.ಅಶೋಕ)
ಕಂದಾಯ ಸಚಿವರು

# ಕರ್ನಾಟಕ ವಿಧಾನಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 25
2. ಸದಸ್ಯರ ಹೆಸರು : ಶ್ರೀ ಸೋಮಲಿಂಗಪ್ಪ ಎಂ.ಎಸ್. (ಸಿರಗುಪ್ಪ)
3. ಉತ್ತರಿಸುವ ದಿನಾಂಕ : 01.02.2021
4. ಉತ್ತರಿಸುವ ಸಚಿವರು : ಕಂದಾಯ ಸಚಿವರು

| | ಪ್ರಶ್ನೆ | ಉತ್ತರ |
|---|---|---|
| (ಅ) | ಕರ್ನಾಟಕ ರಾಜ್ಯದ ಬಳ್ಳಾರಿ ಜಿಲ್ಲೆಯ ಹಲವು ಇನಾಂ ರದ್ದತಿ ಕಾಯ್ದೆಯಡಿಯಲ್ಲಿ ಇನ್ನೂ ಬಾಕಿ ಉಳಿದಿರುವ ಪ್ರಕರಣಗಳೆಷ್ಟು? [ತಾಲ್ಲೂಕುವಾರು ವಿವರ ನೀಡುವುದು] | ಬಳ್ಳಾರಿ ಜಿಲ್ಲೆಯ 11 ತಾಲ್ಲೂಕುಗಳಲ್ಲಿ ಒಟ್ಟು 4614 ಇನಾಂ ಪ್ರಕರಣಗಳು ಬಾಕಿ ಇರುತ್ತವೆ. ತಾಲ್ಲೂಕುವಾರು ವಿವರಗಳನ್ನು ಅನುಬಂಧ-1 ರಲ್ಲಿ ಒದಗಿಸಲಾಗಿದೆ. |
| (ಆ) | ಬಾಕಿ ಉಳಿದಿರುವ ಪ್ರಕರಣಗಳಿಗೆ ಸಂಬಂಧಿಸಿದಂತೆ ನಮೂನೆ-1ರಲ್ಲಿ ಅರ್ಜಿ ಸಲ್ಲಿಸಲು ಸರ್ಕಾರ ಕಾಲಾವಕಾಶ ನೀಡಲಾಗಿದೆಯೇ; | ಇನಾಂ ಜಮೀನುಗಳ ಮರು ಮಂಜೂರಾತಿಗಾಗಿ ಅರ್ಜಿ ಸಲ್ಲಿಸಲು ಕಾಲಾವಧಿ ವಿಸ್ತರಿಸುವ ಕುರಿತು ಪರಿಶೀಲಿಸಿ ವರದಿ ನೀಡಲು ಶ್ರೀ ಪಿ.ಎಸ್.ವಸ್ತ್ರದ್, ನಿವೃತ್ತ ಐ.ಎ.ಎಸ್. ಅಧಿಕಾರಿ ಇವರ ಅಧ್ಯಕ್ಷತೆಯಲ್ಲಿ ಇತರೆ ಮೂವರು ಸದಸ್ಯರನ್ನೊಳಗೊಂಡ ಸಮಿತಿಯೊಂದನ್ನು ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 02 ಐಎನ್‌ಎಂ 2019, ದಿನಾಂಕ: 04.11.2019ರಲ್ಲಿ ರಚಿಸಲಾಗಿದೆ. |
| (ಇ) | ಹಾಗಿಲ್ಲದಿದ್ದಲ್ಲಿ, ಕಂದಾಯ ದಾಖಲೆಗಳಲ್ಲಿ ಇನಾಂ/ಸರ್ಕಾರ ಎಂಬ ನಮೂದುಗಳನ್ನು ರದ್ದುಪಡಿಸಲು ಪರ್ಯಾಯ ವ್ಯವಸ್ಥೆಯನ್ನು ಸರ್ಕಾರದಿಂದ ಮಾಡಲಾಗಿದೆಯೇ; | ಅನ್ವಯಿಸುವುದಿಲ್ಲ. |
| (ಈ) | ಹಾಗಿದ್ದಲ್ಲಿ ಪೂರಕ ಅಂಶಗಳು ಮತ್ತು ಕ್ರಮಗಳ ಕುರಿತು ಸರ್ಕಾರ ಕೈಗೊಂಡ ಕ್ರಮಗಳೇನು; | ಅನ್ವಯಿಸುವುದಿಲ್ಲ. |

ಸಂಖ್ಯೆ: ಆರ್‌ಡಿ 07 ಎಲ್‌ಆರ್‌ಎ 2021

(ಆರ್.ಅಶೋಕ)
ಮಾನ್ಯ ಕಂದಾಯ ಸಚಿವರು.

## ಅನುಬಂಧ–1

| ಕ್ರಮ ಸಂಖ್ಯೆ | ತಾಲ್ಲೂಕು | ಸ್ವೀಕೃತವಾದ ಅರ್ಜಿಗಳು | ಇತ್ಯರ್ಥವಾದ ಅರ್ಜಿಗಳು | ಅರ್ಜಿ ಹಾಕಲು ಬಾಕಿ ಇರುವ ಪ್ರಕರಣಗಳು |
|---|---|---|---|---|
| 1 | ಬಳ್ಳಾರಿ | 17489 | 15543 | 1946 |
| 2 | ಕುರುಗೋಡು | | | |
| 3 | ಸಿರಗುಪ್ಪ | 13428 | 11530 | 1898 |
| 4 | ಸಂಡೂರು | 1381 | 1381 | – |
| 5 | ಹೊಸಪೇಟೆ | 7422 | 7113 | 309 |
| 6 | ಕಂಪ್ಲಿ | | | |
| 7 | ಹಗರಿಬೊಮ್ಮನಹಳ್ಳಿ | 2202 | 2202 | – |
| 8 | ಕೂಡ್ಲಗಿ | 1551 | 1551 | – |
| 9 | ಕೊಟ್ಟೂರು | | | |
| 10 | ಹಡಗಲಿ | 4319 | 4319 | – |
| 11 | ಹರಪನಹಳ್ಳಿ | 3710 | 3249 | 461 |
| | ಒಟ್ಟು ಅರ್ಜಿಗಳು | 51502 | 46888 | 4614 |

* * *

# ಕರ್ನಾಟಕ ವಿಧಾನಸಭೆ

| | | |
|---|---|---|
| 1) | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 30 |
| 2) | ಸದಸ್ಯರ ಹೆಸರು | ಶ್ರೀ ದೇವಾನಂದ್ ಫುಲಸಿಂಗ್ ಚವಾಣ್ (ನಾಗಠಾಣ) |
| 3) | ಉತ್ತರಿಸಬೇಕಾದ ದಿನಾಂಕ | 01-02-2021 |
| 4) | ಉತ್ತರಿಸಬೇಕಾದ ಸಚಿವರು | ಮಾನ್ಯ ಮೀನುಗಾರಿಕೆ ಹಾಗೂ ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವರು |

| | ಪ್ರಶ್ನೆ | ಉತ್ತರ |
|---|---|---|
| ಅ) | ಕಳೆದ ಮೂರು ವರ್ಷಗಳಿಂದ ನಾಗಠಾಣ ವಿಧಾನಸಭಾ ಕ್ಷೇತ್ರದಲ್ಲಿ ಮೀನುಗಾರಿಕೆ ಅಭಿವೃದ್ಧಿಗಾಗಿ ಅನುಷ್ಠಾನಗೊಳಿಸಲಾಗಿರುವ ಕಾರ್ಯಕ್ರಮಗಳಾವುವು; ಹಾಗೂ ಬಿಡುಗಡೆಯಾದ ಅನುದಾನವೆಷ್ಟು; (ವಿವರ ನೀಡುವುದು) | ವಿವರಗಳನ್ನು **ಅನುಬಂಧ-1**ರಲ್ಲಿ ಒದಗಿಸಲಾಗಿದೆ. |
| ಆ) | ಸದರಿ ಕ್ಷೇತ್ರ ವ್ಯಾಪ್ತಿಯಲ್ಲಿ ಬರುವ ಭೀಮಾ ನದಿ ತೀರದಲ್ಲಿ ಮೀನುಗಾರಿಕೆ ನಡೆಸುತ್ತಿರುವ ಮೀನುಗಾರರಿಗೆ ಸರ್ಕಾರದಿಂದ ಕೈಗೊಳ್ಳಲಾಗಿರುವ ಸುರಕ್ಷತೆ ಕ್ರಮಗಳು ಹಾಗೂ ಯೋಜನೆಗಳಾವುವು; (ವಿವರ ನೀಡುವುದು) | **ಅನುಬಂಧ-1**ರಲ್ಲಿ ಯೋಜನೆಗಳ ವಿವರಗಳನ್ನು ಒದಗಿಸಲಾಗಿದೆ. ಸದರಿ ಕ್ಷೇತ್ರ ವ್ಯಾಪ್ತಿಯಲ್ಲಿ ಬರುವ ಭೀಮಾ ನದಿ ತೀರದಲ್ಲಿ ಮೀನುಗಾರಿಕೆ ನಡೆಸುತ್ತಿರುವ ಮೀನುಗಾರರ ಸುರಕ್ಷತೆಗಾಗಿ ಲೈಫ್ ಜಾಕೇಟ್ ಹಾಗೂ FRP ಹರಿಗೋಲುಗಳನ್ನು ಉಚಿತವಾಗಿ ವಿತರಿಸಲಾಗಿದೆ. |
| ಇ) | ಸದರಿ ಕ್ಷೇತ್ರಕ್ಕೆ ಮತ್ಸ್ಯಾಶ್ರಯ ಯೋಜನೆ ಅಡಿ ಮಂಜೂರು ಮಾಡಲಾದ ಮನೆಗಳು ಎಷ್ಟು; (ವಿವರ ನೀಡುವುದು) | ಕಳೆದ ಮೂರು ವರ್ಷಗಳಿಂದ ಅಂದರೆ 2018-19 ರಿಂದ 2020-21ರವರೆಗೆ ಮತ್ಸ್ಯಾಶ್ರಯ ಯೋಜನೆಯಡಿ ಯಾವುದೇ ಮನೆಗಳು ಹಂಚಿಕೆಯಾಗಿರುವುದಿಲ್ಲ. |
| ಈ) | ಈ ಪೈಕಿ ಪೂರ್ಣಗೊಂಡ ಹಾಗೂ ಅಪೂರ್ಣಗೊಂಡ ಮನೆಗಳು ಎಷ್ಟು; ಅಪೂರ್ಣಗೊಂಡಿರಲು ಕಾರಣವೇನು? (ಫಲಾನುಭವಿವಾರು ವಿವರ ನೀಡುವುದು) | ಅನ್ವಯಿಸುವುದಿಲ್ಲ. |

ಸಂಖ್ಯೆ: ಪಸಂಮೀ ಇ-30 ಮೀಇಯೋ 2021

(ಎಸ್. ಅಂಗಾರ)
ಮೀನುಗಾರಿಕೆ ಹಾಗೂ
ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವರು

## ಅನುಬಂಧ -1

1. ಜಿಲ್ಲಾ ಪಂಚಾಯತ್ ಯೋಜನೆಯ ಒಳನಾಡು ಮೀನುಗಾರಿಕೆ ಅಭಿವೃದ್ಧಿ ಯೋಜನೆಯಡಿ, ಬಾವಿ ಮತ್ತು ಹೊಂಡಗಳನ್ನು ಹೊಂದಿರುವ ರೈತರಿಗೆ ಉಚಿತವಾಗಿ ಮೀನುಮರಿ ಸಲಕರಣೆ ಕಿಟ್ ಹಂಚಿಕೆ ಮಾಡಲಾಗಿದೆ. ಮೀನುಗಾರಿಕೆ ಸಹಕಾರ ಸಂಘದ ಸದಸ್ಯರುಗಳಿಗೆ ಮೀನುಗಾರಿಕೆ ಸಲಕರಣೆ ಕಿಟ್ ಖರೀದಿಗೆ ಸಹಾಯಧನ ವಿತರಿಸಿದೆ.
2. ಜಿಲ್ಲಾ ಪಂಚಾಯತ್ ಯೋಜನೆಯ ಮೀನು/ಮಾರುಕಟ್ಟೆಗಳ ನಿರ್ಮಾಣ ಮತ್ತು ಮೀನು ಮಾರಾಟಕ್ಕೆ ಸಹಾಯ ಎಂಬ ಕಾರ್ಯಕ್ರಮದಡಿ ದ್ವಿಚಕ್ರ/ ನಾಲ್ಕು ಚಕ್ರದ ವಾಹನ ಖರೀದಿಗೆ ಸಹಾಯಧನ ವಿತರಿಸಿದೆ.
3. ರಾಜ್ಯ ವಲಯ ಹಾಗೂ ವಿಶೇಷ ಘಟಕ ಉಪ ಯೋಜನೆಯಡಿ ನಾಗಠಾಣ ಮತಕ್ಷೇತ್ರಕ್ಕೆ ಮೀನುಗಾರಿಕೆ ಸಲಕರಣೆ ಕಿಟ್ ಹಾಗೂ ಫೈಬರ್ ಗ್ಲಾಸ್ ಹರಿಗೋಲು ವಿತರಣೆ ಮಾಡಲಾಗಿದೆ.
4. ಕೇಂದ್ರ ವಲಯ ಯೋಜನೆಯಾದ ರಾಷ್ಟ್ರೀಯ ಕೃಷಿ ವಿಕಾಸ ಯೋಜನೆಯ ಫೈಬರ್ ಗ್ಲಾಸ್ ಹರಿಗೋಲು ವಿತರಣೆ ಮಾಡಲಾಗಿದೆ.

(ರೂ.ಲಕ್ಷಗಳಲ್ಲಿ)

| ಕ್ರ. ಸಂ | ಕಾರ್ಯಕ್ರಮ | ಬಿಡುಗಡೆಯಾದ ಅನುದಾನ | | |
|---|---|---|---|---|
| | | 2018-19 | 2019-20 | 2020-21 |
| 1. | ಜಿಲ್ಲಾ ಪಂಚಾಯತ್ ಯೋಜನೆಯ ಒಳನಾಡು ಮೀನುಗಾರಿಕೆ ಅಭಿವೃದ್ಧಿಗೆ ಸಹಾಯ ಎಂಬ ಕಾರ್ಯಕ್ರಮದಡಿ ಮೀನು ಕೃಷಿ ಕೊಳ ನಿರ್ಮಾಣಕ್ಕೆ ಸಹಾಯಧನ | 1.80 | - | - |
| 2. | ಜಿಲ್ಲಾ ಪಂಚಾಯತ್ ಯೋಜನೆಯ ಒಳನಾಡು ಮೀನುಗಾರಿಕೆ ಅಭಿವೃದ್ಧಿಗೆ ಸಹಾಯ ಎಂಬ ಕಾರ್ಯಕ್ರಮದಡಿ, ಮೀನುಗಾರಿಕೆ ಸಲಕರಣೆ ಕಿಟ್ ಖರೀದಿಗೆ ಸಹಾಯಧನ | 0.20 | 1.10 | 1.00 |
| 3. | ಜಿಲ್ಲಾ ಪಂಚಾಯತ್ ಯೋಜನೆಯ ಮೀನು ಮಾರುಕಟ್ಟೆಗಳ ನಿರ್ಮಾಣ ಮತ್ತು ಮೀನುಮಾರಾಟಕ್ಕೆ ಸಹಯ ಎಂಬ ಕಾರ್ಯಕ್ರಮದಡಿ ನಾಲ್ಕು ಚಕ್ರ ವಾಹನ ಖರೀದಿಗೆ ಸಹಾಯಧನ | 4.40 | 4.40 | - |
| 4. | ಜಿಲ್ಲಾ ಪಂಚಾಯತ್ ಯೋಜನೆಯ ಮೀನುಮಾರುಕಟ್ಟೆಗಳ ನಿರ್ಮಾಣ ಮತ್ತು ಮೀನು ಮಾರಾಟಕ್ಕೆ ಸಹಾಯ ಎಂಬ ಕಾರ್ಯಕ್ರಮದಡಿ ದ್ವಿಚಕ್ರ ವಾಹನ ಖರೀದಿಗೆ ಸಹಾಯಧನ | 0.60 | 0.80 | 0.60 |
| 5. | ರಾಜ್ಯವಲಯ ಯೋಜನೆಯಡಿ ಮೀನುಗಾರಿಕೆ ಸಲಕರಣೆ ಕಿಟ್‌ಗಳನ್ನು ಹಾಗೂ ಫೈಬರ್ ಗ್ಲಾಸ ವಿತರಣೆ | 0.90 | 1.00 | 0.60 |
| 6. | ರಾಜ್ಯವಲಯ ಯೋಜನೆಯ ಮೀನುಗಾರಿಕೆ ಸಲಕರಣೆ ಕಿಟ್‌ಗಳನ್ನು ಹಾಗೂ ಫೈಬರ್ ಗ್ಲಾಸ ವಿತರಣೆ | 0.20 | - | - |

# ಕರ್ನಾಟಕ ವಿಧಾನಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 34 |
| ಸದಸ್ಯರ ಹೆಸರು | : | ಶ್ರೀ ಕೌಜಲಗಿ ಮಹಾಂತೇಶ್ ಶಿವಾನಂದ್ (ಬೈಲಹೊಂಗಲ) |
| ಉತ್ತರಿಸುವ ದಿನಾಂಕ | : | 01.02.2021 |
| ಉತ್ತರಿಸುವ ಸಚಿವರು | : | ಉಪ ಮುಖ್ಯಮಂತ್ರಿಗಳು, ಲೋಕೋಪಯೋಗಿ ಇಲಾಖೆ |

| | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ಬೈಲಹೊಂಗಲ ವಿಧಾನಸಭಾ ಮತಕ್ಷೇತ್ರದ ವ್ಯಾಪ್ತಿಯಲ್ಲಿ ಬರುವ ಬೆಳವಡಿ-ಬುಡರಕಟ್ಟಿ ರಾಜ್ಯ ಹೆದ್ದಾರಿಯು ಸಂಪೂರ್ಣವಾಗಿ ನಾಶವಾಗಿರುವುದರಿಂದ ವಾಹನ ಸಂಚಾರಕ್ಕೆ ಹಾಗೂ ಸಾರ್ವಜನಿಕರಿಗೆ ತುಂಬಾ ತೊಂದರೆಯುಂಟಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಸರ್ಕಾರದ ಗಮನಕ್ಕೆ ಬಂದಿದೆ. |
| ಆ) | ಬಂದಿದ್ದಲ್ಲಿ, ಈ ರಸ್ತೆಯ ದುರಸ್ತಿಗಾಗಿ ಸಾರ್ವಜನಿಕರು ಅನೇಕ ಬಾರಿ ಪ್ರತಿಭಟನೆ ಸಹ ಮಾಡಿರುವುದು ಸರ್ಕಾರದ ಗಮನದಲ್ಲಿದಿಯೇ; | |
| ಇ) | ಈ ರಸ್ತೆಯನ್ನು ಅಭಿವೃದ್ಧಿಪಡಿಸುವ ಸಲುವಾಗಿ ಪ್ರಸ್ತಾವನೆಯನ್ನು ಸಲ್ಲಿಸಿದ್ದು, ಸದರಿ ಪ್ರಸ್ತಾವನೆಯು ಯಾವ ಹಂತದಲ್ಲಿದೆ; | ಬೈಲಹೊಂಗಲ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಬರುವ ಬೆಳವಡಿ ಬುಡರಕಟ್ಟಿ ರಾಜ್ಯ ಹೆದ್ದಾರಿಯ ಕಿಮೀ 194.000 ರಿಂದ 204.00 ರವರೆಗೆ ಲೆಕ್ಕ ಶೀರ್ಷಿಕೆ 5054-ರಾಜ್ಯ ಹೆದ್ದಾರಿ ಸುಧಾರಣೆ ಅಡಿಯಲ್ಲಿ ರಸ್ತೆ ಅಭಿವೃದ್ಧಿಗಾಗಿ ರೂ.1400.00 ಲಕ್ಷಗಳ ಅಂದಾಜು ಮೊತ್ತದಲ್ಲಿ ಅಭಿವೃದ್ಧಿಪಡಿಸಲು ಅಂದಾಜುಪಟ್ಟಿಯನ್ನು ತಯಾರಿಸಲಾಗಿತ್ತು. ಅಲ್ಲದೆ ಪ್ರಸಕ್ತ ಸಾಲಿನಲ್ಲಿ ಮಹಾಮಾರಿ ಕೋವಿಡ್-19 ಪರಿಣಾಮದಿಂದಾಗಿ ರಾಜ್ಯದಲ್ಲಿ ಆರ್ಥಿಕ ಸಂಪನ್ಮೂಲಗಳ ಕೊರತೆಯುಂಟಾಗಿರುವುದರಿಂದ ಅಲ್ಲದೆ ಪ್ರಸಕ್ತ ಸಾಲಿನಲ್ಲಿ ಸದರಿ ಲೆಕ್ಕ ಶೀರ್ಷಿಕೆಯಡಿ ಒದಗಿಸಿರುವ ಅನುದಾನವು ಮುಂದುವರೆದ ಕಾಮಗಾರಿಗಳಿಗೆ ಕೊರತೆಯಾಗಿರುವುದರಿಂದ ರಸ್ತೆ ಅಭಿವೃದ್ಧಿ ಕಾಮಗಾರಿಯನ್ನು ಕೈಗೊಂಡಿರುವುದಿಲ್ಲ.<br><br>ಮುಂದುವರೆದು, ದಿವಂಗತ ಶ್ರೀ ಸುರೇಶ ಅಂಗಡಿ ಅಂದಿನ ಮಾನ್ಯ ಭಾರತದ ರೇಲ್ವೆ ಖಾತೆಯ ರಾಜ್ಯ ಸಚಿವರು ಸದರಿ ರಸ್ತೆ ಅಭಿವೃದ್ಧಿಗಾಗಿ ಸಿ.ಆರ್.ಎಫ್ ಯೋಜನೆ ಅಡಿಯಲ್ಲಿ ರೂ.1400.00 ಲಕ್ಷ ಮೊತ್ತದ |
| ಈ) | ಹಾಗಿದ್ದಲ್ಲಿ, ಪ್ರಸ್ತಾವನೆಗೆ ಕೂಡಲೇ ಮಂಜೂರಾತಿ ನೀಡಿ ಸದರಿ ರಸ್ತೆ ದುರಸ್ತಿಗೊಳಿಸಲು ಸರ್ಕಾರ ಕ್ರಮ ಕೈಗೊಳ್ಳಲಾಗುವುದೇ? | |

| ಪ್ರಶ್ನೆಗಳು | | ಉತ್ತರಗಳು |
|---|---|---|
| | | ಕಾಮಗಾರಿಯನ್ನು ಪ್ರಸ್ತಾಪಿಸಿದ್ದು, ಕೇಂದ್ರ ರಸ್ತೆ ಅಭಿವೃದ್ಧಿ ನಿಧಿ ಯೋಜನೆಯಡಿ ರಾಜ್ಯಕ್ಕೆ ಪ್ರತೀ ವರ್ಷ ಸರಾಸರಿ ಅಂದಾಜು ರೂ.500.00 ಕೋಟಿಗಳು ಮಾತ್ರ ಸ್ವೀಕೃತವಾಗುತ್ತಿರುವುದರಿಂದ ಇದೇ ಯೋಜನೆಯಡಿ ಈಗಾಗಲೇ ಕೈಗೆತ್ತಿಕೊಂಡು ಪೂರ್ಣಗೊಳಿಸಲಾಗಿರುವ ಕಾಮಗಾರಿಗಳ ಬಾಕಿ ಬಿಲ್ಲುಗಳ ಪಾವತಿಗೆ ತೀವ್ರ ಒತ್ತಡವಿರುವ ಹಿನ್ನೆಲೆಯಲ್ಲಿ ಆರ್ಥಿಕ ಇಲಾಖೆಯು ಯಾವುದೇ ಹೊಸ ಕಾಮಗಾರಿಗಳನ್ನು ಕೈಗೆತ್ತಿಕೊಳ್ಳಲು ಸಹಮತಿಸುತ್ತಿಲ್ಲ.<br><br>ಆದಾಗ್ಯೂ ಸಾರ್ವಜನಿಕ ಸುಗಮ ಸಂಚಾರಕ್ಕೆ ಅನುಕೂಲವಾಗುವಂತೆ ಪ್ರಸ್ತುತ ಸಾಲಿನ ರಾಜ್ಯ ಹೆದ್ದಾರಿ ನಿರ್ವಹಣೆ ಅಡಿಯಲ್ಲಿ ಈ ರಸ್ತೆಯ ಭಾಗದಲ್ಲಿ ರೂ.19.50 ಲಕ್ಷಗಳ ಮೊತ್ತದ ನಿರ್ವಹಣೆ ಕಾಮಗಾರಿಯನ್ನು ಕೈಗೊಳ್ಳಲಾಗುತ್ತಿದ್ದು, ನಿರ್ವಹಣೆ ಕಾಮಗಾರಿಯು ಪ್ರಗತಿಯಲ್ಲಿದೆ. 2020-21ನೇ ಸಾಲಿನ ಪ್ರವಾಹ ಹಾನಿ ಯೋಜನೆ ಅಡಿಯಲ್ಲಿ ಈ ರಸ್ತೆಯ ಅತೀ ಹಾಳಾದ ಭಾಗವಾದ ಕಿಮೀ 195.00 ರಿಂದ 197.00 (ಪ್ರಸ್ತಾಪಿತ: ಕಿಮೀ 195.00 ರಿಂದ 196.425) ರವರೆಗಿನ ಕಾಮಗಾರಿಯು ರೂ.120.00 ಲಕ್ಷಗಳ ಅನುದಾನದೊಂದಿಗೆ ಅನುಮೋದನೆಯಾಗಿದ್ದು, ಸದರಿ ಕಾಮಗಾರಿಯು ಪ್ರಗತಿಯಲ್ಲಿರುತ್ತದೆ. |

ಲೋಇ 2 ಸಿಕ್ಯೂಎನ್ 2021(ಇ)

(ಗೋವಿಂದ ಎಂ. ಕಾರಜೋಳ)
ಉಪ ಮುಖ್ಯಮಂತ್ರಿಗಳು,
ಲೋಕೋಪಯೋಗಿ ಇಲಾಖೆ

**ಕರ್ನಾಟಕ ವಿಧಾನಸಭೆ**
**15ನೇ ವಿಧಾನಸಭೆ**
**9ನೇ ಅಧಿವೇಶನ**

| | | |
|---|---|---|
| ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ | : | 149 |
| ಸದಸ್ಯರ ಹೆಸರು | : | ಶ್ರೀ. ನಾರಾಯಣಸ್ವಾಮಿ ಕೆ.ಎಂ (ಬಂಗಾರಪೇಟೆ) |
| ಉತ್ತರಿಸುವ ದಿನಾಂಕ | : | 01-02-2021 |
| ಉತ್ತರಿಸುವ ಸಚಿವರು | : | ಮಾನ್ಯ ಉಪಮುಖ್ಯಮಂತ್ರಿಗಳು ಹಾಗೂ ಲೋಕೋಪಯೋಗಿ ಸಚಿವರು |

| ಕ್ರಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | 2018-19ನೇ ಸಾಲಿನ ಬಜೆಟ್ ಅನುದಾನದಲ್ಲಿ ಬಂಗಾರಪೇಟೆ ವಿಧಾನಸಭಾ ಕ್ಷೇತ್ರಕ್ಕೆ ಹಂಚಿಕೆ ಮಾಡಲಾಗಿದ್ದ (5054-ORF) ಕಾಮಗಾರಿಗಳು ಯಾವುವು ಮತ್ತು ಮಂಜೂರಾದ ಅನುದಾನ ಎಷ್ಟು ಮತ್ತು ಅನುಮೋದನೆ ಪಡೆದ ಕಾಮಗಾರಿಗಳು ಯಾವುವು (ವಿವರ ನೀಡುವುದು) | 2018-19ನೇ ಸಾಲಿನಲ್ಲಿ ಲೋಕೋಪಯೋಗಿ ಇಲಾಖೆಯ ಬಂಗಾರಪೇಟೆ ವಿಧಾನಸಭಾ ಕ್ಷೇತ್ರಕ್ಕೆ ಲೆಕ್ಕ ಶೀರ್ಷಿಕೆ 5054-ಜಿಲ್ಲಾ ಮತ್ತು ಇತರೆ ರಸ್ತೆ ಇದರಡಿ ಅನುಮೋದನೆಯಾದ ಕಾಮಗಾರಿಗಳ ವಿವರಗಳನ್ನು ಅನುಬಂಧ -1ರಲ್ಲಿ ಒದಗಿಸಿದೆ. |
| ಆ) | ತಡೆಹಿಡಿಯಲಾಗಿದ್ದ ಅನುದಾನವನ್ನು ಕೆಲವು ಜಿಲ್ಲೆಗಳಿಗೆ ಮಾತ್ರ ಸೀಮಿತಗೊಳಿಸಿ ಬಿಡುಗಡೆ ಮಾಡಿ ಬಂಗಾರಪೇಟೆ ಕ್ಷೇತ್ರದ ಕಾಮಗಾರಿಗಳಿಗೆ ಬಿಡುಗಡೆ ಮಾಡದಿರಲು ಕಾರಣವೇನು ? (ವಿವರ ನೀಡುವುದು) | 2018-19ನೇ ಸಾಲಿನಲ್ಲಿ ಅನುಮೋದನೆ ನೀಡಲಾದ ಕಾಮಗಾರಿಗಳ ಪೈಕಿ ಆಡಳಿತಾತ್ಮಕ ಆದೇಶ ಹೊರಡಿಸಬೇಕಾದ, ಟೆಂಡರ್ ಆಹ್ವಾನಿಸಬೇಕಾಗಿರುವ ಹಾಗೂ ಕಾರ್ಯಾದೇಶ ನೀಡಲು ಬಾಕಿ ಇರುವ ಕಾಮಗಾರಿಗಳ ಮುಂದಿನ ಯಾವುದೇ ಪ್ರಕ್ರಿಯೆಯನ್ನು ತಾತ್ಕಾಲಿಕವಾಗಿ ತಡೆಹಿಡಿಯಲಾಗಿರುತ್ತದೆ. ತಡೆಹಿಡಿದಿರುವ ಕಾಮಗಾರಿಗಳನ್ನು ಅನುದಾನ ಲಭ್ಯತೆಯನುಸಾರ ಹಂತ ಹಂತವಾಗಿ ಪ್ರಾರಂಭಿಸಲು ಅನುಮತಿ ನೀಡುವ ಪ್ರಕ್ರಿಯೆಯು ಪರಿಶೀಲನೆಯಲ್ಲಿರುತ್ತದೆ. |
| ಇ) | ತಡೆ ಹಿಡಿಯಲಾಗಿದ್ದ ಯಾವ ಯಾವ ಜಿಲ್ಲೆ ತಾಲ್ಲೂಕುಗಳಿಗೆ ಹಣ ಬಿಡುಗಡೆ ಮಾಡಲಾಗಿದೆ ? (ವಿವರ ನೀಡುವುದು) | |

ಲೋಇ/77/ಐಎಫ್ಎ/2021

(ಗೋವಿಂದ ಎಂ ಕಾರಜೋಳ)
ಉಪಮುಖ್ಯಮಂತ್ರಿಗಳು ಹಾಗೂ
ಲೋಕೋಪಯೋಗಿ ಸಚಿವರು

ಅನುಬಂಧ-1 (ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ : 149)

**2018-19ನೇ ಸಾಲಿನಲ್ಲಿ ಲೋಕೋಪಯೋಗಿ ಇಲಾಖೆಯ ಬಂಗಾರಪೇಟೆ ವಿಧಾನಸಭಾ ಕ್ಷೇತ್ರಕ್ಕೆ ಲೆಕ್ಕ ಶೀರ್ಷಿಕೆ 5054-ಜಿಲ್ಲಾ ಮತ್ತು ಇತರೆ ರಸ್ತೆ ಇದರಡಿ ಅನುಮೋದನೆಯಾದ ಕಾಮಗಾರಿಗಳ ವಿವರ**

| ಕ್ರ ಸಂ | ಕ್ಷೇತ್ರ | ಕಾಮಗಾರಿ | ಅಂದಾಜು ಮೊತ್ತ (ರೂ.ಲಕ್ಷಗಳಲ್ಲಿ) |
|---|---|---|---|
| **5054-04-337-0-01-154 - ಜಿಲ್ಲಾ ಮತ್ತು ಇತರೆ ರಸ್ತೆಗಳ ಸುಧಾರಣೆ** | | | |
| 1 | ಬಂಗಾರಪೇಟೆ | ಬಂಗಾರಪೇಟೆ ತಾ: ಬೂದಿಕೋಟೆ ಕನಮನಹಳ್ಳಿ ರಸ್ತೆಯ ಸರಪಳಿ 7.00 ರಿಂದ 17.00ಕಿ.ಮೀ.ವರೆಗೆ ರಸ್ತೆಯ ಅಭಿವೃದ್ಧಿ ಹಾಗೂ ಡಾಂಬರೀಕರಣ ಕಾಮಗಾರಿ | 770.00 |
| 2 | ಬಂಗಾರಪೇಟೆ | ಬಂಗಾರಪೇಟೆ ತಾ: ಬೂದಿಕೋಟೆ ರೈಲ್ವೇ ಫೀಡರ್ ರಸ್ತೆಯ ಸರಪಳಿ 2.07 ರಿಂದ 5.00 ಕಿ.ಮೀ.ವರೆಗೆ ಮರು ಡಾಂಬರೀಕರಣ ಕಾಮಗಾರಿ | 150.00 |
| 3 | ಬಂಗಾರಪೇಟೆ | ಬಂಗಾರಪೇಟೆ ತಾ: ಬೂದಿಕೋಟೆ ರೈಲ್ವೇ ಫೀಡರ್ ರಸ್ತೆಯಿಂದ ಹುಣಸನಹಳ್ಳಿ ಮಾಗೊಂದಿ ಮಾರ್ಗವಾಗಿ ಬಲಮಂದೆ ಕ್ರಾಸ್ ಸೇರುವ ರಸ್ತೆಯ ಸರಪಳಿ 0.00 ರಿಂದ 12.90ಕಿ.ಮೀ.ವರೆಗೆ ರಸ್ತೆಯ ಅಭಿವೃದ್ಧಿ ಹಾಗೂ ಡಾಂಬರೀಕರಣ ಕಾಮಗಾರಿ | 700.00 |
| 4 | ಬಂಗಾರಪೇಟೆ | ಬಂಗಾರಪೇಟೆ ತಾ: ಬಂಗಾರಪೇಟೆ ವಕ್ಕಲೇರಿ ರಸ್ತೆಯ ಸರಪಳಿ 0.00 ರಿಂದ 1.50ಕಿ.ಮೀ.ವರೆಗೆ ರಸ್ತೆಯ ಅಗಲೀಕರಣ ಹಾಗೂ ಅಭಿವೃದ್ಧಿ ಕಾಮಗಾರಿ | 100.00 |
| 5 | ಬಂಗಾರಪೇಟೆ | ಬಂಗಾರಪೇಟೆ ತಾ: ಬಂಗಾರಪೇಟೆ ಹರಟಿ ರಸ್ತೆಯ ಸರಪಳಿ 4.10 ರಿಂದ 5.55ಕಿ.ಮೀ ವರೆಗೆ ಮರುಡಾಂಬರೀಕರಣ ಮತ್ತು 7.05 ರಿಂದ 9.10 ಕಿ.ಮೀ ವರೆಗೆ ರಸ್ತೆಯ ಅಗಲೀಕರಣ ಅಭಿವೃದ್ಧಿ ಕಾಮಗಾರಿ | 250.00 |
| 6 | ಬಂಗಾರಪೇಟೆ | ಬಂಗಾರಪೇಟೆ ತಾ: ಕಾಮಸಮುದ್ರಂನಿಂದ ತೊಪ್ಪನಹಳ್ಳಿ,ಸಿಂಗರಹಳ್ಳಿ ಮಾರ್ಗವಾಗಿ ತಮಿಳುನಾಡು ಗಡಿ ಸೇರುವ ರಸ್ತೆಯ ಸರಪಳಿ 0.20 ರಿಂದ 3.14ಕಿ.ಮೀ.ವರೆಗೆ ಅಗಲೀಕರಣ ಮರುಡಾಂಬರೀಕರಣ ಕಾಮಗಾರಿ | 200.00 |
| 7 | ಬಂಗಾರಪೇಟೆ | ಬಂಗಾರಪೇಟೆ ತಾ: ಕಾಮಸಮುದ್ರ ಗ್ರಾಮ ಪರಿಮಿತಿ ದ್ವಿಪಥ ರಸ್ತೆ ಕೊನೆ ವಟ್ಟಿಗಲ್ ಕ್ರಾಸ್ ರಸ್ತೆಯಿಂದ ವೇಣುಗೋಪಾಲಸ್ವಾಮಿ ದೇವಾಲಯದವರೆಗೆ ದ್ವಿಪಥ ರಸ್ತೆ ನಿರ್ಮಾಣ ಕಾಮಗಾರಿ (ಒಂದು ಬಾರಿ ಅಭಿವೃದ್ಧಿ) ಗ್ರಾಮೀಣ ರಸ್ತೆ | 130.00 |
| 8 | ಬಂಗಾರಪೇಟೆ | ಕೋಲಾರ ತಾ: ಬಂಗಾರಪೇಟೆ ವಿಧಾನಸಭಾ ಕ್ಷೇತ್ರ ಬಂಗಾರಪೇಟೆ ಹರಟಿ ರಸ್ತೆಯ ಸರಪಳಿ 10.55 ರಿಂದ 13.55 ಕಿಮೀ ವರೆಗೆ ರಸ್ತೆ ಅಭಿವೃದ್ಧಿ ಕಾಮಗಾರಿ. | 200.00 |
| | | ಒಟ್ಟು | **2500.00** |

## ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 155 |
| ಸದಸ್ಯರ ಹೆಸರು | ಶ್ರೀ ದೊಡ್ಡನಗೌಡ ಜಿ ಪಾಟೀಲ್ |
| ಉತ್ತರಿಸುವ ದಿನಾಂಕ: | 01-02-2021 |
| ಉತ್ತರಿಸುವವರು | ಹಿಂದೂ ಧಾರ್ಮಿಕ ಮತ್ತು ಧರ್ಮಾದಾಯ ದತ್ತಿ ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು. |

| | ಪ್ರಶ್ನೆ | ಉತ್ತರ |
|---|---|---|
| ಅ | ಕಳೆದ 2 ವರ್ಷಗಳಿಂದ ಹುನಗುಂದ ವಿಧಾನ ಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಬರುವ ದೇವಸ್ಥಾನಗಳ ಜೀರ್ಣೋದ್ಧಾರಕ್ಕೆ ಮಂಜೂರು ಮಾಡಲಾಗಿರುವ ಅನುದಾನವೆಷ್ಟು; ಹಾಗಿದ್ದಲ್ಲಿ, ಸರ್ಕಾರದ ಮುಂದೆ ಬಾಕಿ ಇರುವ ಪ್ರಸ್ತಾವನೆಗಳಾವುವು; | ಕಳೆದ 02 ವರ್ಷಗಳಲ್ಲಿ ಬಾಗಲಕೋಟೆ ಜಿಲ್ಲೆ, ಹುನಗುಂದ ವಿಧಾನ ಸಭಾ ಕ್ಷೇತ್ರ ಈ ಕೆಳಕಂಡ ಯೋಜನೆಯಡಿಯಲ್ಲಿ ಒಟ್ಟು ರೂ.20.64 ಲಕ್ಷ ಅನುದಾನ ಬಿಡುಗಡೆ ಮಾಡಲಾಗಿರುತ್ತದೆ. (ರೂ.ಲಕ್ಷಗಳಲ್ಲಿ; table below) ಅನುದಾನ ಮಂಜೂರು ಮಾಡುವಂತೆ ಹಲವಾರು ಪ್ರಸ್ತಾವನೆಗಳಿದ್ದು, ಕೋವಿಡ್-19 ವೈರಸ್ ಸೋಂಕಿನ ಹಿನ್ನೆಲೆಯಲ್ಲಿ, ರಾಜ್ಯದಲ್ಲಿ ಸಂಪನ್ಮೂಲ ಕೊರತೆ ಹಿನ್ನೆಲೆಯಲ್ಲಿ, ದುರಸ್ಥಿ ಜೀರ್ಣೋದ್ಧಾರ ನಿರ್ಮಾಣ ಯೋಜನೆಯಡಿ ಅನುದಾನ ಬಿಡುಗಡೆಯಾಗಿರುವುದಿಲ್ಲ. |
| ಆ | ಹಾಗಿದ್ದಲ್ಲಿ, ಮಂಜೂರಾದ ಅನುದಾನದಲ್ಲಿ ಯಾವ ಯಾವ ದೇವಸ್ಥಾನಗಳ ಜೀರ್ಣೋದ್ಧಾರ ಕಾಮಗಾರಿಗಳನ್ನು ಕೈಗೊಳ್ಳಲಾಗಿದೆ; ಕಾಮಗಾರಿ ಬಾಕಿ ಇರುವ ದೇವಸ್ಥಾನಗಳೆಷ್ಟು? (ವಿವರ ನೀಡುವುದು) | ಕಳೆದ 02 ವರ್ಷಗಳಲ್ಲಿ ಮೇಲ್ಕಂಡ ಯೋಜನೆಗಳಡಿಯಲ್ಲಿ ಕೈಗೊಂಡ ಜೀರ್ಣೋದ್ಧಾರ ಕಾಮಗಾರಿಗಳ ವಿವರವನ್ನು ಹಾಗೂ ಬಾಕಿ ಇರುವ ಕಾಮಗಾರಿಯ ವಿವರ ವನ್ನು ಲಗತ್ತಿಸಿದೆ. |

ರೂ.ಲಕ್ಷಗಳಲ್ಲಿ

| ಕ್ರ. ಸಂ. | ಯೋಜನೆ | 2018-19 | 2019-20 |
|---|---|---|---|
| 1 | ಆರಾಧನಾ | 4.24 | 4.24 |
| 2 | ಪರಿಶಿಷ್ಟ ಜಾತಿ ಉಪಯೋಜನೆ (ಎಸ್.ಸಿ.ಪಿ) | 3.38 | 6.76 |
| 3 | ಗಿರಿಜನ ಉಪಯೋಜನೆ (ಎಸ್.ಟಿ.ಪಿ) | 1.01 | 1.01 |
| | | 8.63 | 12.01 |

(ಸಂಖ್ಯೆ: ಕಂಇ 08 ಮುಸಪ್ರ 2021)

(ಕೋಟಾ ಶ್ರೀನಿವಾಸ ಪೂಜಾರಿ)
ಹಿಂದೂ ಧಾರ್ಮಿಕ ಮತ್ತು ಧರ್ಮಾದಾಯ ದತ್ತಿ
ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು.

# ಅನುಬಂಧ

ರೂ.ಗಳಲ್ಲಿ

| ಯೋಜನೆ | | ಯೋಜನೆಯಡಿ ಬಿಡುಗಡೆ ಮಾಡಿದ ಅನುದಾನ | ಖರ್ಚಾದ ಅನುದಾನ | ಬಾಕಿ ಉಳಿದ ಅನುದಾನ | ಷರಾ |
|---|---|---|---|---|---|
| 12018–19ನೇ ಸಾಲು | ಆರಾಧನಾ | 4,24,000 | ಲೋಕಸಭೆ ಚುನಾವಣೆಯ ನೀತಿ ಸಂಹಿತೆಯಿಂದ ಅನುದಾನ ವ್ಯಪಗತವಾಗಿರುತ್ತದೆ. | | |
| | ವಿಶೇಷ ಘಟಕ ಯೋಜನೆ | 6,76,000 | | | |
| | ಗಿರಿಜನ ಉಪಯೋಜನೆ | 1,01,600 | | | |
| 2019–20ನೇ ಸಾಲು | ಆರಾಧನಾ | 4,24,000 | 4,24,000 | 24,000 | ಹುನಗುಂದ ತಾಲೂಕಿನ ಆರಾಧನಾ ದೇವಸ್ಥಾನಗಳ 1) ಹಗೇದಾಳ ಗ್ರಾಮದ ಶ್ರೀ ದುರ್ಗಾದೇವಿ ದೇವಸ್ಥಾನಕ್ಕೆ 1,00,000/– 2) ಬಿಸಲದಿನ್ನಿ ಗ್ರಾಮದ ದುರ್ಗಾದೇವಿ ದೇವಸ್ಥಾನ ಕ್ಕೆ 1,00,000/– 3) ಚಿತ್ತವಾಡಗಿ ಗ್ರಾಮದ ಸುಂಕಲೆಮ್ಮದೇವಿ ದೇವಸ್ಥಾನಕ್ಕೆ 1,00,000/– 4) ಚಿಕ್ಕಕೊಡಗಲಿ ಮದ ಶ್ರೀ ಲಕ್ಷ್ಮೀ ದೇವಸ್ಥಾನಕ್ಕೆ 1,00,000/– ಅನುದಾನ ಬಳಕೆ ಆಗಿರುತ್ತದೆ. |
| | ವಿಶೇಷ ಘಟಕ ಯೋಜನೆ | 6,76,000 | 6,76,000 | 0 | ಹುನಗುಂದ ತಾಲ್ಲೂಕಿನ ಚಿಕ್ಕ ಕೊಡಗಲಿ ಗ್ರಾಮದ ಶ್ರೀ ದುರ್ಗಾದೇವಿ ದೇವಸ್ಥಾನ (ಮಾದರ ಸಮಾಜ)ದ ಜೀರ್ಣೋದ್ಧಾರಕ್ಕಾಗಿ ರೂ.6.76 ಲಕ್ಷ ಅನುದಾನ ಬಿಡುಗಡೆ ಮಾಡಲಾಗಿದ್ದು, ಕಾಮಗಾರಿ ಪ್ರಗತಿ ಹಂತದಲ್ಲಿರುತ್ತದೆ.ಸ |
| | ಗಿರಿಜನ ಉಪಯೋಜನೆ | 1,01,600 | 1,01,600 | 1,01,600 | ಪ್ರಸ್ತಾವನೆ ಸ್ವೀಕೃತಗೊಂಡಿರುವುದಿಲ್ಲ. |

/4, L. Varalakshmi

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಮುಜರಾಯಿ)

# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | 156 |
| ಸದಸ್ಯರ ಹೆಸರು | ಶ್ರೀ ಶ್ರೀನಿವಾಸಮೂರ್ತಿ ಕೆ ಡಾ॥ (ನೆಲಮಂಗಲ) |
| ಉತ್ತರಿಸುವ ದಿನಾಂಕ | 01-02-2021 |
| ಉತ್ತರಿಸುವವರು | ಹಿಂದೂ ಧಾರ್ಮಿಕ ಮತ್ತು ಧರ್ಮಾದಾಯ ದತ್ತಿ ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು |

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ | ನೆಲಮಂಗಲ ವಿಧಾನಸಭಾ ಕ್ಷೇತ್ರದಲ್ಲಿ ಇರುವ ಮುಜರಾಯಿ ದೇವಾಲಯಗಳ ಸಂಖ್ಯೆ ಎಷ್ಟು;(ಮಾಹಿತಿ ನೀಡುವುದು). | ಬೆಂಗಳೂರು ಗ್ರಾಮಾಂತರ ಜಿಲ್ಲೆ, ನೆಲಮಂಗಲ ತಾಲ್ಲೂಕು ವ್ಯಾಪ್ತಿಯಲ್ಲಿ ಒಟ್ಟು 305 ಮುಜರಾಯಿ ದೇವಾಲಯಗಳು ಒಳಪಡುತ್ತವೆ. |
| ಆ | ಕಳೆದ ಮೂರು ವರ್ಷಗಳಿಂದ ಸದರಿ ದೇವಾಲಯಗಳ ಅಭಿವೃದ್ದಿಗೆ ಮಂಜೂರು ಮಾಡಲಾಗಿರುವ ಅನುದಾನವೆಷ್ಟು (ದೇವಾಲಯವಾರು ವಿವರ ನೀಡುವುದು) | ಕಳೆದ ಮೂರು ವರ್ಷಗಳಲ್ಲಿ ನೆಲಮಂಗಲ ವಿಧಾನಸಭಾ ಕ್ಷೇತ್ರದ ಈ ಕೆಳಕಂಡ ದೇವಾಲಯಗಳಿಗೆ ಒಟ್ಟು ರೂ 27.50ಲಕ್ಷಗಳ ಅನುದಾನವನ್ನು ಮಂಜೂರು ಮಾಡುಲಾಗಿರುತ್ತದೆ. ದೇವಾಲಯವಾರು ಈ ಕೆಳಕಂಡಂತಿದೆ.<br>• ನೆಲಮಂಗಲ ವಿಧಾನಸಭಾ ಕ್ಷೇತ್ರಕ್ಕೆ 2017-18ನೇ ಸಾಲಿನಲ್ಲಿ ತಡಸೀಘಟ್ಟ, ಶ್ರೀ ಲಕ್ಷ್ಮೀನರಸಿಂಹಸ್ವಾಮಿ ದೇವಾಲಯಕ್ಕೆ ರೂ.4.50 ಲಕ್ಷಗಳು ಸಾಮಾನ್ಯ ಸಂಗ್ರಹಣಾ ನಿಧಿಯಿಂದ ಅನುದಾನ ಮಂಜೂರಾಗಿರುತ್ತದೆ. ಆದೇಶ ಸಂಖ್ಯೆ ಎಸಿಟಿ.2.ಸಿಆರ್.01(ಎ)16-17, ದಿ:25-07-2017<br>• ನೆಲಮಂಗಲ ವಿಧಾನಸಭಾ ಕ್ಷೇತ್ರಕ್ಕೆ 2018-19ನೇ ಸಾಲಿನಲ್ಲಿ ತಡಸೀಘಟ್ಟ, ಶ್ರೀ ಲಕ್ಷ್ಮೀನರಸಿಂಹಸ್ವಾಮಿ ದೇವಾಲಯಕ್ಕೆ ರೂ.5.00 ಲಕ್ಷಗಳು ಸಾಮಾನ್ಯ ಅನುದಾನ ಮಂಜೂರಾಗಿರುತ್ತದೆ. ಸರ್ಕಾರದ ಆದೇಶ ಸಂಖ್ಯೆ ಕಂಇ 10 ಮುಅಬಿ 2018 (3) ದಿನಾಂಕ: 13-11-2018.<br>• 2018-19ನೇ ಸಾಲಿನಲ್ಲಿ ಗಾಂಧಿಗ್ರಾಮ ಕಸಬಾ ಹೊಬಳಿ ನೆಲಮಂಗಲ ತಾಲ್ಲೂಕು. ಶ್ರೀ ಗಣಪತಿ ದೇವಸ್ಥಾನಕ್ಕೆ 5.00 ಲಕ್ಷ ರೂಗಳನ್ನು ಸಾಮಾನ್ಯ ಯೋಜನೆಯಡಿ. ನೆಲಮಂಗಲ ಟೌನ್ ಗ್ರಾಮ ಶ್ರೀ ಬಸವೇಶ್ವರ ದೇವಾಲಯದ ಪವಾಡ ಬಸವಣ್ಣ ದೇವರು ಮಠಕ್ಕೆ 2018-19ನೇ ಸಾಲಿನಲ್ಲಿ 10.00ಲಕ್ಷ ರೂಗಳ ಅನುದಾನವನ್ನು ಬಿಡುಗಡೆ ಮಾಡಲಾಗಿರುತ್ತದೆ.<br>• 2019-20ನೇ ಸಾಲಿನಲ್ಲಿ (1) ಹನುಮಂತನಪಾಳ್ಯ ಗ್ರಾಮ ಶ್ರೀ ಆಂಜನೇಯಸ್ವಾಮಿ ದೇವಾಲಯಕ್ಕೆ 3.00ಲಕ್ಷ ರೂಗಳನ್ನು ಮತ್ತು ತಡಸೀಘಟ್ಟ ಗ್ರಾಮದ ಶ್ರೀ ಲಕ್ಷ್ಮೀನರಸಿಂಹಸ್ವಾಮಿ ದೇವಸ್ಥಾನಕ್ಕೆ 4.5ಲಕ್ಷ ರೂಗಳು ಸಾಮಾನ್ಯ ಯೋಜನೆಯಡಿ ಅನುದಾನವನ್ನು ಬಿಡುಗಡೆ ಮಾಡಲಾಗಿರುತ್ತದೆ. |

| | | |
|---|---|---|
| ಇ | ಹಾಗಿದ್ದಲ್ಲಿ ಸದರಿ ಅನುದಾನದಲ್ಲಿ ಯಾವ ಯಾವ ದೇವಾಲಯಗಳನ್ನು ಜೀರ್ಣೋದ್ಧಾರ ಮಾಡಲಾಗಿದೆ: (ವಿವರ ನೀಡುವುದು) | ಸದರಿ ಅನುದಾನದಲ್ಲಿ ಈ ಕೆಳಕಂಡ ದೇವಾಲಯಗಳನ್ನು ಜೀರ್ಣೋದ್ಧಾರ ಮಾಡಲಾಗಿದೆ.<br>1) ಶ್ರೀ ಗಣಪತಿ ದೇವಸ್ಥಾನ ಗಾಂಧಿಗ್ರಾಮ ಕಸಬಾ ಹೋಬಳಿ ನೆಲಮಂಗಲ ತಾಲ್ಲೂಕು.<br>2) ಶ್ರೀ ಬಸವೇಶ್ವರ ದೇವಾಲಯದ ಪವಾಡ ಬಸವಣ್ಣ ದೇವರು ಮಠ. ನೆಲಮಂಗಲ ಟೌನ್ ಗ್ರಾಮ<br>3) ಶ್ರೀ ಆಂಜನೇಯಸ್ವಾಮಿ ದೇವಾಲಯ ಹನುಮಂತನ ಪಾಳ್ಯ ಗ್ರಾಮ ಕಸಬಾ ಹೋಬಳಿ ನೆಲಮಂಗಲ ತಾಲ್ಲೂಕು.<br>4) ಶ್ರೀ ಲಕ್ಷ್ಮೀನರಸಿಂಹಸ್ವಾಮಿ ದೇವಸ್ಥಾನ ತಡಸೀಘಟ್ಟ ಗ್ರಾಮದ ತ್ಯಾಮಗೊಂಡ್ಲು ಹೋಬಳಿ ನೆಲಮಂಗಲ ತಾಲ್ಲೂಕು. |
| ಈ | ದೇವಾಲಯಗಳಲ್ಲಿ ಪೂಜೆ ಮಾಡುವ ಪುರೋಹಿತರಿಗೆ ವಾರ್ಷಿಕವಾರು ನಿಗದಿ ಮಾಡಲಾಗಿರುವ ವೇತನವೆಷ್ಟು; ಏ2 ಮುಖಾಂತರ ವೇತನ ವರ್ಗಾವಣೆ ಮಾಡಲಾಗುತ್ತಿದೆಯೇ; ಏ2 ಮುಖಾಂತರ ಹಣ ವರ್ಗಾವಣೆ ಮಾಡಿತ್ತಿದ್ದರು ಪುರೋಹಿತರು ತಾಲ್ಲೂಕು ಕಛೇರಿಗೆ ಹೋಗಿ ಸಹಿ ಹಾಕಿದರೆ ಮಾತ್ರ ಹಣ ಅರ್ಚಕರ ಖಾತೆಗೆ ವರ್ಗಾವಣೆ ಮಾಡಲಾಗುವುದೇ; | ನೆಲಮಂಗಲ ತಾಲ್ಲೂಕಿನಲ್ಲಿರುವ ಧಾರ್ಮಿಕ ಸಂಸ್ಥೆಗಳಿಗೆ K2 ಮುಖಾಂತರ ತಸ್ತೀಕ್ ಭತ್ಯೆ ಮೊಬಲಗನ್ನು ವಿತರಿಸಲಾಗುತ್ತಿದೆ; ತಸ್ತೀಕ್ ವಿತರಣೆಗೆ ಈ ಹಿಂದೆ ರಾಜಸ್ವ ನಿರೀಕ್ಷಕರ ವರದಿಯನ್ನು ಅವಲಂಬಿಸಲಾಗಿತ್ತು. ಈ ಪ್ರಕ್ರಿಯೆಯಿಂದ ತಸ್ತೀಕ್ ವಿತರಣೆ ವಿಳಂಬವಾಗುತ್ತಿದ್ದ ಹಿನ್ನೆಲೆಯಲ್ಲಿ, ವಿತರಣೆ ಕ್ರಮವನ್ನು ಸರಳೀಕರಣಗೊಳಿಸಲು ಸಂಬಂದಪಟ್ಟ ಅರ್ಚಕರುಗಳಿಂದಲೇ ಸ್ವಯಂ ಸತ್ಯಾಪನಾ ಘೋಷಣೆಯನ್ನು ಪಡೆದು ಸರ್ಕಾರದಿಂದ ಬಿಡುಗಡೆಯಾಗುವ ತಸ್ತೀಕ್ ಮೊಬಲಗನ್ನು ಸಂಬಂಧಪಟ್ಟ ದೇವಾಲಯದ ಪುರೋಹಿತರುಗಳ ಖಾತೆಗೆ ಧಾರ್ಮಿಕ ಸಂಸ್ಥೆಯಿಂದ ಆರ್.ಟಿ.ಜಿ.ಎಸ್ ಮುಖಾಂತರ ತಸ್ತೀಕ್ ಹಣವನ್ನು ಪಾವತಿಸಲು ಸರ್ಕಾರದ ಸುತ್ತೋಲೆ ಸಂಖ್ಯೆ ಕಂಇ 95 ಮುಅಬಿ 2010 ದಿನಾಂಕ: 20-09-2010ರಲ್ಲಿನ ಕ್ರಮಗಳನ್ನು ಅನುಸರಿಸಲಾಗುತ್ತದೆ. |
| ಉ | ಹಣ ವರ್ಗಾವಣೆ ಮಾಡಲು ಇರುವ ಮಾನದಂಡಗಳೇನು?(ವಿವರ ನೀಡುವುದು) | ಹಣ ವರ್ಗಾವಣೆ ಮಾಡಲು ಸರ್ಕಾರದ ಪತ್ರ ಸಂಖ್ಯೆಕಂಇ 180 ಮುಅಬಿ 2016 ದಿನಾಂಕ:24.12.2016ರ ಪತ್ರದಲ್ಲಿನ ಸೂಚನೆಯಂತೆ ತಸ್ತೀಕ್/ವರ್ಷಾಸನ ಇದರಡಿಯಲ್ಲಿ ಜಿಲ್ಲಾಧಿಕಾರಿಗಳಿಂದ ಸ್ವೀಕೃತವಾಗುವ ಬೇಡಿಕೆಗಳ ಅನುಸಾರ ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ ಇವರು ಆಯವ್ಯಯದಲ್ಲಿ ಒದಗಿಸಿದ ಅನುದಾನದ ಲಭ್ಯತೆ ಮೇರೆಗೆ ನೇರವಾಗಿ ಸಂಬಂಧಿಸಿದ ಆಯಾಯಾ ತಹಶೀಲ್ದಾರರಿಗೆ ಬಿಡುಗಡೆ ಮಾಡಲು (ಅಪ್ ಲೋಡ್) ಮತ್ತು ಈ ಅನುದಾನದ ಬಿಲ್ಲುಗಳಿಗೆ ಜಿಲ್ಲಾಧಿಕಾರಿಗಳ ಮೇಲು ಸಹಿ ಆದ ನಂತರ ತಹಶೀಲ್ದಾರರು ಖಜಾನೆಯಿಂದ ಡ್ರಾ ಮಾಡಿ ಧಾರ್ಮಿಕ ಸಂಸ್ಥೆಗಳಿಗೆ ಪಾವತಿಸಲು ತಹಶೀಲ್ದಾರ್/ಜಿಲ್ಲಾಧಿಕಾರಿಗಳಿಗೆ ನಿರ್ದೇಶನ ನೀಡಲು ಅನುಮತಿ ನೀಡಿದ್ದು, ಅದರಂತೆ ಕ್ರಮ ವಹಿಸಲಾಗುತ್ತಿದೆ. |

ಸಂಖ್ಯೆ: ಕಂಇ 09 ಮುಸಪ್ರ 2021

(ಕೋಟಾ ಶ್ರೀನಿವಾಸ ಪೂಜಾರಿ)
ಹಿಂದೂ ಧಾರ್ಮಿಕ ಮತ್ತು ಧರ್ಮಾದಾಯ ದತ್ತಿ
ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು.

## ಕರ್ನಾಟಕ ವಿಧಾನ ಸಭೆ

| | | |
|---|---|---|
| ಮಾನ್ಯ ಸದಸ್ಯರ ಹೆಸರು | : | ಡಾ: ಶ್ರೀನಿವಾಸಮೂರ್ತಿ .ಕೆ (ನೆಲಮಂಗಲ) |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | **159** |
| ಉತ್ತರಿಸಬೇಕಾದ ದಿನಾಂಕ | : | 01.02.2021 |
| ಉತ್ತರಿಸಬೇಕಾದ ಸಚಿವರು | : | ವಸತಿ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | 2020-21 ನೇ ಸಾಲಿನಲ್ಲಿ ನೆಲಮಂಗಲ ವಿಧಾನಸಭಾ ಕ್ಷೇತ್ರಕ್ಕೆ ವಿವಿಧ ವಸತಿ ಯೋಜನೆಯಡಿ ಎಷ್ಟು ಮನೆಗಳನ್ನು ಮಂಜೂರು ಮಾಡಲಾಗುವುದು ; | 2020-21 ನೇ ಸಾಲಿನಲ್ಲಿ ಕೇಂದ್ರ ಪುರಸ್ಕೃತ ಪ್ರಧಾನ ಮಂತ್ರಿ ಆವಾಸ್ ಯೋಜನೆ(ಗ್ರಾಮೀಣ)ಯಡಿ ರಾಜ್ಯಕ್ಕೆ 1,51,715 ಮನೆಗಳ ಗುರಿಯನ್ನು ನೀಡಲಾಗಿದೆ. ಸರ್ಕಾರದ ಆದೇಶ ಸಂಖ್ಯೆ:ವಇ 8 ಹೆಚ್ಎವೈ 2020, ದಿನಾಂಕ :09.11.2020 ರಂತೆ ಪ್ರತಿ ಗ್ರಾಮ ಪಂಚಾಯಿತಿಗೆ ತಲಾ 20 ರಂತೆ ಫಲಾನುಭವಿಗಳನ್ನು ಆಯ್ಕೆ ಮಾಡುವಂತೆ ತಿಳಿಸಲಾಗಿರುತ್ತದೆ. |
| (ಆ) | ನೆಲಮಂಗಲ ಕ್ಷೇತ್ರದ ಪ್ರತಿ ಗ್ರಾಮ ಪಂಚಾಯಿತಿಗೆ ನೀಡಿದ 20 ಮನೆಗಳನ್ನು ಯಾವಾಗ ಮಂಜೂರು ಮಾಡಲಾಗುವುದು ; | ನೆಲಮಂಗಲ ವಿಧಾನ ಸಭಾ ಕ್ಷೇತ್ರದ ಪ್ರತಿ ಗ್ರಾಮ ಪಂಚಾಯಿತಿಗೆ 20 ಮನೆಗಳಂತೆ ಫಲಾನುಭವಿಗಳನ್ನು ಸರ್ಕಾರದ ಸುತ್ತೋಲೆ ಸಂಖ್ಯೆ:ವಇ 8 ಹೆಚ್ಎವೈ 2020, ದಿನಾಂಕ :09.11.2020 ರ ಮಾರ್ಗಸೂಚಿಯನ್ವಯ ಆಯ್ಕೆ ಮಾಡುವಂತೆ ತಿಳಿಸಲಾಗಿದೆ. ಆಯ್ಕೆ ಪ್ರಕ್ರಿಯೆಯು ಪ್ರಗತಿಯಲ್ಲಿರುತ್ತದೆ. |
| (ಇ) | ಹಾಗಿದ್ದಲ್ಲಿ, ಪ್ರಸ್ತುತ ಮನೆಗಳ ನಿರ್ಮಾಣ ಕಾಮಗಾರಿ ಯಾವ ಹಂತದಲ್ಲಿದೆ ; | |
| (ಈ) | ಈ ಕ್ಷೇತ್ರವು ಮೀಸಲು ಕ್ಷೇತ್ರವಾಗಿದ್ದು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಜನಾಂಗದವರು ಹೆಚ್ಚಾಗಿ ಗುಡಿಸಿಲುಗಳಲ್ಲಿ ವಾಸ ಮಾಡುತ್ತಿರುವುದರಿಂದ ವಿವಿಧ ವಸತಿ ಯೋಜನೆಯಲ್ಲಿ 2020-21 ನೇ ಸಾಲಿನಲ್ಲಿ ಸದರಿಯವರಿಗೆ ವಸತಿಗಳನ್ನು ಕಲ್ಪಿಸಲು ಸರ್ಕಾರ ಕ್ರಮ ಕೈಗೊಳ್ಳುವುದೇ ? | ಪ್ರತಿ ಗ್ರಾಮ ಪಂಚಾಯತಿ ವ್ಯಾಪ್ತಿಯ ವಸತಿ ರಹಿತರಿಗೆ ಮನೆ ಒದಗಿಸಲು ಈ ಕೆಳಕಂಡ ಕೇಂದ್ರ ಮತ್ತು ರಾಜ್ಯ ಸರ್ಕಾರದ ವಸತಿ ಯೋಜನೆಗಳನ್ನು ಅನುಷ್ಠಾನಗೊಳಿಸಲಾಗುತ್ತಿದೆ.<br>1. ಬಸವ ವಸತಿ ಯೋಜನೆ.<br>2. ಡಾ : ಬಿ.ಆರ್.ಅಂಬೇಡ್ಕರ್ ಯೋಜನೆ(ಗ್ರಾಮೀಣ).<br>3. ಪ್ರಧಾನ ಮಂತ್ರಿ ಆವಾಸ್ ಯೋಜನೆ(ಗ್ರಾಮೀಣ).<br>4. ದೇವರಾಜ ಅರಸು ವಸತಿ ಯೋಜನೆ.<br>ಪ್ರತಿ ವರ್ಷ ಆಯವ್ಯಯದಲ್ಲಿ ನಿಗಧಿಪಡಿಸುವ ಅನುದಾನಕ್ಕೆ ಅನುಗುಣವಾಗಿ ಗ್ರಾಮ ಪಂಚಾಯತಿವಾರು ವಿವಿಧ ವಸತಿ ಯೋಜನೆಗಳಡಿ ಮನೆಗಳ ಗುರಿ ನಿಗಧಿಪಡಿಸಿ ಗ್ರಾಮಸಭೆ ಮೂಲಕ ಅರ್ಹ ವಸತಿರಹಿತ ಫಲಾನುಭವಿಗಳನ್ನು ಆಯ್ಕೆ ಮಾಡಿ ವಸತಿ ಸೌಕರ್ಯವನ್ನು ಕಲ್ಪಿಸಿಕೊಡಲಾಗುತ್ತಿದೆ. |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| | | ವಸತಿ ಯೋಜನೆಗಳಡಿ ಈ ಕೆಳಕಂಡಂತೆ ಸಹಾಯಧನವನ್ನು ನಿಗದಿ ಪಡಿಸಲಾಗಿದೆ. |

| ಕ್ರ. ಸಂ | ಯೋಜನೆ | ಘಟಕ ವೆಚ್ಚ | |
|---|---|---|---|
| | | ಪ.ಜಾ/ ಪ.ವರ್ಗ | ಸಾಮಾನ್ಯ/ ಅಲ್ಪ ಸಂಖ್ಯಾತ |
| 1 | ಬಸವ ವಸತಿ ಯೋಜನೆ | - | 1,20,000 |
| 2 | ಡಾ|| ಬಿ.ಆರ್ ಅಂಬೇಡ್ಕರ್ ಯೋಜನೆ (ಗ್ರಾಮೀಣ) | 1,75,000 | - |
| 3 | ಪ್ರಧಾನ ಮಂತ್ರಿ ಆವಾಸ್ ಯೋಜನೆ (ಗ್ರಾಮೀಣ) | 1,50,000 | 1,20,000 |
| 4 | ದೇವರಾಜ ಅರಸು ವಸತಿ ಯೋಜನೆ | 1,50,000 | 1,20,000 |

ಸರ್ಕಾರದ ಆದೇಶ ಸಂಖ್ಯೆ:ವಇ 59 ಹೆಚ್ಎಹೆಚ್ 2020, ದಿನಾಂಕ 04.07.2020 ರನ್ವಯ ರಾಜ್ಯ ಸರ್ಕಾರದ ಬಸವ ವಸತಿ ಯೋಜನೆ, ಡಾ.ಬಿ.ಆರ್ ಅಂಬೇಡ್ಕರ್ ನಿವಾಸ್ ಯೋಜನೆ (ಗ್ರಾಮೀಣ & ನಗರ), ವಾಜಪೇಯಿ ನಗರ ವಸತಿ ಯೋಜನೆ, ದೇವರಾಜ ಅರಸು ವಸತಿ ಯೋಜನೆ (ಗ್ರಾಮೀಣ & ನಗರ) ಗಳಡಿ ಪ್ರಸ್ತುತ ಇರುವ ಗುರಿಗಳನ್ನು ಪೂರ್ಣಗೊಳಿಸುವವರೆಗೆ ಹೊಸ ಗುರಿಗಳನ್ನು ನೀಡದಿರುವ ತೀರ್ಮಾನ ಕೈಗೊಳ್ಳಲಾಗಿರುತ್ತದೆ.

ಸಂಖ್ಯೆ :ವಇ 25 ಹೆಚ್ಎಎಂ 2021

(ವಿ. ಸೋಮಣ್ಣ)
ವಸತಿ ಸಚಿವರು

## ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 173

ಸದಸ್ಯರ ಹೆಸರು ಡಾ. ಯತೀಂದ್ರ ಸಿದ್ದರಾಮಯ್ಯ (ವರುಣ)

ಉತ್ತರಿಸುವ ದಿನಾಂಕ: 01-02-2021

ಉತ್ತರಿಸುವ ಸಚಿವರು: ಉಪ ಮುಖ್ಯಮಂತ್ರಿಗಳು, ಲೋಕೋಪಯೋಗಿ ಇಲಾಖೆ

| ಕ್ರ ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ರಾಜ್ಯದಲ್ಲಿ 2018-19, 2019-20 ನೇ ಸಾಲಿನಲ್ಲಿ ಎಷ್ಟು ಕಿ.ಮೀ ರಸ್ತೆಗಳನ್ನು ಅಭಿವೃದ್ಧಿಪಡಿಸಲಾಗಿದೆ. (ವರ್ಷವಾರು ವಿವರ ನೀಡುವುದು) | ರಾಜ್ಯದಲ್ಲಿ 2018-19 ಮತ್ತು 2019-20ನೇ ಸಾಲಿನಲ್ಲಿ ವಿವಿಧ ಲೆಕ್ಕಶೀರ್ಷಿಕೆ ಹಾಗೂ ಯೋಜನೆಗಳಡಿ ಅಭಿವೃದ್ಧಿಪಡಿಸಲಾದ ರಸ್ತೆಯ ವಿವರಗಳನ್ನು ಈ ಕೆಳಗಿನಂತಿದೆ: |

| ಕ್ರ ಸಂ | ವಲಯ | ವರ್ಷ 2018-19 (ಕಿ.ಮೀ.ಗಳಲ್ಲಿ) | ವರ್ಷ 2019-20 (ಕಿ.ಮೀ.ಗಳಲ್ಲಿ) |
|---|---|---|---|
| 1 | ಮುಖ್ಯ ಇಂಜಿನಿಯರ್, ಸಂಕ(ದ), ಬೆಂಗಳೂರು | 2035.84 | 3285.75 |
| 2 | ಮುಖ್ಯ ಇಂಜಿನಿಯರ್, ಸಂಕ(ಉ), ಧಾರವಾಡ | 2509.06 | 2527.69 |
| 3 | ಮುಖ್ಯ ಇಂಜಿನಿಯರ್, ಸಂಕ(ಕೇಂದ್ರ), ಶಿವಮೊಗ್ಗ | 1100.54 | 838.58 |
| 4 | ಮುಖ್ಯ ಇಂಜಿನಿಯರ್, ಸಂಕ(ಈಶಾನ್ಯ), ಕಲಬುರಗಿ | 740.66 | 614.01 |
| 5 | ಮುಖ್ಯ ಇಂಜಿನಿಯರ್, ರಾಷ್ಟ್ರೀಯ ಹೆದ್ದಾರಿ (ಸಿ.ಆರ್.ಎಫ್ & 5054 NH(O) ರಡಿ | 2290.19 | 514.88 |
| 6 | ಕರ್ನಾಟಕ ರಾಜ್ಯ ಹೆದ್ದಾರಿ ಅಭಿವೃದ್ಧಿ ಯೋಜನೆಯಡಿ (KSHIP) | 171.78 | 45.01 |
| 7 | ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತರಡಿ (KRDCL) | 10.22 ಇದರಲ್ಲಿ 9.02 ಕಿ.ಮೀ. ಕಾಮಗಾರಿ ಪೂರ್ಣಗೊಂ | ಈ ಸಾಲಿನಲ್ಲಿ 176.05 ಕಿ.ಮಿ. ರಸ್ತೆ ಅಭಿವೃದ್ಧಿ ಕಾಮಗಾರಿ ಕೈಗೆತ್ತಿಕೊಂಡಿದ್ದು, |

<table>
<tr><th>ಕ್ರ ಸಂ</th><th>ಪ್ರಶ್ನೆಗಳು</th><th>ಉತ್ತರಗಳು</th></tr>
<tr><td></td><td></td><td>
<table>
<tr><td></td><td></td><td>ಡಿದ್ದು, ಉಳಿದ ಕಾಮಗಾರಿ ಪ್ರಗತಿಯಲ್ಲಿದೆ</td><td>ಕಾಮಗಾರಿಗಳು ಪ್ರಗತಿಯಲ್ಲಿವೆ</td></tr>
<tr><td>8</td><td>ರಾಜ್ಯ ಹೆದ್ದಾರಿ ಅಭಿವೃದ್ಧಿ ಯೋಜನೆ (SHDP)</td><td>296.62 ಕಿ.ಮೀ.</td><td>984.38 ಕಿ.ಮೀ.</td></tr>
</table>
</td></tr>
<tr><td>ಆ)</td><td>ವರುಣಾ ವಿಧಾನ ಸಭಾ ಕ್ಷೇತ್ರದಲ್ಲಿ ರಸ್ತೆ/ಸೇತುವೆ ಕಾಮಗಾರಿಗಳನ್ನು ಕೈಗೊಳ್ಳಲು ಸಲ್ಲಿಸಿರುವ ಪ್ರಸ್ತಾವನೆಗೆ ಅನುಮೋದನೆ ನೀಡಲು ವಿಳಂಬವಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ?</td><td rowspan="3">ವರುಣ ವಿಧಾನಸಭಾ ಕ್ಷೇತ್ರದಲ್ಲಿ ಕೆ.ಆರ್.ಡಿ.ಸಿ.ಎಲ್. ವತಿಯಿಂದ ನಂಜನಗೂಡು ತಾಲ್ಲೂಕು ರಾಜ್ಯ ಹೆದ್ದಾರಿ-84 ಎ ರ ಕಬಿನಿ ನದಿಗೆ ಅಡ್ಡಲಾಗಿ ಸರಪಳಿ 15.00 ಕಿ.ಮೀ ರಲ್ಲಿ ರೂ.27.00 ಕೋಟಿಗಳ ಅಂದಾಜು ಮೊತ್ತ (ಸುತ್ತೂರು ಗ್ರಾಮದ ಬಳಿ) ಸೇತುವೆ ನಿರ್ಮಾಣ ಕಾಮಗಾರಿಯನ್ನು ಕೈಗೊಳ್ಳುವ ಸಲುವಾಗಿ ವಿವರವಾದ ಯೋಜನಾ ವರದಿ ತಯಾರಿಸಲು ಅನುಮೋದನೆ ಕೋರಿ ಸರ್ಕಾರದಲ್ಲಿ ಪ್ರಸ್ತಾವನೆ ಸ್ವೀಕೃತವಾಗಿದ್ದು, ಅನುದಾನದ ಲಭ್ಯತೆಯ ಆಧಾರದ ಮೇಲೆ ಈ ಪ್ರಸ್ತಾವನೆಯನ್ನು ಪರಿಗಣಿಸುವ ಕುರಿತು ಪರಿಶೀಲಿಸಲಾಗುತ್ತಿದೆ.</td></tr>
<tr><td>ಇ)</td><td>ಬಂದಿದ್ದಲ್ಲಿ ಸರ್ಕಾರ ಕೈಗೊಂಡಿರುವ ಕ್ರಮಗಳೇನು. (ಮಾಹಿತಿ ನೀಡುವುದು)</td></tr>
<tr><td>ಈ)</td><td>ಯಾವ ಕಾಲಮಿತಿಯಲ್ಲಿ ಪ್ರಸ್ತಾವನೆಗೆ ಅನುಮೋದನೆ ನೀಡಲಾಗುವುದು ಹಾಗೂ ಅನುದಾನ ಮಂಜೂರು ಮಾಡಲಾಗುವುದು. (ವಿವರ ನೀಡುವುದು)</td></tr>
</table>

ಲೋಇ 8 ಸಿಕ್ಯೂಎನ್ 2021(ಇ)

(ಗೋವಿಂದ ಎಂ. ಕಾರಜೋಳ)
ಉಪ ಮುಖ್ಯಮಂತ್ರಿಗಳು,
ಲೋಕೋಪಯೋಗಿ ಇಲಾಖೆ

## ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1/4 |
| ಸದಸ್ಯರ ಹೆಸರು | ಶ್ರೀ ಅಂಗಾರ ಕೆ.ಎಸ್. |
| ಉತ್ತರಿಸುವ ದಿನಾಂಕ: | 01-02-2021 |
| ಉತ್ತರಿಸುವವರು | ಹಿಂದೂ ಧಾರ್ಮಿಕ ಮತ್ತು ಧರ್ಮಾದಾಯ ದತ್ತಿ ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು. |

| | ಪ್ರಶ್ನೆ | ಉತ್ತರ |
|---|---|---|
| ಅ | ಕಳೆದ 02 ವರ್ಷಗಳಲ್ಲಿ ರಾಜ್ಯದಲ್ಲಿ ಮುಜರಾಯಿ ಇಲಾಖೆಯಿಂದ ಮುಜರಾಯಿ ದೇವಸ್ಥಾನಗಳ ಜೀರ್ಣೋದ್ಧಾರ ಕಾಮಗಾರಿಗಳಿಗೆ ಆರಾಧನಾ ಯೋಜನೆಯಡಿಯಲ್ಲಿ ನೀಡಿರುವ ಅನುದಾನದಲ್ಲಿ ಖರ್ಚಾಗಿರುವ ಅನುದಾನವೆಷ್ಟು; ಖರ್ಚಾಗದೆ ಉಳಿದಿರುವ ಅನುದಾನವೆಷ್ಟು; (ವರ್ಷ ವಾರು, ವಿಧಾನಸಭಾ ಕ್ಷೇತ್ರವಾರು ಸಂಪೂರ್ಣ ವಿವರ ನೀಡುವುದು). | ಆರಾಧನಾ ಯೋಜನೆಯಡಿಯಲ್ಲಿ ಕಳೆದ ಎರಡು ವರ್ಷಗಳಲ್ಲಿ ಒಟ್ಟು ರೂ.1899.52 ಲಕ್ಷಗಳ ಅನುದಾನವನ್ನು ಬಿಡುಗಡೆ ಮಾಡಲಾಗಿರುತ್ತದೆ. ಕ್ಷೇತ್ರವಾರು ವಿವರ ಕೆಳಗಿನಂತಿದೆ.<br>(ರೂ.ಲಕ್ಷಗಳಲ್ಲಿ)<br>ವರ್ಷ / ಆಯ-ವ್ಯಯದಲ್ಲಿ ಬಿಡುಗಡೆಯಾದ ಮೊತ್ತ / ಖರ್ಚಾದ ಮೊತ್ತ<br>2018-19 / 949.76 / 949.76<br>2019-20 / 949.76 / 949.76<br>ಆರಾಧನಾ ಯೋಜನೆಯಡಿಯಲ್ಲಿ ಕಳೆದ 2 ವರ್ಷಗಳಲ್ಲಿ ಪ್ರತಿ ವಿಧಾನ ಸಭಾ ಕ್ಷೇತ್ರಕ್ಕೆ ರೂ.4.24 ಲಕ್ಷಗಳ ಅನುದಾನವನ್ನು ಬಿಡುಗಡೆ ಮಾಡಲಾಗಿರುತ್ತದೆ.<br>**(ಜಿಲ್ಲಾವಾರು ವಿವರ ಅನುಬಂಧದಲ್ಲಿ ಒದಗಿಸಿದೆ)** |
| ಆ | ಸದರಿ ಆರಾಧನಾ ಯೋಜನೆಯಡಿಯಲ್ಲಿ 2020-21ನೇ ಸಾಲಿನಲ್ಲಿ ನೀಡುತ್ತಿರುವ ಅನುದಾನ ಅತಿ ಕಡಿಮೆಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಹಾಗಿದ್ದಲ್ಲಿ ಅನುದಾನವನ್ನು ಹೆಚ್ಚಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು? (ಸಂಪೂರ್ಣ ಮಾಹಿತಿ ನೀಡುವುದು) | 2020-21ನೇ ಸಾಲಿನಲ್ಲಿ ಕೊರೋನ ವೈರಸ್ ಸೋಂಕಿನ ಹಿನ್ನೆಲೆಯಲ್ಲಿ ರಾಜ್ಯದಲ್ಲಿ ಸಂಪನ್ಮೂಲ ಕೊರತೆಯಿಂದಾಗಿ ಆರ್ಥಿಕ ಇಲಾಖೆಯು ಆರಾಧನಾ ಯೋಜನೆಗೆ ಪ್ರತಿ ವರ್ಷ ಒದಗಿಸುವ ಅನುದಾನಕ್ಕಿಂತ 2020-21ನೇ ಸಾಲಿನಲ್ಲಿ ಈ ಯೋಜನೆಗೆ ಕಡಿಮೆ ಅನುದಾನವನ್ನು ಒದಗಿಸಿರುತ್ತದೆ. |

(ಸಂಖ್ಯೆ:ಕಂಇ 10 ಮುಸಪ್ರ 2021)

(ಕೋಟಾ ಶ್ರೀನಿವಾಸ ಪೂಜಾರಿ)
ಹಿಂದೂ ಧಾರ್ಮಿಕ ಮತ್ತು ಧರ್ಮಾದಾಯ ದತ್ತಿ
ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು.

LAQ-1744

# ಅನುಬಂಧ

## 2018-19 ರಿಂದ 2019-20ನೇ ಸಾಲಿನಲ್ಲಿ ಆರಾಧನಾ ಯೋಜನೆಯಡಿ ಸರ್ಕಾರದಿಂದ ಬಿಡುಗಡೆಯಾದ ಒಟ್ಟು ಅನುದಾನದ ವಿವರ

| ಕ್ರ ಸಂ | ಜಿಲ್ಲೆ | 2018-19 | 2019-20 |
|---|---|---|---|
| 1 | ಬೆಂಗಳೂರು ನಗರ | 118.720 | 118.720 |
| 2 | ಬೆಂಗಳೂರು ಗ್ರಾಮಾಂತರ | 16.960 | 16.960 |
| 3 | ಬೆಳಗಾವಿ | 76.320 | 76.320 |
| 4 | ಬಳ್ಳಾರಿ | 38.160 | 42.400 |
| 5 | ಬೀದರ್ | 25.440 | 25.440 |
| 6 | ಬಿಜಾಪುರ | 33.920 | 33.920 |
| 7 | ಬಾಗಲಕೋಟೆ | 29.680 | 29.680 |
| 8 | ಚಿತ್ರದುರ್ಗ | 25.440 | 25.440 |
| 9 | ಚಿಕ್ಕಮಗಳೂರು | 21.200 | 21.200 |
| 10 | ಚಿಕ್ಕಬಳ್ಳಾಪುರ | 21.200 | 21.200 |
| 11 | ಚಾಮರಾಜನಗರ | 16.960 | 16.960 |
| 12 | ದಕ್ಷಿಣ ಕನ್ನಡ | 33.920 | 33.920 |
| 13 | ದಾವಣಗೆರೆ | 33.920 | 29.680 |
| 14 | ಧಾರವಾಡ | 29.680 | 29.680 |
| 15 | ಗುಲ್ಬರ್ಗಾ | 38.160 | 38.160 |
| 16 | ಗದಗ | 16.960 | 16.960 |
| 17 | ಹಾಸನ | 29.680 | 29.680 |
| 18 | ಹಾವೇರಿ | 25.440 | 25.440 |
| 19 | ಕೋಲಾರ | 25.440 | 25.440 |
| 20 | ಕೊಪ್ಪಳ | 21.200 | 21.200 |
| 21 | ಕೊಡಗು | 8.480 | 8.480 |
| 22 | ಮೈಸೂರು | 46.640 | 46.640 |
| 23 | ಮಂಡ್ಯ | 29.680 | 29.680 |
| 24 | ರಾಯಚೂರು | 29.680 | 29.680 |
| 25 | ರಾಮನಗರ | 16.960 | 16.960 |
| 26 | ಶಿವಮೊಗ್ಗ | 29.680 | 29.680 |
| 27 | ತುಮಕೂರು | 46.640 | 46.640 |
| 28 | ಉಡುಪಿ | 21.200 | 21.200 |
| 29 | ಉತ್ತರಕನ್ನಡ | 25.440 | 25.440 |
| 30 | ಯಾದಗಿರಿ | 16.960 | 16.960 |
| | ಒಟ್ಟು | 949.76 | 949.760 |

M. L. Varalakshmi 30/1/2021
ಎಂ.ಎಲ್. ವರಲಕ್ಷ್ಮಿ
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಮುಜರಾಯಿ

ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 176 |
| ಸದಸ್ಯರ ಹೆಸರು. | : | ಶ್ರೀ ಲಿಂಗೇಶ್.ಕೆ.ಎಸ್., (ಬೇಲೂರು) |
| ಉತ್ತರಿಸುವ ದಿನಾಂಕ | : | 01.02.2021. |
| ಉತ್ತರಿಸುವ ಸಚಿವರು | : | ಉಪಮುಖ್ಯಮಂತ್ರಿ<br>ಲೋಕೋಪಯೋಗಿ ಇಲಾಖೆ |

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರಗಳು |
|---|---|---|
| ಅ) | ರಾಷ್ಟ್ರೀಯ ಹೆದ್ದಾರಿ 373 ರ ಬೇಲೂರು-ಬಿಳಿಕೆರೆ ರಸ್ತೆ ಸರಪಳಿ 455.845 ರಿಂದ 489.845 ಕಿ.ಮೀ. ರವರೆಗೆ ಅಭಿವೃದ್ಧಿ ಕಾಮಗಾರಿ (ಪ್ಯಾಕೇಜ್ 2 ಬೇಲೂರು-ಹಾಸನ ರಸ್ತೆ) ಕಾಮಗಾರಿಗೆ ಎನ್.ಹೆಚ್.ಎ.ಐ ಆರ್.ಓ. ರವರು ಡಿ.ಪಿ.ಆರ್.ಅನ್ನು ಸಲ್ಲಿಸಲಾಗಿದ್ದು, ಸದರಿ ಡಿ.ಪಿ.ಆರ್.ಗೆ ಅನುಮೋದನೆ ದೊರೆಯದೆ ಕಾಮಗಾರಿ ಕುಂಠಿತಗೊಂಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ |
| ಆ) | ಹಾಗಿದ್ದಲ್ಲಿ, ಸದರಿ ಕಾಮಗಾರಿಗೆ ಅನುಮೋದನೆ ನೀಡಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು? (ಸಂಪೂರ್ಣ ಮಾಹಿತಿ ನೀಡುವುದು) | ಸದರಿ ರಸ್ತೆ ಅಭಿವೃದ್ಧಿ ಕಾಮಗಾರಿಯು ರೂ.205.00 ಕೋಟಿ ಅಂದಾಜು ಮೊತ್ತದಲ್ಲಿ 2019-20ನೇ ಸಾಲಿನ ಪ್ರಸ್ತಾಪಿತ ವಾರ್ಷಿಕ ಕಾಮಗಾರಿಗಳ ಯೋಜನೆಯಲ್ಲಿ ಸೇರ್ಪಡೆಗೊಳಿಸಲಾಗಿತ್ತು. ಅದರಂತೆ, ವಿವರವಾದ ಯೋಜನಾ ವರದಿಯನ್ನು ಕೇಂದ್ರ ಭೂಸಾರಿಗೆ ಮತ್ತು ಹೆದ್ದಾರಿ ಮಂತ್ರಾಲಯ, ಬೆಂಗಳೂರು ಕಚೇರಿಗೆ ದಿನಾಂಕ:12.12.2019 ರಂದು ಸಲ್ಲಿಸಲಾಗಿದ್ದು, ಸದರಿಯವರ ಸೂಚನೆಯಂತೆ ಮಾರ್ಪಾಡುಗಳನ್ನು ಮಾಡಿ ಯೋಜನಾ ವರದಿಯನ್ನು ಸಲ್ಲಿಸಲು ಕ್ರಮವಹಿಸಲಾಗಿತ್ತು. ಈ ನಡುವೆ 2019-20ನೇ ಆರ್ಥಿಕ ವರ್ಷ ಪೂರ್ಣಗೊಂಡ ಹಿನ್ನಲೆಯಲ್ಲಿ 2020-21ನೇ ಸಾಲಿನ ವಾರ್ಷಿಕ ಕಾಮಗಾರಿಗಳ ಯೋಜನೆಯಲ್ಲಿ ಸದರಿ ಕಾಮಗಾರಿಯು ರೂ.216.00 ಕೋಟಿ ಅಂದಾಜು ಮೊತ್ತದಲ್ಲಿ ಕೇಂದ್ರ ಭೂಸಾರಿಗೆ ಮತ್ತು ಹೆದ್ದಾರಿ ಮಂತ್ರಾಲಯದ ಅನುಮೋದಿತ ವಾರ್ಷಿಕ ಕಾಮಗಾರಿಗಳ ಯೋಜನೆಯಲ್ಲಿ ಸೇರ್ಪಡೆಗೊಂಡಿದೆ.<br><br>ಸದರಿ ಕಾಮಗಾರಿಯ ರೂ.222.05ಕೋಟಿ ಅಂದಾಜು ಮೊತ್ತದ ವಿವರವಾದ ಯೋಜನಾ ವರದಿಯನ್ನು ಕೇಂದ್ರ ಭೂಸಾರಿಗೆ ಮತ್ತು ಹೆದ್ದಾರಿ ಮಂತ್ರಾಲಯಕ್ಕೆ ದಿನಾಂಕ:03.10.2020 ರಂದು |

| | |
|---|---|
| | ಸಲ್ಲಿಸಲಾಗಿರುತ್ತದೆ. ತದನಂತರ ಕೇಂದ್ರ ಭೂಸಾರಿಗೆ ಮತ್ತು ಹೆದ್ದಾರಿ ಮಂತ್ರಾಲಯದ ಬೆಂಗಳೂರು ಕಛೇರಿಯಿಂದ ಸದರಿ ವಿವರವಾದ ಯೋಜನಾ ವರದಿಯು ಕೇಂದ್ರ ಭೂಸಾರಿಗೆ ಮತ್ತು ಹೆದ್ದಾರಿ ಮಂತ್ರಾಲಯದ ನವದೆಹಲಿ ಕಛೇರಿಗೆ ಅನುಮೋದನೆಗಾಗಿ ಸಲ್ಲಿಸಲಾಗಿದ್ದು, ಪರಿಶೀಲನಾ ಹಂತದಲ್ಲಿರುತ್ತದೆ.<br><br>ವಿವರವಾದ ಯೋಜನಾ ವರದಿಗೆ ಅನುಮೋದನೆ ಪಡೆಯುವ ಸಂಬಂಧ ಮುಖ್ಯ ಇಂಜಿನಿಯರ್ ಮತ್ತು ಕಾರ್ಯಪಾಲಕ ಇಂಜಿನಿಯರ್, ರಾಷ್ಟ್ರೀಯ ಹೆದ್ದಾರಿ ವಿಭಾಗ, ಹಾಸನರವರು ದಿನಾಂಕ:26.11.2020 ಮತ್ತು 27.11.2020 ರಂದು ಕೇಂದ್ರ ಭೂಸಾರಿಗೆ ಮತ್ತು ಹೆದ್ದಾರಿ ಮಂತ್ರಾಲಯದ ನವದೆಹಲಿ ಕಛೇರಿಗೆ ಹಾಜರಾಗಿ ಅಧಿಕಾರಿಗಳಿಗೆ ಕಾಮಗಾರಿಯ ಯೋಜನಾ ವರದಿ ಕುರಿತು ವಿವರಣೆ ನೀಡಿರುತ್ತಾರೆ. ಕಾರ್ಯಪಾಲಕ ಇಂಜಿನಿಯರ್, ರಾಷ್ಟ್ರೀಯ ಹೆದ್ದಾರಿ ವಿಭಾಗ, ಹಾಸನರವರು ದಿನಾಂಕ:16.12.2020 ರಿಂದ 18.12.2020ರ ಅವಧಿಯಲ್ಲಿ ಮತ್ತೊಮ್ಮೆ ಕೇಂದ್ರ ಭೂಸಾರಿಗೆ ಮತ್ತು ಹೆದ್ದಾರಿ ಮಂತ್ರಾಲಯದ ನವದೆಹಲಿಯ ಅಧಿಕಾರಿಗಳಿಗೆ ಈ ಕುರಿತು ಇನ್ನಿತರ ಅಗತ್ಯ ವಿವರಣೆ ನೀಡಿದ್ದು, ಈ ಸಂದರ್ಭದಲ್ಲಿ, ಕೇಂದ್ರ ಭೂಸಾರಿಗೆ ಮತ್ತು ಹೆದ್ದಾರಿ ಮಂತ್ರಾಲಯದ ನವದೆಹಲಿ ಕಛೇರಿ ವತಿಯಿಂದ ಕೆಲವು ಮಾರ್ಪಾಡುಗಳನ್ನು ಸೂಚಿಸಿರುತ್ತಾರೆ. ಅದರಂತೆ, ಮಾರ್ಪಡಿತ ರೂ.232.09ಕೋಟಿ ಅಂದಾಜು ಮೊತ್ತದ ವಿವರವಾದ ಯೋಜನಾ ವರದಿಯನ್ನು ದಿನಾಂಕ:26.01.2021 ರಂದು ಕೇಂದ್ರ ಭೂಸಾರಿಗೆ ಮತ್ತು ಹೆದ್ದಾರಿ ಮಂತ್ರಾಲಯದ ನವದೆಹಲಿ ಕಛೇರಿಗೆ ಸಲ್ಲಿಸಲಾಗಿದ್ದು, ಅನುಮೋದನೆ ನಿರೀಕ್ಷಿಸಲಾಗಿದೆ. |

ಲೋಇ 13 ಸಿಎನ್‌ಹೆಚ್ 2021 (ಇ)

(ಗೋವಿಂದ ಎಂ. ಕಾರಜೋಳ)
ಉಪಮುಖ್ಯಮಂತ್ರಿ
ಲೋಕೋಪಯೋಗಿ ಇಲಾಖೆ.

## ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 188
ಸದಸ್ಯರ ಹೆಸರು : ಶ್ರೀ ನಿಸರ್ಗ ನಾರಾಯಣಸ್ವಾಮಿ ಎಲ್.ಎನ್ (ದೇವನಹಳ್ಳಿ)
ಉತ್ತರಿಸುವ ದಿನಾಂಕ : 01-02-2021
ಉತ್ತರಿಸುವ ಸಚಿವರು : ಕಂದಾಯ ಸಚಿವರು

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಸರ್ಕಾರಿ ಗುಂಡುತೋಪುಗಳಲ್ಲಿ ಅಕ್ರಮವಾಗಿ ಸಾಗುವಳಿ ಮಾಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ (ಮಾಹಿತಿ ನೀಡುವುದು); | ಬಂದಿದೆ. |
| ಆ) | ಹಾಗಿದ್ದಲ್ಲಿ, ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿರುವ ಒಟ್ಟು ಸರ್ಕಾರಿ ಗುಂಡುತೋಪುಗಳೆಷ್ಟು; ಅದರಲ್ಲಿ ಈಗಾಗಲೇ ಒತ್ತುವರಿ ಮಾಡಿ ಅಕ್ರಮವಾಗಿ ಸಾಗುವಳಿ ಮಾಡುತ್ತಿರುವ ಗುಂಡುತೋಪುಗಳೆಷ್ಟು; ಹಾಗಿದ್ದಲ್ಲಿ, ಸರ್ಕಾರ ತೆರವುಗೊಳಿಸಲು ಕೈಗೊಂಡಿರುವ ಕ್ರಮಗಳೇನು (ತಾಲ್ಲೂಕುವಾರು ವಿವರ ನೀಡುವುದು) | ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿಯಲ್ಲಿರುವ ಒಟ್ಟು ಗುಂಡುತೋಪುಗಳ ಸಂಖ್ಯೆ 1100.<br>ಒತ್ತುವರಿಯಾಗಿರುವ ಗುಂಡುತೋಪುಗಳ ವಿವರ ಈ ಕೆಳಗಿನಂತಿದೆ. |

| ಕ್ರಸಂ | ತಾಲ್ಲೂಕು | ಗುಂಡು ತೋಪುಗಳ ಸಂಖ್ಯೆ | ಒತ್ತುವರಿಯಾದ ಗುಂಡುತೋಪುಗಳ ಸಂಖ್ಯೆ |
|---|---|---|---|
| 1 | ದೇವನಹಳ್ಳಿ | 262 | 49 |
| 2 | ದೊಡ್ಡಬಳ್ಳಾಪುರ | 343 | 25 |
| 3 | ಹೊಸಕೋಟೆ | 279 | 75 |
| 4 | ನೆಲಮಂಗಲ | 216 | 30 |
| | ಒಟ್ಟು | **1100** | **179** |

| | | |
|---|---|---|
| | | ಬೆಂಗಳೂರು ಗ್ರಾಮಾಂತರ ಜಿಲ್ಲಾ ವ್ಯಾಪ್ತಿಯ ನಾಲ್ಕು ತಾಲ್ಲೂಕುಗಳಲ್ಲಿ ಒತ್ತುವರಿಯಾದ ಗುಂಡುತೋಪುಗಳನ್ನು ತೆರವುಗೊಳಿಸಲು ಕ್ರಿಯಾ ಯೋಜನೆಯನ್ನು ತಯಾರಿಸಿ ಈಗಾಗಲೇ ಒತ್ತುವರಿಯಾದ ಎಲ್ಲಾ ಗುಂಡುತೋಪುಗಳ ಒತ್ತುವರಿಯನ್ನು ತೆರವುಗೊಳಿಸಲಾಗಿದೆ. |
| ಇ) | ಅಕ್ರಮವಾಗಿ ಸಾಗುವಳಿ ಮಾಡುತ್ತಿರುವವರಿಗೆ ಸಕ್ರಮಗೊಳಿಸಲು ಅವಕಾಶವಿದೆಯೇ (ಪೂರ್ಣ ವಿವರ ನೀಡುವುದು); | ಅವಕಾಶವಿರುವುದಿಲ್ಲ. |

| ಈ) | ಈ ಗುಂಡುತೋಪುಗಳಲ್ಲಿ ಮರಗಳನ್ನು ಬೆಳೆಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು (ವಿವರ ನೀಡುವುದು)? | ಸರ್ಕಾರಿ ಗುಂಡು ತೋಪು ಜಮೀನುಗಳು ಹಾಲಿ ಗ್ರಾಮ ಪಂಚಾಯ್ತಿ ವತಿಯಿಂದ ನಿರ್ವಹಣೆಯಾಗುತ್ತಿದ್ದು, ವಿಶೇಷ ಅನುದಾನದಲ್ಲಿ ಮರಗಳನ್ನು ಬೆಳೆಸಲು ಕ್ರಮಕೈಗೊಳ್ಳಲು ಅವಕಾಶವಿರುತ್ತದೆ. |
|---|---|---|

**ಸಂಖ್ಯೆ: ಆರ್‌ಡಿ 06 ಎಲ್‌ಜಿಕ್ಯೂ 2021**

(ಆರ್. ಅಶೋಕ)
ಕಂದಾಯ ಸಚಿವರು

# ಕರ್ನಾಟಕ ವಿಧಾನ ಸಭೆ

| | | |
|---|---|---|
| ಮಾನ್ಯ ಸದಸ್ಯರ ಹೆಸರು | : | ಶ್ರೀ ಆಚಾರ್ ಹಾಲಪ್ಪ ಬಸಪ್ಪ (ಯಲಬುರ್ಗ) |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | **240** |
| ಉತ್ತರಿಸಬೇಕಾದ ದಿನಾಂಕ | : | 01.02.2021 |
| ಉತ್ತರಿಸಬೇಕಾದ ಸಚಿವರು | : | ವಸತಿ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ಕೊಪ್ಪಳ ಜಿಲ್ಲೆಯ ಯಲಬುರ್ಗಾ ವಿಧಾನ ಸಭಾ ಕ್ಷೇತ್ರದಲ್ಲಿ ವಿವಿಧ ವಸತಿ ಯೋಜನೆಗಳಡಿಯಲ್ಲಿ ಆಯ್ಕೆ ಮಾಡಲಾದ ಫಲಾನುಭವಿಗಳ ಸಂಖ್ಯೆ ಎಷ್ಟು; (ಯೋಜನೆಗಳವಾರು ವಿವರ ನೀಡುವುದು) | 2017-18 ನೇ ಸಾಲಿನಿಂದ ಇಲ್ಲಿಯವರೆಗೆ ಕೊಪ್ಪಳ ಜಿಲ್ಲೆಯ ಯಲಬುರ್ಗ ವಿಧಾನ ಸಭಾ ಕ್ಷೇತ್ರದಲ್ಲಿ ವಿವಿಧ ವಸತಿ ಯೋಜನೆಗಳಡಿಯಲ್ಲಿ ಒಟ್ಟು 4680 ಫಲಾನುಭವಿಗಳನ್ನು ಆಯ್ಕೆ ಮಾಡಿ ಕಾಮಗಾರಿ ಆದೇಶ ನೀಡಲಾಗಿದೆ. ಯೋಜನಾವಾರು ವಿವರ ಕೆಳಕಂಡಿಂತಿದೆ. |

| ಕ್ರ. ಸಂ | ಯೋಜನೆ | ಆಯ್ಕೆಯಾಗಿ ಕಾಮಗಾರಿ ಆದೇಶ ನೀಡಲಾದ ಫಲಾನುಭವಿಗಳ ಸಂಖ್ಯೆ |
|---|---|---|
| 1 | ಬಸವ ವಸತಿ ಯೋಜನೆ | 1693 |
| 2 | ಡಾ\|\| ಬಿ.ಆರ್ ಅಂಬೇಡ್ಕರ್ ಯೋಜನೆ (ಗ್ರಾ & ನ) | 641 |
| 3 | ದೇವರಾಜ್ ಅರಸು ವಸತಿ ಯೋಜನೆ (ಗ್ರಾ & ನ) | 145 |
| 4 | ಪ್ರಧಾನ ಮಂತ್ರಿ ಆವಾಸ್ ಯೋಜನೆ (ಗ್ರಾಮೀಣ) | 1785 |
| 5 | ವಾಜಪೇಯಿ ನಗರ ವಸತಿ ಯೋಜನೆ | 416 |
| | **ಒಟ್ಟು** | **4680** |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| (ಆ) | ಸದರಿ ಫಲಾನುಭವಿಗಳಿಗೆ ವಸತಿಯೋಜನೆಯನುಸಾರ ಕಟ್ಟಡ ವೆಚ್ಚದ ಬಿಲ್ಲುಗಳ ಮೊತ್ತವನ್ನು ಪಾವತಿಸಲಾಗಿದೆಯೇ ; | ರಾಜ್ಯದಲ್ಲಿ ವಿವಿಧ ವಸತಿ ಯೋಜನೆಗಳಡಿ ನಿರ್ಮಿಸಿಕೊಂಡಿರುವ / ಪ್ರಗತಿಯಲ್ಲಿರುವ ಮನೆಗಳನ್ನು ಇಂದಿರಾ ಮನೆ ಮೊಬೈಲ್ ಆಪ್ ಮೂಲಕ ಮನೆಗಳ ಪ್ರಗತಿಯನ್ನು ಜಿ.ಪಿ.ಎಸ್ ಗೆ ಅಳವಡಿಸಿ ಅರ್ಹಗೊಂಡ ನಂತರ ಸದರಿ ಮನೆಗಳ ಪ್ರಗತಿಯನ್ನು ಮತ್ತೊಮ್ಮೆ Geo ಆಧಾರಿತ Vigil App ಮೂಲಕ ಗ್ರಾಮೀಣ ಪ್ರದೇಶದಲ್ಲಿ ಮುಖ್ಯ ಕಾರ್ಯ ನಿರ್ವಹಣಾಧಿಕಾರಿಯವರು, ಜಿಲ್ಲಾ ಪಂಚಾಯತಿ ಹಾಗೂ ನಗರ ಪ್ರದೇಶದಲ್ಲಿ ಜಿಲ್ಲಾಧಿಕಾರಿಗಳು ಪರಿಶೀಲಿಸಿ, ಅನುದಾನ ಬಿಡುಗಡೆಗೆ ಶಿಫಾರಸ್ಸು ಮಾಡಿರುವ ಮನೆಗಳಿಗೆ ಆಧಾರ್ ಜೋಡಣೆಯಾದ ಫಲಾನುಭವಿಗಳ ಬ್ಯಾಂಕ್ ಖಾತೆಗಳಿಗೆ ನೇರವಾಗಿ ಅನುದಾನ ಬಿಡುಗಡೆ ಮಾಡಲಾಗುತ್ತಿದೆ. |
| (ಇ) | ಇಲ್ಲವಾದಲ್ಲಿ, ಪಾವತಿಗಾಗಿ ಬಾಕಿ ಇರುವ ಪ್ರಕರಣಗಳ ಸಂಖ್ಯೆ ಎಷ್ಟು ; (ಯೋಜನೆಗಳವಾರು ವಿವರ ನೀಡುವುದು) | |
| (ಈ) | ಸದರಿ ವೆಚ್ಚದ ಬಿಲ್ಲುಗಳನ್ನು ಪೂರ್ಣ ಪ್ರಮಾಣದಲ್ಲಿ ಫಲಾನುಭವಿಗಳಿಗೆ ಪಾವತಿಸಲು ಸರ್ಕಾರ ಕೈಗೊಂಡ ಕ್ರಮಗಳೇನು ? | |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| | | ಅದರಂತೆ ಕೊಪ್ಪಳ ಜಿಲ್ಲೆಯ, ಯಲಬುರ್ಗಾ ವಿಧಾನ ಸಭಾ ಕ್ಷೇತ್ರದಲ್ಲಿ ವಿವಿಧ ವಸತಿ ಯೋಜನೆಗಳಡಿಯಲ್ಲಿ ವಿಜಿಲ್ ಆಪ್‌ನಲ್ಲಿ ಪರಿಶೀಲಿಸಿ ಇಲ್ಲಿಯವರೆಗೆ ರೂ.11.16 ಕೋಟಿಗಳನ್ನು ಬಿಡುಗಡೆ ಮಾಡಲಾಗಿದ್ದು, ಪ್ರಸ್ತುತ ಪ್ರಗತಿಯಲ್ಲಿರುವ ಮನೆಗಳಿಗೆ ಪ್ರಗತಿಗನುಗುಣವಾಗಿ ಶೀಘ್ರವಾಗಿ ಅನುದಾನ ಬಿಡುಗಡೆಗೆ ಕ್ರಮವಹಿಸಲಾಗುತ್ತಿದೆ. |

ಸಂಖ್ಯೆ :ವಇ 28 ಹೆಚ್‌ಎಎಂ 2021

(ವಿ. ಸೋಮಣ್ಣ)
ವಸತಿ ಸಚಿವರು

## ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 242
ಸದಸ್ಯರ ಹೆಸರು : ಶ್ರೀ.ಗೂಳಿಹಟ್ಟಿ ಡಿ.ಶೇಖರ್ (ಹೊಸದುರ್ಗ)
ಉತ್ತರಿಸುವ ದಿನಾಂಕ : 01-02-2021
ಉತ್ತರಿಸುವ ಸಚಿವರು : ಕಂದಾಯ ಸಚಿವರು

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಹುಲಿಮಂಗಲ ಜಿಗಣಿ ಹೋಬಳಿ ಆನೇಕಲ್ ತಾಲ್ಲೂಕು ಬೆಂಗಳೂರು ಜಿಲ್ಲೆಯ ಸರ್ವೆ ನಂಬರ್ 154, 155, 156 350ರಲ್ಲಿರುವ ಸರ್ಕಾರಿ ಜಾಗವೆಷ್ಟು; ಈ ಪೈಕಿ ಎಷ್ಟು ಜಮೀನನ್ನ ಯಾವಾಗ ಮತ್ತು ಎಷ್ಟು ಜನರಿಗೆ ಹಂಚಿಕೆ ಮಾಡಲಾಗಿದೆ; | ಬೆಂಗಳೂರು ನಗರ ಜಿಲ್ಲೆ, ಜಿಗಣಿ ಹೋಬಳಿ, ಹುಲಿಮಂಗಲ ಗ್ರಾಮದ ರಿ.ಸ.ನಂ.154, 155 ಹಾಗೂ 156ರಲ್ಲಿರುವ ಸರ್ಕಾರಿ ಜಮೀನಿನ ವಿವರಗಳನ್ನು ಅನುಬಂಧದಲ್ಲಿ ಒದಗಿಸಿದೆ. |
| ಆ) | ಸದರಿ ಜಮೀನಿನಲ್ಲಿ ವಸತಿ ಉಪಯೋಗಕ್ಕೆ ಕನ್ವರ್ಷನ್ ಮಾಡಲಾಗಿರುವ ಎಕರೆಗಳೆಷ್ಟು, ಎಷ್ಟು ಜನರ ಹೆಸರಿನಲ್ಲಿ ಕನ್ವರ್ಷನ್ ಮಾಡಲಾಗಿದೆ; ಈ ಸರ್ವೆ ನಂಬರ್ ಜಾಗದಲ್ಲಿ ಎಷ್ಟು ಅಂತಸ್ತುಗಳ ಬಹುಮಹಡಿ ಕಟ್ಟಡ ಕಟ್ಟಲಾಗಿದೆ. ಈ ಬಹುಮಹಡಿ ಕಟ್ಟಡಗಳು ಅಧಿಕೃತವೋ, ಅನಧಿಕೃತವೋ? | |

**ಸಂಖ್ಯೆ: ಆರ್‌ಡಿ 01 ಎಲ್‌ಜಿಕ್ಯೂ 2021**

(ಆರ್. ಅಶೋಕ)
ಕಂದಾಯ ಸಚಿವರು.

# ಅನುಬಂಧ

| ಕ್ರ ಸಂ | ಸ. ನಂ | ಮೂಲ ಗೋಮಾಳ ವಿಸ್ತೀರ್ಣ (ಎ/ಗುಂ) | ಎಷ್ಟು ಜನರಿಗೆ ಮಂಜೂರಿ ಮಾಡಲಾಗಿದೆ | ಇದನ್ನು ಯಾವಾಗ ಹಂಚಿಕೆ ಮಾಡಲಾಗಿರುತ್ತದೆ | ಭೂ ಪರಿವರ್ತನೆ ವಿಸ್ತೀರ್ಣ | ಎಷ್ಟು ಜನರಿಗೆ ವಸತಿ ಉದ್ದೇಶಕ್ಕೆ ಭೂ ಪರಿವರ್ತನೆ ಮಾಡಲಾಗಿದೆ | ಬಹುಮಹಡಿಗಳ ಕಟ್ಟಡಗಳ ಸಂಖ್ಯೆ | ಅಧಿಕೃತವೋ ಅಥವಾ ಅನಧಿಕೃತವೋ |
|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 |
| 1 | 154 | 177–23 | ಮಂಜೂರಿ ದಾಖಲೆ ಲಭ್ಯ ವಿರುವುದಿಲ್ಲ | ಮಂಜೂರಿ ದಾಖಲೆ ಲಭ್ಯವಿರುವುದಿಲ್ಲ | ಭೂ ಪರಿವರ್ತನೆ ಯಾಗಿರುವುದಿಲ್ಲ | – | ಇರುವುದಿಲ್ಲ | – |
| 2 | 155 | 125–17 | 32 | ಮಂಜೂರಿ ದಾಖಲೆ ಲಭ್ಯವಿರುವುದಿಲ್ಲ | 07–39 ಎಕರೆ/ಗುಂಟೆ | 1 | ಒಟ್ಟು ಕಟ್ಟಡಗಳ ಸಂಖ್ಯೆ: 45 ಇದರಲ್ಲಿ ಒಟ್ಟು 07–39 ಎಕರೆ/ಗುಂಟೆ ಪ್ರದೇಶದಲ್ಲಿ 4 ಬಹುಮಹಡಿಯ 12 ಅಂತಸ್ತಿನ ಕಟ್ಟಡಗಳಿರುತ್ತವೆ. | ಒಟ್ಟು 45 ಕಟ್ಟಡಗಳ ಪೈಕಿ 41 ಕಟ್ಟಡಗಳು ಅನಧಿಕೃತವಾಗಿದ್ದು, ಉಳಿಕೆ 4 ಕಟ್ಟಡಗಳು ಅಧಿಕೃತ ವಾಗಿರುತ್ತದೆ |
| 3 | 156 | 145–08 | 34 | ಮಂಜೂರಿ ದಾಖಲೆ ಲಭ್ಯವಿರುವುದಿಲ್ಲ | ಭೂ ಪರಿವರ್ತನೆ ಯಾಗಿರುವುದಿಲ್ಲ | – | ಒಟ್ಟು 217 ಕಟ್ಟಡಗಳು ಇರುತ್ತದೆ. | ಅನಧಿಕೃತ ವಾಗಿರುತ್ತದೆ |
| 4 | 350 | 22–09 | 2–15 ಎ/ಗುಂ ಜಮೀನನ್ನು ಸಾರ್ವಜನಿಕ ರಸ್ತೆಗೆ ಕಾಯ್ದಿರಿಸಲಾಗಿರುತ್ತದೆ ಹಾಗೂ 17–17 ಎ/ಗುಂ ಜಮೀನಿನ ಹರಾಜು ಪ್ರಕ್ರಿಯೆಗಾಗಿ ಪ್ರಸ್ತಾವನೆ ಜಿಲ್ಲಾಧಿಕಾರಿಯವರ ಹಂತದಲ್ಲಿ ಪರಿಶೀಲನೆಯಲ್ಲಿರುತ್ತದೆ. | | | | | |

## ಕರ್ನಾಟಕ ವಿಧಾನ ಸಭೆ

| | |
|---|---|
| ಮಾನ್ಯ ಸದಸ್ಯರ ಹೆಸರು | ಶ್ರೀ ರಘುಮೂರ್ತಿ ಟಿ. (ಚಳ್ಳಕೆರೆ) |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 245 |
| ಉತ್ತರಿಸಬೇಕಾದ ದಿನಾಂಕ | 01.02.2021 |
| ಉತ್ತರಿಸಬೇಕಾದ ಸಚಿವರು | ವಸತಿ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ ನಗರಕ್ಕೆ ಪ್ರಧಾನ ಮಂತ್ರಿ ಆವಾಸ್ ಹೌಸಿಂಗ್ ಫಾರ್ ಆಲ್ 2022 ಅಫೋರ್ಡೆಬಲ್ ಹೌಸಿಂಗ್ ಪಾರ್ಟನರ್‌ಶಿಪ್ ಉಪಯೋಜನೆಯಡಿ ಮಂಜೂರಾದ ಮನೆಗಳು ಎಷ್ಟು ; ಇದುವರೆವಿಗೆ ನಗರವಾಸಿಗಳಿಗೆ ಮನೆಗಳನ್ನು ಹಂಚಿಕೆ ಮಾಡಲು ಸರ್ಕಾರವು ಕೈಗೊಂಡಿರುವ ಕ್ರಮಗಳೇನು ; (ಸಂಪೂರ್ಣ ವಿವರ ನೀಡುವುದು) | ಪ್ರಧಾನ ಮಂತ್ರಿ ಆವಾಸ್ ಯೋಜನೆ (ನಗರ)ಯ ಎ.ಹೆಚ್.ಪಿ. ಘಟಕದಡಿ ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ ನಗರದಲ್ಲಿ 2,135 ಮನೆಗಳನ್ನು ನಿರ್ಮಿಸುವ 2 ಯೋಜನೆಗಳು (ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿಯಿಂದ 1127 ಮತ್ತು ಸ್ಥಳೀಯ ಸಂಸ್ಥೆಯಿಂದ 1008 ಮನೆಗಳು) ಕೇಂದ್ರ ಸರ್ಕಾರದಿಂದ ಅನುಮೋದನೆಗೊಂಡಿರುತ್ತವೆ.<br><br>ಸದರಿ ಮನೆಗಳ ಕಾಮಗಾರಿಯನ್ನು (ಸ್ಥಳೀಯ ಸಂಸ್ಥೆಯ 1008 ಮನೆಗಳಿಗೆ) ಪ್ರಾರಂಭಿಸಿ ಫಲಾನುಭವಿಗಳಿಗೆ ಹಂಚಿಕೆ ಮಾಡಲು ರಾಜ್ಯದಲ್ಲಿ ಅನುಷ್ಠಾನಗೊಳ್ಳುತ್ತಿರುವ ವಿವಿಧ ವಸತಿ ಯೋಜನೆಗಳ ಕುರಿತಂತೆ ರಾಜ್ಯ ಮಟ್ಟದ ಉಸ್ತುವಾರಿ ಸಂಸ್ಥೆಯಾದ ರಾಜೀವ್ ಗಾಂಧಿ ವಸತಿ ನಿಗಮ ನಿಯಮಿತದಿಂದ ಟೆಂಡರ್ ಆಹ್ವಾನಿಸಲಾಗಿದೆ.<br><br>ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿ (ಕೆ.ಎಸ್.ಡಿ.ಬಿ.) ವತಿಯಿಂದ ಅನುಷ್ಠಾನಗೊಳ್ಳುತ್ತಿರುವ 1127 ಮನೆಗಳ ನಿರ್ಮಾಣದ ಯೋಜನೆಯಡಿ 383 ಮನೆಗಳು ಪ್ರಗತಿಯ ಹಂತದಲ್ಲಿದ್ದು, 95 ಮನೆಗಳು ಪೂರ್ಣಗೊಂಡಿವೆ. |
| (ಆ) | ಕಳೆದ 3 ವರ್ಷಗಳಲ್ಲಿ ಚಳ್ಳಕೆರೆ ಕ್ಷೇತ್ರದ ನಗರ ಪ್ರದೇಶದ ವಸತಿ ರಹಿತರಿಗೆ ಶ್ರೀ ಅಟಲ್ ಬಿಹಾರಿ ವಾಜಪೇಯಿ ಯೋಜನೆಯಡಿ ಮಂಜೂರಾದ ಮನೆಗಳ ಸಂಖ್ಯೆ ಎಷ್ಟು ಮತ್ತು ಪೂರ್ಣ ಪ್ರಮಾಣದಲ್ಲಿ ಅನುಷ್ಠಾನಗೊಳಿಸಿರುವ ಮನೆಗಳೆಷ್ಟು ; (ಸಂಪೂರ್ಣ ವಿವರ ನೀಡುವುದು) | ಕಳೆದ 3 ವರ್ಷಗಳಲ್ಲಿ ಚಳ್ಳಕೆರೆ ವಿಧಾನಸಭಾ ಕ್ಷೇತ್ರಕ್ಕೆ ವಾಜಪೇಯಿ ನಗರ ವಸತಿ ಯೋಜನೆಯಡಿ ಒಟ್ಟು 101 ಮನೆಗಳ ಗುರಿಯನ್ನು ನಿಗದಿ ಪಡಿಸಲಾಗಿದ್ದು, ಸದರಿ ಗುರಿಗೆ ಎದುರಾಗಿ 53 ಫಲಾನುಭವಿಗಳನ್ನು ಆಯ್ಕೆ ಮಾಡಲಾಗಿದ್ದು, ಒಟ್ಟು 30 ಮನೆಗಳು ಪೂರ್ಣಗೊಂಡಿರುತ್ತವೆ. 4 ಮನೆಗಳು ವಿವಿಧ ಹಂತದಲ್ಲಿ ಪ್ರಗತಿಯಲ್ಲಿರುತ್ತವೆ. ಉಳಿದಂತೆ 19 ಮನೆಗಳನ್ನು ರದ್ದು ಪಡಿಸಲಾಗಿದೆ. ವಿವರ ಈ ಕೆಳಕಂಡಂತಿದೆ:- |

| ಶ್ರೇಣಿ | ಗುರಿ | ಆಯ್ಕೆ | ಪೂರ್ಣ | ಪ್ರಗತಿ | ಬ್ಲಾಕ್ ಆದ ಮನೆಗಳು |
|---|---|---|---|---|---|
| 2017-18 | 67 | 53 | 30 | 4 | 19 |
| 2018-19 | 34 | 0 | 0 | 0 | 0 |
| 2019-20 | ಗುರಿ ನಿಗಧಿಪಡಿಸಿರುವುದಿಲ್ಲ. | | | | |
| **ಒಟ್ಟು** | **101** | **53** | **30** | **4** | **19** |

| | | |
|---|---|---|
| (ಇ) | ಕಳೆದ 3 ವರ್ಷಗಳಲ್ಲಿ ಚಳ್ಳಕೆರೆ ಕ್ಷೇತ್ರಕ್ಕೆ ವಸತಿ ರಹಿತ ಫಲಾನುಭವಿಗಳಿಗೆ ಬಸವ ಆಶ್ರಯ ಯೋಜನೆಯಡಿ ಮತ್ತು ವಿವಿಧ ಯೋಜನೆಯಡಿ ಬಿಡುಗಡೆಯಾದ ಮನೆಗಳ ಸಂಖ್ಯೆ ಎಷ್ಟು; | ಚಳ್ಳಕೆರೆ ವಿಧಾನ ಸಭಾ ಕ್ಷೇತ್ರಕ್ಕೆ ಕಳೆದ ಮೂರು ವರ್ಷಗಳಲ್ಲಿ ಅಂದರೆ, 2017-18ನೇ ಸಾಲಿನಿಂದ 2019-20ನೇ ಸಾಲಿನವರೆಗೆ ಬಸವ ವಸತಿ ಮತ್ತು ವಿವಿಧ ವಸತಿ ಯೋಜನೆಗಳಡಿ ಒಟ್ಟು 3814 ಮನೆಗಳನ್ನು ಮಂಜೂರು ಮಾಡಿ ಕಾಮಗಾರಿ ಆದೇಶ ನೀಡಲಾಗಿದೆ. ಈ ಮನೆಗಳ ಪೈಕಿ ಒಟ್ಟು 1159 ಮನೆಗಳು ಪೂರ್ಣಗೊಂಡಿದ್ದು, 1430 ಮನೆಗಳು ವಿವಿಧ ಹಂತದಲ್ಲಿ ಪ್ರಗತಿಯಲ್ಲಿರುತ್ತವೆ. ಇನ್ನುಳಿದ 279 ಮನೆಗಳು ಪ್ರಾರಂಭವಾಗಬೇಕಿದ್ದು, 946 ಮನೆಗಳು ಬ್ಲಾಕ್ ಆಗಿ ರದ್ದಾಗಿರುತ್ತವೆ. ಯೋಜನೆವಾರು ವಿವರ ಈ ಕೆಳಕಂಡಂತಿದೆ:- |
| (ಈ) | ಅದರಲ್ಲಿ ಪೂರ್ಣಗೊಂಡಿರುವ / ಅಪೂರ್ಣಗೊಂಡಿರುವ ಮನೆಗಳೆಷ್ಟು? (ಸಂಪೂರ್ಣ ವಿವರ ನೀಡುವುದು) | |

| ಯೋಜನೆ | ಶ್ರೇಣಿ | ಮಂಜೂರಾದ ಮನೆಗಳು | ಪೂರ್ಣಗೊಂಡ ಮನೆಗಳು | ಒಟ್ಟು ಪ್ರಗತಿಯಲ್ಲಿರುವ ಮನೆಗಳು | ಪ್ರಾರಂಭವಾಗಬೇಕಾದ ಮನೆಗಳು | ಬ್ಲಾಕ್ ಆಗಿ ರದ್ದಾದ ಮನೆಗಳು |
|---|---|---|---|---|---|---|
| ಬಸವ ವಸತಿ ಯೋಜನೆ | 2017-2018 | 1456 | 526 | 531 | 0 | 399 |
| ಡಾ|| ಬಿ.ಆರ್. ಅಂಬೇಡ್ಕರ್ ನಿವಾಸ್ ಯೋಜನೆ (ಗ್ರಾಮೀಣ ಮತ್ತು ನಗರ) | 2017-2018 | 1350 | 251 | 581 | 0 | 518 |
| ದೇವರಾಜ ಅರಸು ವಸತಿ ಯೋಜನೆ (ಗ್ರಾಮೀಣ ಮತ್ತು ನಗರ) | 2017-2018 | 195 | 82 | 75 | 37 | 1 |
| | 2018-2019 | 53 | 0 | 30 | 23 | 0 |
| ಪ್ರಧಾನ ಮಂತ್ರಿ ಆವಾಸ್ ಯೋಜನೆ (ಗ್ರಾಮೀಣ) | 2017-2018 | 501 | 266 | 167 | 65 | 3 |
| | 2019-2020 | 206 | 4 | 42 | 154 | 6 |
| ವಾಜಪೇಯಿ ನಗರ ವಸತಿ ಯೋಜನೆ | 2017-2018 | 53 | 30 | 4 | 0 | 19 |
| **ಒಟ್ಟು** | | **3814** | **1159** | **1430** | **279** | **946** |

ಸಂಖ್ಯೆ: ವಇ 23 ಹೆಚ್‌ಎಫ್‌ಎ 2021

(ವಿ. ಸೋಮಣ್ಣ)
ವಸತಿ ಸಚಿವರು

## ಕರ್ನಾಟಕ ವಿಧಾನಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 251

2. ಸದಸ್ಯರ ಹೆಸರು : ಶ್ರೀ ದಿನೇಶ್ ಗುಂಡೂರಾವ್ (ಗಾಂಧೀನಗರ)

3. ಉತ್ತರಿಸುವ ದಿನಾಂಕ : 01.02.2021

4. ಉತ್ತರಿಸುವ ಸಚಿವರು : ಕಂದಾಯ ಸಚಿವರು

| | ಪ್ರಶ್ನೆ | ಉತ್ತರ |
|---|---|---|
| (ಅ) | ರಾಜ್ಯದಲ್ಲಿ ಕಳೆದ ಮೂರು ವರ್ಷಗಳಿಂದ ಇದುವರೆಗೂ ದಾಖಲಾದ 79ಎ ಮತ್ತು ಬಿ ಪ್ರಕರಣಗಳೆಷ್ಟು; | ಅನುಬಂಧ-1ರಲ್ಲಿ ಲಗತ್ತಿಸಿದೆ |
| (ಆ) | ಈ ಪೈಕಿ ಇತ್ಯರ್ಥವಾದ ಪ್ರಕರಣಗಳ ಸಂಖ್ಯೆ ಎಷ್ಟು; | ಅನುಬಂಧ-1ರಲ್ಲಿ ಲಗತ್ತಿಸಿದೆ |
| (ಇ) | ಜುಲೈ-2020ರ ಅಂತ್ಯದವರೆಗೆ ಎಷ್ಟು ಪ್ರಕರಣಗಳು ಬಾಕಿ ಇದ್ದವು; | ಅನುಬಂಧ-1ರಲ್ಲಿ ಲಗತ್ತಿಸಿದೆ |
| (ಈ) | ದಾಖಲಿಸಲಾದ ಪ್ರಕರಣಗಳಲ್ಲಿ ಸರ್ಕಾರದ ಪರ ಆದೇಶವಾದ ಪ್ರಕರಣಗಳೆಷ್ಟು; ಮತ್ತು ವಿಸ್ತೀರ್ಣವೆಷ್ಟು; | ಅನುಬಂಧ-1ರಲ್ಲಿ ಲಗತ್ತಿಸಿದೆ |
| (ಉ) | ದಾಖಲಿಸಲಾದ ಪ್ರಕರಣಗಳಲ್ಲಿ ರೈತರ ಪರ ಆದೇಶವಾದ ಪ್ರಕರಣಗಳ ಸಂಖ್ಯೆ ಎಷ್ಟು; ವಿಸ್ತೀರ್ಣ ಎಷ್ಟು; [ಕ್ಷೇತ್ರವಾರು ವಿವರ ನೀಡುವುದು] | ಅನುಬಂಧ-1ರಲ್ಲಿ ಲಗತ್ತಿಸಿದೆ |

ಸಂಖ್ಯೆ: ಆರ್‌ಡಿ 02 ಎಲ್‌ಆರ್‌ಎಸ್ 2021

(ಆರ್.ಅಶೋಕ)
ಮಾನ್ಯ ಕಂದಾಯ ಸಚಿವರು.

**ಮಾನ್ಯ ವಿಧಾನಸಭಾ ಸದಸ್ಯರಾದ ಶ್ರೀ ದಿನೇಶ್ ಗುಂಡೂರಾವ್ (ಗಾಂಧೀನಗರ) ರವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 251ಕ್ಕೆ ಅನುಬಂಧ-1**

**ಕಳೆದ ಮೂರು ವರ್ಷಗಳಲ್ಲಿ ಕರ್ನಾಟಕ ಭೂ ಸುಧಾರಣಾ ಕಾಯ್ದೆ, 1961ರ ಕಲಂ 79ಎ ಮತ್ತು 79ಬಿ ರಡಿ ದಾಖಲಾದ ಪ್ರಕರಣಗಳ ವಿವರ**

| ಕ್ರಮ ಸಂಖ್ಯೆ | ಜಿಲ್ಲೆಯ ಹೆಸರು | ದಾಖಲಾದ ಪ್ರಕರಣಗಳು | ಇತ್ಯರ್ಥವಾದ ಪ್ರಕರಣಗಳು | ಜುಲೈ-2020ರ ಅಂತ್ಯಕ್ಕೆ ಬಾಕಿ ಉಳಿದಿರುವ ಪ್ರಕರಣಗಳು | ಸರ್ಕಾರದ ಪರವಾಗಿ ಆದೇಶವಾದ ಪ್ರಕರಣಗಳು | ವಿಸ್ತೀರ್ಣ [ಎಕರೆ/ ಗುಂಟೆ/ ಆಣೆ] | ರೈತರ ಪರವಾಗಿ ಆದೇಶವಾದ ಪ್ರಕರಣಗಳು | ವಿಸ್ತೀರ್ಣ [ಎಕರೆ/ ಗುಂಟೆ/ ಆಣೆ] |
|---|---|---|---|---|---|---|---|---|
| 1 | ಬೆಂಗಳೂರು ನಗರ | 8549 | 6727 | 2606 | 1652 | 3390–34.05 | 5135 | 4984–37.08 |
| 2 | ಬೆಂಗಳೂರು ಗ್ರಾಮಾಂತರ | 2895 | 4826 | 1468 | 1007 | 1078–32 | 3819 | 3981–16 |
| 3 | ಕೋಲಾರ | 263 | 58 | 555 | 5 | 4–31 | 53 | 80–20.04 |
| 4 | ಶಿವಮೊಗ್ಗ | 774 | 742 | 103 | 68 | 189–33 | 66 | 192–20 |
| 5 | ಚಿತ್ರದುರ್ಗ | 354 | 204 | 150 | 3 | 46–09 | 201 | 575–11 |
| 6 | ಚಿಕ್ಕಬಳ್ಳಾಪುರ | 707 | 707 | 210 | 210 | 424–00 | 497 | 849–21 |
| 7 | ತುಮಕೂರು | 594 | 423 | 171 | 148 | 448–36.08 | 3076 | 5343–22 |
| 8 | ರಾಮನಗರ | 463 | 463 | 312 | 159 | 211–20 | 304 | 298–08 |
| 9 | ದಾವಣಗೆರೆ | 3215 | 3215 | 703 | 107 | 186–20 | 3104 | 5004–37 |
| 10 | ಮೈಸೂರು | 938 | 1131 | 793 | 24 | 17–33 | 1107 | 1108–03.04 |
| 11 | ಚಾಮರಾಜನಗರ | 796 | 778 | 321 | 74 | 95–34.11 | 704 | 2157–02.06 |
| 12 | ಚಿಕ್ಕಮಗಳೂರು | 206 | 184 | 22 | 17 | 151–27 | 167 | 327–14.08 |
| 13 | ದಕ್ಷಿಣ ಕನ್ನಡ | 255 | 255 | – | – | – | 255 | 348–99 |
| 14 | ಕೊಡಗು | 95 | 95 | 25 | 191 | 568–96 | 978 | 3257–29 |
| 15 | ಹಾಸನ | 304 | 304 | 70 | 08 | 11–02 | 296 | 1810–34 |
| 16 | ಮಂಡ್ಯ | 788 | 522 | 266 | 149 | 179–38.04 | 373 | 588–14.04 |
| 17 | ಉಡುಪಿ | 186 | 186 | – | 02 | 0–1575 | 184 | 794–81 |
| 18 | ಬೆಳಗಾವಿ | 427 | 178 | 249 | – | – | 178 | 242–36 |
| 19 | ವಿಜಯಪುರ | 184 | 184 | 59 | 25 | 189–29 | 159 | 811–36 |
| 20 | ಬಾಗಲಕೋಟೆ | 09 | 09 | – | – | – | 09 | 11–09 |
| 21 | ಧಾರವಾಡ | 612 | 398 | 373 | 09 | 148–25 | 389 | 608–11 |
| 22 | ಗದಗ | 235 | 235 | 137 | – | – | 235 | 263–27 |
| 23 | ಹಾವೇರಿ | 307 | 184 | 123 | 24 | 82–01.08 | 160 | 485–05 |
| 24 | ಉತ್ತರ ಕನ್ನಡ ಜಿಲ್ಲೆ | 250 | 250 | 07 | 12 | 18–82.03 | 238 | 231–08.15 |
| 25 | ಬಳ್ಳಾರಿ | 1625 | 1625 | 361 | 23 | 141–15 | 1602 | 4710–32 |
| 26 | ಬೀದರ್ | 308 | 308 | 102 | 69 | 408–19 | 239 | 843–18 |
| 27 | ಕಲಬುರಗಿ | 154 | 153 | 275 | 54 | 430–24 | 754 | 3183–25 |
| 28 | ಕೊಪ್ಪಳ | 59 | 59 | 59 | – | – | 59 | 225–14 |
| 29 | ರಾಯಚೂರು | 56 | 56 | 46 | 04 | 15–25 | 52 | 129–10 |
| 30 | ಯಾದಗಿರಿ | 76 | 14 | 62 | 04 | 18–30 | 72 | 325–33 |

# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ : 255

ಸದಸ್ಯರ ಹೆಸರು : ಶ್ರೀ ಮುನಿಯಪ್ಪ ವಿ

ಉತ್ತರಿಸುವ ಸಚಿವರು : ಕೃಷಿ ಸಚಿವರು

ಉತ್ತರಿಸುವ ದಿನಾಂಕ : 01-02-2021

<table>
<tr><th>ಸಂ</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ</td><td>ಶಿಡ್ಲಘಟ್ಟ ವಿಧಾನಸಭಾ ಕ್ಷೇತ್ರದ ಕೃಷಿ ಇಲಾಖೆಗೆ ಎಲ್ಲಾ ವೃಂದದಲ್ಲಿ ಮಂಜೂರಾಗಿರುವ ಹುದ್ದೆಗಳೆಷ್ಟು; ಖಾಲಿ ಇರುವ ಹುದ್ದೆಗಳೆಷ್ಟು?</td><td>ಶಿಡ್ಲಘಟ್ಟ ವಿಧಾನಸಭಾ ಕ್ಷೇತ್ರದ ಕೃಷಿ ಇಲಾಖೆಯಲ್ಲಿ ಮಂಜೂರಾಗಿರುವ ಹುದ್ದೆಗಳ ವಿವರಗಳ ಕೆಳಕಂಡಂತಿರುತ್ತವೆ:
<table>
<tr><th>ಕ್ರ.ಸಂ.</th><th>ಹುದ್ದೆ ಹೆಸರು</th><th>ಮಂಜೂರು</th><th>ಭರ್ತಿ</th><th>ಖಾಲಿ</th></tr>
<tr><td>1.</td><td>ಸಹಾಯಕ ಕೃಷಿ ನಿರ್ದೇಶಕರು</td><td>1</td><td>1</td><td>0</td></tr>
<tr><td>2.</td><td>ಕೃಷಿ ಅಧಿಕಾರಿ (ತಾ.ಅ)</td><td>2</td><td>1</td><td>1</td></tr>
<tr><td>3.</td><td>ಕೃಷಿ ಅಧಿಕಾರಿ (ರೈ.ಸಂ.ಕೇಂದ್ರ)</td><td>4</td><td>1</td><td>3</td></tr>
<tr><td>4.</td><td>ಸಹಾಯಕ ಕೃಷಿ ಅಧಿಕಾರಿ</td><td>10</td><td>0</td><td>10</td></tr>
<tr><td>5.</td><td>ಅಧೀಕ್ಷಕರು</td><td>1</td><td>0</td><td>1</td></tr>
<tr><td>6.</td><td>ಪ್ರಥಮ ದರ್ಜೆ ಸಹಾಯಕ</td><td>1</td><td>0</td><td>1</td></tr>
<tr><td>7.</td><td>ದ್ವಿತೀಯ ದರ್ಜೆ ಸಹಾಯಕ</td><td>2</td><td>1</td><td>1</td></tr>
<tr><td>8.</td><td>ಬೆರಳಚ್ಚುಗಾರರು</td><td>1</td><td>0</td><td>1</td></tr>
<tr><td>9.</td><td>ವಾಹನ ಚಾಲಕರು</td><td>1</td><td>0</td><td>1</td></tr>
<tr><td>10.</td><td>ಡಿ.ಗ್ರೂಪ್ ನೌಕರರು</td><td>3</td><td>2</td><td>1</td></tr>
<tr><td colspan="2">ಒಟ್ಟು</td><td>26</td><td>6</td><td>20</td></tr>
</table></td></tr>
<tr><td>ಆ</td><td>ಖಾಲಿ ಇರುವ ಹುದ್ದೆಗಳನ್ನು ಭರ್ತಿ ಮಾಡದಿರುವುದರಿಂದ ಸಾರ್ವಜನಿಕ ಕೆಲಸ ಕಾರ್ಯಗಳಿಗೆ ತೊಂದರೆ ಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: ಹಾಗಿದ್ದಲ್ಲಿ ಖಾಲಿ ಇರುವ ಹುದ್ದೆಗಳನ್ನು ಯಾವಾಗ ಭರ್ತಿ ಮಾಡಲಾಗುವುದು?</td><td>2018-19ನೇ ಸಾಲಿನಲ್ಲಿ ಶಿಡ್ಲಘಟ್ಟ ತಾಲ್ಲೂಕಿಗೆ ಗ್ರೂಪ್-ಎ, ವೃಂದದಲ್ಲಿ ಸಹಾಯಕ ಕೃಷಿ ನಿರ್ದೇಶಕರು-01 ಹುದ್ದೆ, ಬಿ ವೃಂದದಲ್ಲಿ, ಕೃಷಿ ಅಧಿಕಾರಿಗಳು-02 ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ಭರ್ತಿ ಮಾಡಲಾಗಿದೆ.<br><br>ಸಾರ್ವಜನಿಕ ಕೆಲಸ ಕಾರ್ಯಗಳಿಗೆ ತೊಂದರೆಯಾಗಬಾರದೆಂಬ ದೃಷ್ಟಿಯಿಂದ ವಿವಿಧ ವೃಂದದ ಹುದ್ದೆಗಳನ್ನು ಹೊರಗುತ್ತಿಗೆ ಆಧಾರದ ಮೇಲೆ ಪಡೆದು ಕಾರ್ಯ ನಿರ್ವಹಿಸಲಾಗುತ್ತಿದೆ.</td></tr>
</table>

| | | |
|---|---|---|
| ಇ | ಶಿಡ್ಲಘಟ್ಟ ವಿಧಾನ ಸಭಾ ಕ್ಷೇತ್ರದಲ್ಲಿ ಈ ಹಿಂದೆ ಕೃಷಿ ಹೊಂಡ ನಿರ್ಮಾಣ ಮಾಡಿ ಬರುವಂತಹ ಅಲ್ಪ ಸ್ವಲ್ಪ ನೀರನ್ನು ಶೇಖರಣೆ ಮಾಡಿ ವ್ಯವಸಾಯ ಮಾಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ:<br>ಹಾಗಿದ್ದಲ್ಲಿ ಕೃಷಿ ಹೊಂಡ ನಿರ್ಮಾಣ ಮಾಡಲು ಅನುದಾನ ಇಲ್ಲದೇ ಸಂಪೂರ್ಣವಾಗಿ ಸ್ಥಗಿತಗೊಂಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ? | ಶಿಡ್ಲಘಟ್ಟ ವಿಧಾನಸಭಾ ಕ್ಷೇತ್ರದಲ್ಲಿ 2014–15ನೇ ಸಾಲಿನಿಂದ 2019–20ನೇ ಸಾಲಿನವರೆಗೆ ಕೃಷಿ ಭಾಗ್ಯ ಯೋಜನೆಯಡಿ ಒಟ್ಟು 1320 ಕೃಷಿ ಹೊಂಡಗಳನ್ನು ನಿರ್ಮಿಸಲಾಗಿದೆ. 2021–21ನೇ ಸಾಲಿಗೆ ಯೋಜನೆಯಡಿ ಕಳೆದ ಸಾಲಿನಲ್ಲಿ ಮಾರ್ಗಸೂಚಿಗಳನ್ವಯ ಈಗಾಗಲೇ ಅನುಷ್ಠಾನ ಮಾಡಿರುವ ಘಟಕಗಳಿಗೆ ಮಾತ್ರ ಬಾಕಿ ಸಹಾಯಧನ ಪಾವತಿಸಲು ಅನುದಾನ ಆಯವ್ಯಯದಲ್ಲಿ ನಿಗದಿಯಾಗಿರುತ್ತದೆ. |
| ಈ | ರೈತ ಜಮೀನುಗಳಲ್ಲಿ ಕೃಷಿ ಹೊಂಡ ನಿರ್ಮಾಣ ಮಾಡಲು ಅನುದಾನ ಬಿಡುಗಡೆ ಮಾಡುವುದಕ್ಕೆ ಸರ್ಕಾರಕ್ಕಿರುವ ತೊಂದರೆಗಳೇನು?<br>ಸದರಿ ಯೋಜನೆಯನ್ನು ಮುಂದುವರಿಸಲು ಸರ್ಕಾರದ ಕ್ರಮವೇನು? | 2020–21ನೇ ಸಾಲಿಗೆ ಕೃಷಿ ಭಾಗ್ಯ ಯೋಜನೆಯನ್ನು ಮುಂದುವರೆಸಲಾಗಿದೆ. ಇದಕ್ಕಾಗಿ ರೂ.40.00 ಕೋಟಿ ಅನುದಾನ ಮೀಸಲಿರಿಸಲಾಗಿದೆ. ಸದರಿ ಅನುದಾನವನ್ನು ಕಳೆದ ಸಾಲಿನಲ್ಲಿ ಯೋಜನೆಯ ಮಾರ್ಗಸೂಚಿಗಳನ್ವಯ ಈಗಾಗಲೇ ಅನುಷ್ಠಾನ ಮಾಡಿರುವ ಘಟಕಗಳಿಗೆ ಮಾತ್ರ ಬಾಕಿ ಸಹಾಯಧನ ಪಾವತಿಸಲು ನಿಗದಿಯಾಗಿರುತ್ತದೆ. |

AGRI-AGS/13/2021

(ಬಿ.ಸಿ. ಪಾಟೀಲ್)

ಕೃಷಿ ಸಚಿವರು

**ಕರ್ನಾಟಕ ವಿಧಾನಸಭೆ**
**15ನೇ ವಿಧಾನಸಭೆ**
**9ನೇ ಅಧಿವೇಶನ**

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 257 |
| ಮಾನ್ಯ ಸದಸ್ಯರ ಹೆಸರು | : | ಶ್ರೀ. ಮುನಿಯಪ್ಪ ವಿ. (ಶಿಡ್ಲಘಟ್ಟ) |
| ಉತ್ತರಿಸುವ ದಿನಾಂಕ | : | 01-02-2021 |
| ಉತ್ತರಿಸುವ ಸಚಿವರು | : | ಮಾನ್ಯ ಉಪ ಮುಖ್ಯಮಂತ್ರಿಗಳು, (ಲೋಕೋಪಯೋಗಿ ಸಚಿವರು) |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಶಿಡ್ಲಘಟ್ಟ ವಿಧಾನಸಭಾ ಕ್ಷೇತ್ರದ ಜಿಲ್ಲಾ ಪಂಚಾಯತಿ ರಸ್ತೆಗಳನ್ನು ಲೋಕೋಪಯೋಗಿ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; ಹಾಗಿದ್ದಲ್ಲಿ ಈ ಕ್ಷೇತ್ರದ ಯಾವ ಯಾವ ರಸ್ತೆಗಳು ಮೇಲ್ದರ್ಜೆಗೇರಿಸುವ ರಸ್ತೆಗಳಾಗಿರುತ್ತವೆ (ವಿವರ ನೀಡುವುದು) | ಸರ್ಕಾರದ ಆದೇಶ ಸಂಖ್ಯೆ: ಲೋಇ ಇ-85/3 ಇಎಪಿ 2020, ಬೆಂಗಳೂರು ದಿನಾಂಕ 01.09.2020 ರನ್ವಯ ಶಿಡ್ಲಘಟ್ಟ ವಿಧಾನಸಭಾ ಕ್ಷೇತ್ರದ ಕೆಳಕಂಡ 3 ಜಿಲ್ಲಾ ಪಂಚಾಯತಿ ರಸ್ತೆಗಳನ್ನು ಲೋಕೋಪಯೋಗಿ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸಲಾಗಿದೆ: |

| ಕ್ರ. ಸಂ. | ರಸ್ತೆಯ ಹೆಸರು | ರಸ್ತೆಯ ಉದ್ದ ಕಿ.ಮೀ. |
|---|---|---|
| 1 | ಡಿ.ಟಿ. ರಸ್ತೆಯಿಂದ ಪೆರೇಸಂದ್ರ ಸಾದಲಿ ರಸ್ತೆ ಸೇರುವ ಇ.ತಿಮ್ಮಸಂದ್ರ, ಎಸ್.ವೆಂಕಟಾಪುರ, ನೇರಳೆಮರದ ಹಳ್ಳಿ, ಪುಸಗನದೊಡ್ಡಿ, ಬಿ.ಬಿ.ರಸ್ತೆ (ಎಸ್.ಹೆಚ್-5), ಇರ್ಗಪ್ಪನಹಳ್ಳಿ, ಗಾಡಿಮಿಂಚನಹಳ್ಳಿ, ಯರ್ರ್ನಗೇನಹಳ್ಳಿ, ಎಸ್,ಗುಂಡ್ಲಹಳ್ಳಿ, ಎಸ್.ದೇವಗಾನ ಹಳ್ಳಿ ಮಾರ್ಗದರಸ್ತೆ (ಸರಪಳಿ 0.00 ಕಿ.ಮೀ. ನಿಂದ 19.50 ಕಿ.ಮೀ ವರೆಗೆ) | 17.50 |
| 2 | ಚಿಕ್ಕಬಳ್ಳಾಪುರ ಗಡಿಯಿಂದ ಬಿ.ಬಿ.ರಸ್ತೆ ಸೇರುವ ಮದ್ದೆಗರಹಳ್ಳಿ, ದೊಡ್ಡ ತೇಕಹಳ್ಳಿ, ಟಿ.ಪೆದ್ದನಹಳ್ಳಿ, ಚೌಡರೆಡ್ಡಿ ಹಳ್ಳಿ, ದಡಮಘಟ್ಟ ಮತ್ತುಗೊರ್ಲ ಗುಮ್ನಹಳ್ಳಿ ಮಾರ್ಗದರಸ್ತೆ (ಸರಪಳಿ 0.00 ಕಿ.ಮೀ. ನಿಂದ 13.60 ಕಿ.ಮೀ. ವರೆಗೆ) | 13.50 |
| 3 | ಮಂಡಿಕಲ್‌ನಿಂದ ಶಿಡ್ಲಘಟ್ಟ ದಿಬ್ಬೂರ ಹಳ್ಳಿ ರಸ್ತೆವರೆಗೆ ಅಮಗರಹಳ್ಳಿ ಮಾರ್ಗದರಸ್ತೆ (ಸರಪಳಿ: 24.20 ಕಿ.ಮೀ ನಿಂದ 27.20 ಕಿ.ಮೀ) | 3.00 |

| | | |
|---|---|---|
| ಆ) | ಈ ರಸ್ತೆಗಳನ್ನು ಒಂದು ಬಾರಿ ಅಭಿವೃದ್ಧಿ ಯೋಜನೆಗಳಿಗೆ ಸೇರಿಸಲಾಗಿದೆಯೇ; ಅನುದಾನ ಯಾವಾಗ ಬಿಡುಗಡೆ ಮಾಡಲಾಗುತ್ತದೆಯೇ (ವಿವರ ನೀಡುವುದು); | ಯಾವುದೇ ಪ್ರಸ್ತಾವನೆ ಇರುವುದಿಲ್ಲ. |
| ಇ) | 2020–21ನೇ ಸಾಲಿನಲ್ಲಿ ಈ ಕ್ಷೇತ್ರಕ್ಕೆ ಲೋಕೋಪಯೋಗಿ ರಸ್ತೆಗಳಿಗೆ ಇದುವರೆವಿಗೂ ಅನುದಾನ ಬಿಡುಗಡೆ ಮಾಡದೇ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಅನುದಾನದ ಲಭ್ಯತೆಗನುಗುಣವಾಗಿ ಕ್ರಮ ಕೈಗೊಳ್ಳಲಾಗುವುದು. |
| ಈ) | ಹಾಗಿದ್ದಲ್ಲಿ, ಈ ಕ್ಷೇತ್ರದ ಅಭಿವೃದ್ಧಿ ಕಾಮಗಾರಿಗಳಿಗೆ ಯಾವಾಗ ಅನುದಾನ ಬಿಡುಗಡೆ ಮಾಡಲಾಗುವುದು? | |

ಸಂಖ್ಯೆ. ಲೋಇ E-33 ಇಎಪಿ 2021

(ಗೋವಿಂದ ಎಂ. ಕಾರಜೋಳ)
ಮಾನ್ಯ ಉಪ ಮುಖ್ಯಮಂತ್ರಿಗಳು,
ಲೋಕೋಪಯೋಗಿ ಇಲಾಖೆ

# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 261 |
| ಸದಸ್ಯರ ಹೆಸರು | **ಶ್ರೀ ಈಶ್ವರ್ ಖಂಡ್ರೆ (ಭಾಲ್ಕಿ)** |
| ಉತ್ತರಿಸುವ ದಿನಾಂಕ: | 01-02-2021 |
| ಉತ್ತರಿಸುವವರು | ಹಿಂದೂ ಧಾರ್ಮಿಕ ಮತ್ತು ಧರ್ಮಾದಾಯ ದತ್ತಿ ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು. |

| ಪ್ರಶ್ನೆ | ಉತ್ತರ |
|---|---|
| ಬೀದರ್ ಜಿಲ್ಲೆಯಲ್ಲಿ ಮುಜರಾಯಿ ಇಲಾಖೆ ವ್ಯಾಪ್ತಿಯಲ್ಲಿ ಇರುವ ದೇವಸ್ಥಾನಗಳು ಯಾವುವು: ಉಪ ವಿಭಾಗಾಧಿಕಾರಿಯವರ ವ್ಯಾಪ್ತಿಗೆ ಒಳಪಡುವ ದೇವಸ್ಥಾನಗಳು ಯಾವುವು (ಸಂಪೂರ್ಣ ವಿವರ ಒದಗಿಸುವುದು) | ಬೀದರ್ ಜಿಲ್ಲೆಯಲ್ಲಿ ಒಟ್ಟು 530 ಮುಜರಾಯಿ ಇಲಾಖೆ ಒಳಪಡುವ ದೇವಾಲಯಗಳಿವೆ. ಇವುಗಳಲ್ಲಿ ಪ್ರವರ್ಗ 'ಸಿ' ಶ್ರೇಣಿಯ ದೇವಾಲಯಗಳು ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಕಾಯ್ದೆ 1997 ನಿಯಮಾವಳಿ 2002ರ ನಿಯಮ 3 (2) ರನ್ವಯ 'ಸಿ' ವರ್ಗದ ದೇವಾಲಯಗಳಿಗೆ ಸಹಾಯಕ ಆಯುಕ್ತರು ನೇಮಿಸಲಾದ ಸಕ್ಷಮ ಪ್ರಾಧಿಕಾರಿಗಳಾಗಿರುತ್ತಾರೆ. ವ್ಯವಸ್ಥಾಪನ ಸಮಿತಿ ಅವದಿ ಮುಗಿದು ಹೊಸ ವ್ಯವಸ್ಥಾಪನ ಸಮಿತಿ ನೇಮಕವಾಗುವವರೆಗೆ ಜಿಲ್ಲೆಯ ಜಿಲ್ಲಾಧಿಕಾರಿಗಳು, ಧಾರ್ಮಿಕ ದತ್ತಿ ಆಯುಕ್ತರ ಅಥವಾ ಸರ್ಕಾರದ ಆದೇಶದಂತೆ ಉಪ ವಿಭಾಗಾಧಿಕಾರಿಗಳನ್ನು ಅಂತಹ (ಪ್ರವರ್ಗ 'ಎ' ಮತ್ತು 'ಬಿ') ದೇವಾಲಯಗಳಿಗೆ ಆಡಳಿತಾಧಿಕಾರಿಯಾಗಿ ನೇಮಿಸಲಾಗುತ್ತದೆ. |
| ಕಳೆದ ಮೂರು ವರ್ಷಗಳಲ್ಲಿ ಈ ದೇವಸ್ಥಾನಗಳ ಅಭಿವೃದ್ಧಿಗೆ ಹಾಗೂ ಮೂಲಭೂತ ಸೌಕರ್ಯಗಳಿಗೆ (ಕುಡಿಯುವ ನೀರು ಸೇರಿದಂತೆ) ಮಂಜೂರು ಮಾಡಲಾಗಿರುವ ಹಾಗೂ ಬಿಡುಗಡೆಯಾದ ಅನುದಾನವೆಷ್ಟು : | ಕಳೆದ ಮೂರು ವರ್ಷಗಳಲ್ಲಿ ಈ ದೇವಸ್ಥಾನಗಳ ಅಭಿವೃದ್ಧಿಗೆ ಹಾಗೂ ಮೂಲಭೂತ ಸೌಕರ್ಯಗಳಿಗೆ (ಕುಡಿಯುವ ನೀರು ಸೇರಿದಂತೆ) ಒಟ್ಟು ರೂ.**62.07**ಲಕ್ಷಗಳ ಅನುದಾನವನ್ನು ಮಂಜೂರು ಮಾಡಲಾಗಿರುತ್ತದೆ. |
| ಈ ದೇವಸ್ಥಾನಗಳ ಬ್ಯಾಂಕ್ ಖಾತೆಗಳಲ್ಲಿ ಸಂಗ್ರಹವಾಗಿರುವ ಮೊತ್ತವೆಷ್ಟು: (ದೇವಸ್ಥಾನವಾರು ವಿವರ ಒದಗಿಸುವುದು) | ಈ ದೇವಸ್ಥಾನಗಳ ಬ್ಯಾಂಕ್ ಖಾತೆಗಳಲ್ಲಿ ಸಂಗ್ರಹವಾಗಿರುವ ಮೊತ್ತದ ವಿವರ ಮತ್ತು ದೇವಸ್ಥಾನವಾರು ವಿವರವನ್ನು **ಅನುಬಂಧ**ದಲ್ಲಿ ಒದಗಿಸಿದೆ.<br>ಪ್ರವರ್ಗ 'ಸಿ' ವರ್ಗದ ಬಹುತೇಕ ದೇವಾಲಯಗಳಲ್ಲಿ ಸ್ವಂತ ವಾರ್ಷಿಕ ಆದಾಯವು ಇರದೆ ಸರ್ಕಾರದಿಂದ ಒದಗಿಸುವ ವರ್ಷಾಸನ ಮತ್ತು ತಸ್ತೀಕ್ ಭತ್ಯೆ/ಅನುದಾನದಿಂದ ಪೂಜಾ ಕೈಂಕರ್ಯಗಳನ್ನು ನಿರ್ವಹಿಸಲಾಗುತ್ತಿದೆ. |

| | |
|---|---|
| ಕಳೆದ ಮೂರು ವರ್ಷಗಳಲ್ಲಿ ಉಪ ವಿಭಾಗಾಧಿಕಾರಿಯ ವ್ಯಾಪ್ತಿಯಲ್ಲಿರುವ ದೇವಸ್ಥಾನಗಳಿಂದ ದೊರೆಯುವ ವಾರ್ಷಿಕ ಆದಾಯವೆಷ್ಟು : ಈ ದೇವಾಲಯಗಳ ಜೀರ್ಣೋದ್ಧಾರ ಹಾಗೂ ಮೂಲ ಸೌಕರ್ಯಗಳಿಗೆ ಮಾಡಿರುವ ವೆಚ್ಚವೆಷ್ಟು: | ಉಪ ವಿಭಾಗಾಧಿಕಾರಿಯ ವ್ಯಾಪ್ತಿಯಲ್ಲಿ ಬರುವ ದೇವಾಲಯಗಳು ಪ್ರವರ್ಗ 'ಸಿ' ಶ್ರೇಣಿಯ ದೇವಾಲಯಗಳಾಗಿರುವುದರಿಂದ ಯಾವುದೇ ಆದಾಯ ಇರುವುದಿಲ್ಲ. ಈ ದೇವಾಲಯಗಳಿಗೆ ವಾರ್ಷಿಕ ವರ್ಷಾಸನ ತಸ್ತೀಕ್ ಹೊರತು ಪಡಿಸಿ ಬೇರೆ ಆದಾಯವಿರುವುದಿಲ್ಲ. |
| ಬೀದರ್ ಜಿಲ್ಲೆಯ ಹಲವು ಮುಜರಾಯಿ ದೇವಸ್ಥಾನಗಳಲ್ಲಿ ಮೂಲಭೂತ ಸೌಕರ್ಯ ಇಲ್ಲದೇ ಇರುವುದರಿಂದ ಭಕ್ತಾಧಿಗಳಿಗೆ ತೊಂದರೆ ಉಂಟಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: ಬಂದಿದ್ದಲ್ಲಿ, ಮೂಲಭೂತ ಸೌಕರ್ಯಗಳನ್ನು ಒದಗಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು? | ಬೀದರ್ ಜಿಲ್ಲೆಯ 'ಎ' ಮತ್ತು 'ಬಿ' ದೇವಾಲಯಗಳಲ್ಲಿ ಮೂಲಭೂತ ಸೌಕರ್ಯಗಳನ್ನು ಒದಗಿಸಲಾಗಿರುತ್ತದೆ.<br>ಉಳಿದ 'ಸಿ' ವರ್ಗದ ದೇವಾಲಯಗಳಿಗೆ ಭಕ್ತಾದಿಗಳು ಭೇಟಿ ನೀಡುವ ಸಂಖ್ಯೆ ಕಡಿಮೆ ಇರುತ್ತದೆ ಮತ್ತು ಈ ದೇವಾಲಯಗಳಿಗೆ ವಾರ್ಷಿಕ ತಸ್ತೀಕ್ ಹೊರತು ಪಡಿಸಿ ಬೇರೆ ಆದಾಯವಿರುವುದಿಲ್ಲ.<br>ಪ್ರವರ್ಗ 'ಸಿ' ದೇವಾಲಯಗಳಲ್ಲಿ ಭಕ್ತಾಧಿಗಳಿಗೆ ಮೂಲಸೌಕರ್ಯಗಳನ್ನು ಒದಗಿಸಲು ಆಯವ್ಯಯದ ಲಭ್ಯತೆಗಳಿಗನುಗುಣವಾಗಿ ಅನುದಾನ ಒದಗಿಸಲು ಪರಿಶೀಲಿಸಿ ನಿಯಮಾನುಸಾರ ಕ್ರಮ ವಹಿಸಲಾಗುತ್ತಿದೆ. |

(ಸಂಖ್ಯೆ:ಕಂಇ 18 ಮುಸಪ್ರ 2021)

(ಕೋಟಾ ಶ್ರೀನಿವಾಸ ಪೂಜಾರಿ)
ಹಿಂದೂ ಧಾರ್ಮಿಕ ಮತ್ತು ಧರ್ಮಾದಾಯ ದತ್ತಿ
ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು.

**ಕರ್ನಾಟಕ ವಿಧಾನ ಸಭೆ**

| | | |
|---|---|---|
| ಮಾನ್ಯ ಸದಸ್ಯರ ಹೆಸರು | : | ಶ್ರೀ ಉಮಾನಾಥ ಎ. ಕೋಟ್ಯಾನ್ (ಮೂಡಬಿದ್ರೆ) |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | **263** |
| ಉತ್ತರಿಸಬೇಕಾದ ದಿನಾಂಕ | : | 01.02.2021 |
| ಉತ್ತರಿಸಬೇಕಾದ ಸಚಿವರು | : | ವಸತಿ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ರಾಜ್ಯದಲ್ಲಿ ಕೊಳೆಗೇರಿಗಳ ಅಭಿವೃದ್ಧಿ ಮತ್ತು ಅಲ್ಲಿನ ನಿವಾಸಿಗರ ಅಭಿವೃದ್ಧಿಗಾಗಿ ಜನಪ್ರಿಯ ಸರ್ಕಾರದ ನೂತನ ಯೋಜನೆಗಳು ಮತ್ತು ಅವುಗಳ ಅನುಷ್ಠಾನಗಳಾವುವು ; (ವಿವರ ನೀಡುವುದು) | ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿಯಲ್ಲಿ ಕೊಳಗೇರಿ ನಿವಾಸಿಗಳಿಗೆ ರಾಜ್ಯ ಸರ್ಕಾರದ ಡಾ|| ಬಿ.ಆರ್.ಅಂಬೇಡ್ಕರ್ ನಿವಾಸ ವಸತಿ ಯೋಜನೆ ಮತ್ತು ವಾಜಪೇಯಿ ವಸತಿ ಯೋಜನೆಗಳನ್ನು ಸಮನ್ವಯಗೊಳಿಸಿ, ಪ್ರಧಾನ ಮಂತ್ರಿ ಆವಾಸ್ (ನಗರ) ಯೋಜನೆಯನ್ನು ಅನುಷ್ಠಾನಗೊಳಿಸಲಾಗುತ್ತಿದೆ.<br><br>ಸದರಿ ಯೋಜನೆಯಡಿ 2016-17 ನೇ ಸಾಲಿನಲ್ಲಿ ಒಟ್ಟು 83,119 ಮನೆಗಳ ನಿರ್ಮಾಣಕ್ಕೆ ಮಂಜೂರಾತಿ ದೊರಕಿರುತ್ತದೆ. ಈ ಪೈಕಿ 17,816 ಮನೆಗಳು ಪೂರ್ಣಗೊಂಡಿದ್ದು, 34954 ಮನೆಗಳು ವಿವಿಧ ಹಂತಗಳಲ್ಲಿ ಪ್ರಗತಿಯಲ್ಲಿರುತ್ತದೆ. ಉಳಿದ 30,349 ಮನೆಗಳು ಪ್ರಾರಂಭವಾಗಬೇಕಾಗಿದೆ.<br><br>2017-18 ನೇ ಸಾಲಿನಲ್ಲಿ 97,134 ಮನೆಗಳ ನಿರ್ಮಾಣಕ್ಕೆ ಟೆಂಡರ್ ಕರೆಯಲಾಗಿದ್ದು, ಟೆಂಡರ್ ಗಳನ್ನು ಸಕ್ಷಮ ಪ್ರಾಧಿಕಾರದ ಅನುಮೋದನೆಗಾಗಿ ಸಲ್ಲಿಸಲಾಗಿರುತ್ತದೆ. ವಿವರಗಳನ್ನು ಅನುಬಂಧದಲ್ಲಿ ಒದಗಿಸಲಾಗಿದೆ. |
| (ಆ) | ವಿವಿಧ ಅಭಿವೃದ್ಧಿ ಯೋಜನೆಗಳ ಮೂಲಕ ರಾಜ್ಯದಲ್ಲಿ ಎಷ್ಟು ಕೊಳೆಗೇರಿ ವಾಸಿಗರಿಗೆ ಇಲಾಖಾ ಯೋಜನಾನುಷ್ಠಾನವನ್ನು ದೊರಕಿಸಿಕೊಡಲಾಗಿದೆ ; | 2016-17 ನೇ ಸಾಲಿನಲ್ಲಿ ಪ್ರಧಾನ ಮಂತ್ರಿ ಆವಾಸ್ (ನಗರ) ಯೋಜನೆಯಡಿ 514 ಕೊಳಚೆ ಪ್ರದೇಶಗಳಲ್ಲಿ ಒಟ್ಟು 83,119 ಮನೆಗಳ ನಿರ್ಮಾಣವನ್ನು ಅನುಷ್ಠಾನಗೊಳಿಸಲಾಗುತ್ತಿದೆ. |
| (ಇ) | ಕೇವಲ ಮಹಾನಗರ ಸಭೆಗಳು ಹಾಗೂ ನಗರ ಸಭೆಗಳ ಇತಿಮಿತಿಗೆ ಹೆಚ್ಚಿನ ಪ್ರಾಶಸ್ತ್ಯವನ್ನು ಕೊಡುವಂತೆ ಪುರಸಭೆ ಪಟ್ಟಣ ಪಂಚಾಯತ್ ಪ್ರದೇಶಗಳಲ್ಲಿರುವ ಕೊಳೆಗೇರಿ ಪ್ರದೇಶಗಳಿಗೂ ಯೋಜನೆಗಳನ್ನು ತಲುಪಿಸುವ ಸ್ತುತ್ಯ ಕಾರ್ಯಕ್ಕಾಗಿ ಸರ್ಕಾರದ ಕ್ರಮಗಳೇನು ; | ಪುರಸಭೆ, ಪಟ್ಟಣ ಪಂಚಾಯತ್ ಪ್ರದೇಶಗಳಲ್ಲಿರುವ ಕೊಳಗೇರಿ ಪ್ರದೇಶಗಳಿಗೂ ಪ್ರಧಾನ ಮಂತ್ರಿ ಆವಾಸ್ ಯೋಜನೆಯ ಮಾರ್ಗಸೂಚಿಯಂತೆ ಮನೆಗಳನ್ನು ಮಂಜೂರು ಮಾಡಲು ಕೊಳಗೇರಿ ಪ್ರದೇಶಗಳಲ್ಲಿ ಮನೆ ಸಮೀಕ್ಷೆ ಮಾಡಿ, ಬೇಡಿಕೆ ಇದ್ದಲ್ಲಿ ರಾಜ್ಯ ಸರ್ಕಾರ ನಿಗಧಿಪಡಿಸುವ ಗುರಿಗಳಂತೆ ಮನೆಗಳನ್ನು ನಿರ್ಮಾಣ ಮಾಡಲು ಯೋಜನಾ ವರದಿಯನ್ನು ತಯಾರಿಸಿ, ಸಕ್ಷಮ ಪ್ರಾಧಿಕಾರದಿಂದ ಅನುಮೋದನೆ ಪಡೆದು ಕ್ರಮ ವಹಿಸಲಾಗುವುದು. |

| | | |
|---|---|---|
| (ಈ) | ರಾಜ್ಯದಲ್ಲಿರುವ ಪುರಸಭೆ ಮತ್ತು ಪಟ್ಟಣ ಪಂಚಾಯತ್ ಪ್ರದೇಶಗಳಲ್ಲಿ ಗುರುತಿಸಲಾಗಿರುವ ಕೊಳೆಗೇರಿಗಳು ಎಷ್ಟು; ಕೊಳೆಗೇರಿ ಪ್ರದೇಶಗಳ ಸಮಗ್ರ ಅಭಿವೃದ್ಧಿಗಾಗಿ ಸರ್ಕಾರದ ಮುಂದಿರುವ ಪ್ರಸ್ತಾವನೆಗಳು ಯಾವುವು ? | ರಾಜ್ಯದಲ್ಲಿ ಪುರಸಭೆ ವ್ಯಾಪ್ತಿಯಲ್ಲಿ ಒಟ್ಟಾರೆ 394 ಕೊಳಚೆ ಪ್ರದೇಶಗಳು ಹಾಗೂ ಪಟ್ಟಣ ಪಂಚಾಯತ್ ವ್ಯಾಪ್ತಿಯಲ್ಲಿ 132 ಕೊಳಚೆ ಪ್ರದೇಶಗಳು ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದಿ ಮತ್ತು ನಿರ್ಮೂಲನೆ) ಕಾಯಿದೆ 1973 ರಡಿ ಕೊಳಚೆ ಪ್ರದೇಶವೆಂದು ಘೋಷಣೆಯಾಗಿರುತ್ತವೆ.<br><br>ಸದರಿ ಕೊಳಚೆ ಪ್ರದೇಶಗಳನ್ನು ಆಯವ್ಯಯದಲ್ಲಿ ಒದಗಿಸುವ ಅನುದಾನದ ಲಭ್ಯತೆಗೆ ಅನುಗುಣವಾಗಿ ಅಭಿವೃದ್ಧಿ ಪಡಿಸಲಾಗುವುದು |

ಸಂಖ್ಯೆ :ವಇ 13 ಎಸ್ ಬಿಎಂ 2021

(ವಿ. ಸೋಮಣ್ಣ)
ವಸತಿ ಸಚಿವರು

## ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 273
ಸದಸ್ಯರ ಹೆಸರು : ಶ್ರೀ ಮುನಿಯಪ್ಪ ವಿ (ಶಿಡ್ಲಘಟ್ಟ)
ಉತ್ತರಿಸುವ ದಿನಾಂಕ : 01–02–2021
ಉತ್ತರಿಸುವ ಸಚಿವರು : ಕಂದಾಯ ಸಚಿವರು

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಅಕ್ರಮ ಸಕ್ರಮದ 94ಸಿ ಮತ್ತು 94ಸಿಸಿ ಅರ್ಜಿಗಳನ್ನು ಯಾವಾಗ ವಿಲೇವಾರಿ ಮಾಡಲಾಗುತ್ತದೆ; | ಕರ್ನಾಟಕ ಭೂ ಕಂದಾಯ ಕಾಯ್ದೆ, 1964 ರ ಕಲಂ 94ಸಿಸಿ ರಡಿಯಲ್ಲಿ ಅರ್ಜಿ ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಿಂದ ಒಂದು ವರ್ಷದ ಅವಧಿಯೊಳಗಾಗಿ ಅರ್ಜಿಗಳನ್ನು ವಿಲೇವಾರಿ ಮಾಡಲು ಅವಕಾಶವಿದೆ. |
| ಆ) | ಇನ್ನು ಸಾಕಷ್ಟು ಸಂಖ್ಯೆಯಲ್ಲಿ ಅರ್ಜಿಗಳನ್ನು ಸಲ್ಲಿಸಲು ಕಾಲಾವಕಾಶವನ್ನು ನೀಡುವಂತೆ ಸಾರ್ವಜನಿಕರಿಂದ ಬೇಡಿಕೆ ಬಂದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಈ ಸಮಸ್ಯೆಗಳನ್ನು ಬಗೆಹರಿಸಲು ಸರ್ಕಾರ ತೆಗೆದುಕೊಂಡಿರುವ ಕ್ರಮಗಳೇನು; | ಸರ್ಕಾರಿ ಜಮೀನಿನಲ್ಲಿ ಅನಧಿಕೃತವಾಗಿ ನಿರ್ಮಿಸಿರುವ ವಾಸದ ಮನೆಗಳನ್ನು ಸಕ್ರಮಗೊಳಿಸಲು ಕರ್ನಾಟಕ ಭೂ ಕಂದಾಯ ಕಾಯ್ದೆ, 1964 ರ ಕಲಂ 94ಸಿ ಮತ್ತು 94ಸಿಸಿ ರಡಿಯಲ್ಲಿ ಅವಕಾಶ ಕಲ್ಪಿಸಲಾಗಿದ್ದು, ಅರ್ಜಿ ಸಲ್ಲಿಸಲು ದಿನಾಂಕ: 31.03.2019 ರವರೆಗೆ ಅವಕಾಶ ಕಲ್ಪಿಸಲಾಗಿತ್ತು. ಸದರಿ ಅವಧಿಯು ಮುಕ್ತಾಯವಾದ ಹಿನ್ನೆಲೆಯಲ್ಲಿ ಪುನಃ ಅರ್ಜಿ ಸಲ್ಲಿಸಲು ದಿನಾಂಕ: 31.08.2021 ರವರೆಗೆ ಕಾಲಾವಕಾಶ ವಿಸ್ತರಿಸುವ ಬಗ್ಗೆ ಕರಡು ಅಧಿಸೂಚನೆಯನ್ನು ದಿನಾಂಕ: 27.01.2021 ರಂದು ಪ್ರಕಟಿಸಲಾಗಿದೆ. |
| ಇ) | ಬಗರ್‌ಹುಕುಂ ಸಾಗುವಳಿದಾರರಿಗೆ ನಂ.57 ರಂತೆ ಅರ್ಜಿಯನ್ನು ಸಲ್ಲಿಸಿದ್ದು, ಈ ಅರ್ಜಿಗಳನ್ನು ಸಲ್ಲಿಸುವ ಸಂದರ್ಭದಲ್ಲಿ ಚುನಾವಣೆ ಬಂದ ಕಾರಣ ಅರ್ಜಿಗಳನ್ನು ಸಲ್ಲಿಸಲು ಕಾಲಾವಕಾಶ ಇಲ್ಲದೇ ತೊಂದರೆಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಹಾಗಿದ್ದಲ್ಲಿ ಇನ್ನೂ ಕಾಲಾವಕಾಶವನ್ನು ನೀಡಿ ಅರ್ಜಿಗಳನ್ನು ಸಲ್ಲಿಸಲು ಅವಕಾಶ ಮಾಡಿಕೊಡಲು ಸಾರ್ವಜನಿಕರಿಂದ ಬೇಡಿಕೆ ಬಂದಿರುವುದರಿಂದ ಸಮಸ್ಯೆಗಳನ್ನು ಬಗೆಹರಿಸಲು ಸರ್ಕಾರ ತೆಗೆದುಕೊಂಡಿರುವ ಕ್ರಮಗಳೇನು; | ಸರ್ಕಾರಿ ಜಮೀನುಗಳಲ್ಲಿನ ಅನಧಿಕೃತ ಸಾಗುವಳಿಯನ್ನು ಸಕ್ರಮಗೊಳಿಸಲು ನಮೂನೆ 57 ರಲ್ಲಿ ಮತ್ತೊಮ್ಮೆ ಅರ್ಜಿ ಸಲ್ಲಿಸುವ ಬಗ್ಗೆ ಕಾಲಾವಕಾಶ ವಿಸ್ತರಿಸುವ ಬಗ್ಗೆ ಸರ್ಕಾರದ ಹಂತದಲ್ಲಿ ಪರಿಶೀಲನೆಯಲ್ಲಿದೆ. |
| ಈ) | ರೈತರ ಜಮೀನುಗಳ ಪಹಣಿಗಳಲ್ಲಿ (ಪಿ ನಂ) ಪೈಕಿ ನಂಬರ್ ನಮೂದಿಸುತ್ತಿರುವುದರಿಂದ ರೈತರಿಗೆ ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ ಪೈಕಿ ಎಂದು ನಮೂದಿಸಿರುವ ಪಹಣಿಗಳನ್ನು ದುರಸ್ತಿ ಮಾಡಿ ಪಿ ನಂ ತೆಗೆಯಲು ಸರ್ಕಾರಕ್ಕೆ ಇರುವ ತೊಂದರೆಗಳೇನು; | ಸರ್ಕಾರಿ ಜಮೀನುಗಳ ಅಳತೆ ಮತ್ತು ಭೂ ಮಂಜೂರಿಯಾದ ಪೋಡಿ ಕಡತಗಳ ಅಳತೆಗೆ ವಿಶೇಷ ಆಂದೋಲನ ಕಾರ್ಯದಲ್ಲಿ ನಿರ್ವಹಿಸಬೇಕಾದ ಕಾರ್ಯಗಳ ಬಗ್ಗೆ ಮಾನದಂಡಗಳನ್ನು ಆಯುಕ್ತರು, ಭೂಮಾಪನ ಕಂದಾಯ ವ್ಯವಸ್ಥೆ ಹಾಗೂ ಭೂದಾಖಲೆಗಳ ಇಲಾಖೆ ಇವರ ಸುತ್ತೋಲೆ ಸಂಖ್ಯೆ:ತಾಂತ್ರಿಕ ದರಖಾಸ್ತು ಪೋಡಿ ಆಂದೋಲನ 40/2008-09; ದಿನಾಂಕ: 20.10.2008 ರ ಸುತ್ತೋಲೆಯಲ್ಲಿ ತಿಳಿಸಲಾಗಿದ್ದು, ಅದರಂತೆ ಕ್ರಮವಹಿಸಲಾಗುತ್ತಿದೆ. |

| | | |
|---|---|---|
| ಉ) | ಇನ್ನು ದುರಸ್ತಿ (ಪೋಡಿ) ಮಾಡಲು ಎಷ್ಟು ಕಾಲಾವಕಾಶ ಬೇಕಾಗುತ್ತದೆ; ಶಿಡ್ಲಘಟ್ಟ ವಿಧಾನಸಭಾ ಕ್ಷೇತ್ರದಲ್ಲಿ ಪೋಡಿ ಆಗದಿರುವ ಸರ್ವೆ ನಂಬರ್‌ಗಳೆಷ್ಟು; ಪೈಕಿ ನಂ ದುರಸ್ತಿ (ಪೋಡಿ) ಮಾಡಲು ಇರುವ ಮಾನದಂಡಗಳೇನು?<br>(ವಿವರ ನೀಡುವುದು) | ಶಿಡ್ಲಘಟ್ಟ ತಾಲ್ಲೂಕನಲ್ಲಿ ಒಟ್ಟು 9129 ಪೈಕಿ ನಂಬರುಗಳಿರುತ್ತವೆ ಹಾಗೂ ಆಯುಕ್ತರು, ಭೂಮಾಪನ ಕಂದಾಯ ವ್ಯವಸ್ಥೆ ಹಾಗೂ ಭೂದಾಖಲೆಗಳ ಇಲಾಖೆ ಇವರ ಸುತ್ತೋಲೆ ಸಂಖ್ಯೆ:ತಾಂತ್ರಿಕ ದರಖಾಸ್ತು ಪೋಡಿ ಆಂದೋಲನ 40/2008–09; ದಿನಾಂಕ: 20.10.2008 ರ ಸುತ್ತೋಲೆಯಲ್ಲಿ ತಿಳಿಸಲಾಗಿದ್ದು, ಅದರಂತೆ ಕ್ರಮವಹಿಸಲಾಗುತ್ತಿದೆ. |

**ಸಂಖ್ಯೆ: ಆರ್‌ಡಿ 13 ಎಲ್‌ಜಿಕ್ಯೂ 2021**

(ಆರ್. ಅಶೋಕ)
**ಕಂದಾಯ ಸಚಿವರು**

# ಕರ್ನಾಟಕ ವಿಧಾನಸಭೆ

| | | |
|---|---|---|
| 1 | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 292 |
| 2 | ಸದಸ್ಯರ ಹೆಸರು | ಶ್ರೀ ವೆಂಕಟರಾವ್ ನಾಡಗೌಡ (ಸಿಂಧನೂರು) |
| 3 | ಉತ್ತರಿಸಬೇಕಾದ ದಿನಾಂಕ | 01.02.2021 |
| 4 | ಉತ್ತರಿಸುವ ಸಚಿವರು | ಕಂದಾಯ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| | ರೈತರು ಜಮೀನಿನ ಪೋಡಿ ಮತ್ತು ದುರಸ್ತಿ ಮಾಡಿಸುವಲ್ಲಿ ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ |
| ಆ) | ಹಾಗಿದ್ದಲ್ಲಿ, ಇದನ್ನು ಸರಿಪಡಿಸಲು ಸರ್ಕಾರ ತೆಗೆದುಕೊಳ್ಳುತ್ತಿರುವ ಕ್ರಮಗಳೇನು? | **ಪೋಡಿ ಅರ್ಜಿಗಳ ಶೀಘ್ರ ವಿಲೇವಾರಿಗೆ ಸರ್ಕಾರ ಕೈಗೊಂಡ ಕ್ರಮಗಳು**<br>1) ಇಲಾಖೆಯಲ್ಲಿ ಅಳತೆ ಕೋರಿ ಸ್ವೀಕೃತವಾಗುವ ಎಲ್ಲಾ ಅರ್ಜಿ ಗಳನ್ನು ಮೋಜಿಣಿ ತಂತ್ರಾಂಶದ ಮುಖಾಂತರ ಆನ್.ಲೈನ್ ನಲ್ಲಿ ಸ್ವೀಕರಿಸಲಾಗುತ್ತಿದ್ದು, ತಂತ್ರಾಂಶದ ಪ್ರತಿ ಹಂತದಲ್ಲಿಯೂ FIFO (ಸರದಿ ಸಾಲಿನಂತೆ) ಅಳವಡಿಸಲಾಗಿದೆ, ಪ್ರಕರಣವು ಅಳತೆಗೆ ಯೋಗ್ಯ ವಾಗಿದ್ದಲ್ಲಿ FIFO (ಸರದಿ ಸಾಲಿನಂತೆ) ಅಳತೆಗಾಗಿ ಭೂಮಾಪಕರಿಗೆ ತಂತ್ರಾಂಶದ ಮೂಲಕ ಆನ್.ಲೈನ್. ನಲ್ಲಿ ವಿತರಿಸಲಾಗುತ್ತಿದೆ. ಪ್ರಕರಣದಲ್ಲಿ ಅಳತೆಯಾದ ನಂತರ ಭೂಮಾಪಕರು ಆನ್.ಲೈನ್.ನಲ್ಲಿ ಕಡತ ಗಳನ್ನು ಅಪ್‌ಲೋಡ್ ಮಾಡಲು ಹಾಗೂ ಅಪ್ಲೋಡ್ ಮಾಡಿರುವ ಕಡತಗಳ ಪರಿಶೀಲನೆ ಮತ್ತು ಅನುಮೋದನೆ ಯನ್ನು ಸಹ ಆನ್.ಲೈನ್.ನಲ್ಲೇ ನಿರ್ವಹಿಸಲಾಗುತ್ತಿದೆ. ತಂತ್ರಾಂಶದ ಮುಖಾಂತರ, ಪ್ರಕರಣಗಳ ವಿಲೇವಾರಿಯಲ್ಲಿ ಯಾವುದೇ ವಿಳಂಬಕ್ಕೆ ಅವಕಾಶವಿಲ್ಲದಂತೆ ಕ್ರಮವಹಿಸಲಾಗುತ್ತಿದೆ.<br>2) ಕಂದಾಯ ಇಲಾಖೆಯಿಂದ ಪಹಣಿ ತಿದ್ದುಪಡಿ ಕುರಿತು ಕಂದಾಯ ಅದಾಲತ್ ಗಳನ್ನು ನಡೆಸಲಾಗುತ್ತಿದೆ<br>3) ಕಂದಾಯ ಇಲಾಖೆಯ ಅಭಿಲೇಖಾಲಯದ ಎಲ್ಲಾ ಕಡತಗಳನ್ನು ಕ್ಯಾಟ್-ಲಾಗ್ ಮತ್ತು ಇಂಡೆಕ್ಸಿಂಗ್ ಮಾಡಲು ಸರ್ಕಾರದಿಂದ ಸೂಚಿಸಲಾಗಿದೆ.<br>4) ಸರ್ಕಾರದ ಸೂಚನೆಯನ್ವಯ ನಮೂನೆ 1 ರಿಂದ 5 ಅನ್ನು ಭರ್ತಿ ಮಾಡಲು ಅಗತ್ಯ ಸೂಚನೆ ಮತ್ತು ಮಾರ್ಗಸೂಚಿಗಳನ್ನು ನೀಡಲಾಗಿದೆ.<br>5) ವಿಡಿಯೋ ಸಂವಾದ ಮತ್ತು ವಿಭಾಗವಾರು ಅಧಿಕಾರಿ ಗಳ ಸಭೆ ನಡೆಸಿ ಪ್ರಗತಿ ಪರಿಶೀಲನೆ ಮಾಡಿ ಹೆಚ್ಚಿನ ಪ್ರಗತಿ ಸಾಧಿಸಲು ಸೂಕ್ತ ಮಾರ್ಗದರ್ಶನ ಮತ್ತು ಸೂಚನೆ ನೀಡಲಾಗುತ್ತಿದೆ.<br>6) ಹೆಚ್ಚಿನ ಪ್ರಕರಣಗಳು ಬಾಕಿ ಇರುವ ತಾಲ್ಲೂಕುಗಳಿಗೆ ಕಡಿಮೆ ಪ್ರಕರಣಗಳು ಬಾಕಿ ಇರುವ ತಾಲ್ಲೂಕಿನಿಂದ ಭೂಮಾಪಕರನ್ನು ನಿಯೋಜನೆ ಮಾಡಿ ಪ್ರಕರಣಗಳನ್ನು ವಿಲೇಗೊಳಿಸಲು ಕ್ರಮ ಕೈಗೊಳ್ಳಲಾಗುತ್ತಿದೆ. |

| | | |
|---|---|---|
| | | 7) ಸರ್ಕಾರದ ಸೂಚನೆಯಂತೆ 2072 ಪರವಾನಗಿ ಭೂಮಾಪಕರ ಆಯ್ಕೆ ಕುರಿತು ಅಧಿಸೂಚನೆ ಹೊರಡಿಸಿ ಅರ್ಜಿಗಳನ್ನು ಆಹ್ವಾನಿಸಿದ್ದು, ಈಗ ಸಾಮಾಜಿಕ ಅಂತರ ಕಾಯ್ದುಕೊಂಡು ದಿನಾಂಕ 1-2-2020 ಮತ್ತು 2/2/2020 ರಂದು ಪರೀಕ್ಷೆಯನ್ನು ನಡೆಸಿ, ಅರ್ಹ ಅಭ್ಯರ್ಥಿಗಳನ್ನು ಆಯ್ಕೆ ಮಾಡಿ 4 ತಿಂಗಳ ತರಬೇತಿ ನೀಡಿ, ಅಂತಿಮ ಪರೀಕ್ಷೆಯಲ್ಲಿ ಉತ್ತೀರ್ಣರಾದವರಿಗೆ ಪರವಾನಗಿ ನೀಡಿ ರಾಜ್ಯದ ವಿವಿಧ ತಾಲ್ಲೂಕುಗಳಿಗೆ ಕಾರ್ಯ ನಿಯೋಜನೆ ಮಾಡಲಾಗುವುದು. ಇದರಿಂದ ಬಾಕಿ ಪ್ರಕರಣಗಳ ವಿಲೇವಾರಿ ಮಾಡಲು ಸಾಧ್ಯವಾಗುತ್ತದೆ. |

**ಸಂಖ್ಯೆ: ಕಂಇ 11 ಎಸ್‌ಎಸ್‌ಸಿ 2021**

(ಆರ್.ಅಶೋಕ)
ಕಂದಾಯ ಸಚಿವರು

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 293

ಮಾನ್ಯ ವಿಧಾನ ಸಭಾ ಸದಸ್ಯರ ಹೆಸರು : ಶ್ರೀ ವೆಂಕಟರಾವ್ ನಾಡಗೌಡ.(ಸಿಂಧನೂರು)

ಉತ್ತರಿಸುವ ದಿನಾಂಕ : 01-02-2021

ಉತ್ತರಿಸುವ ಸಚಿವರು : ಕೃಷಿ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕಳೆದ 3 ವರ್ಷಗಳಲ್ಲಿ ಸಿಂಧನೂರು ತಾಲ್ಲೂಕಿನಲ್ಲಿ SCP/TSP ಹಾಗೂ ಸಾಮಾನ್ಯ ರೈತರಿಗೆ ಕೃಷಿ ಉಪಕರಣಗಳ ಖರೀದಿಗೆ ನೀಡಿರುವ ಅನುದಾನ ಎಷ್ಟು; (ವರ್ಷವಾರು ವಿವರ ನೀಡುವುದು) | ಕಳೆದ 3 ವರ್ಷಗಳಲ್ಲಿ ಸಿಂಧನೂರು ತಾಲ್ಲೂಕಿನಲ್ಲಿ SCP/TSP ಹಾಗೂ ಸಾಮಾನ್ಯ ರೈತರಿಗೆ ಕೃಷಿ ಉಪಕರಣಗಳ ಖರೀದಿಗೆ ನೀಡಿರುವ ಅನುದಾನದ ವಿವರ ಕೆಳಕಂಡಂತಿರುತ್ತದೆ: |

(ರೂ.ಲಕ್ಷಗಳಲ್ಲಿ)

| ಘಟಕ | 2017-18 | 2018-19 | 2019-20 | ಒಟ್ಟು |
|---|---|---|---|---|
| SCP | 135.44 | 77.68 | 95.08 | 308.20 |
| TSP | 187.94 | 51.76 | 137.45 | 377.15 |
| ಸಾಮಾನ್ಯ | 197.46 | 328.37 | 252.88 | 778.71 |
| **ಒಟ್ಟು** | **520.84** | **457.81** | **485.40** | **1464.05** |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಆ) | ಪ್ರಸ್ತುತ ವರ್ಷ ನೀಡಿರುವ ಅನುದಾನ ಎಷ್ಟು; | ಪ್ರಸ್ತುತ ವರ್ಷ ಸಿಂಧನೂರು ತಾಲ್ಲೂಕಿನಲ್ಲಿ SCP/TSP ಹಾಗೂ ಸಾಮಾನ್ಯ ರೈತರಿಗೆ ಕೃಷಿ ಉಪಕರಣಗಳ ಖರೀದಿಗೆ ಎರಡನೇ ತ್ರೈಮಾಸಿಕದ ಅಂತ್ಯದವರೆಗೆ ನೀಡಿರುವ ಅನುದಾನದ ವಿವರ ಕೆಳಕಂಡಂತಿರುತ್ತದೆ: |

(ರೂ.ಲಕ್ಷಗಳಲ್ಲಿ)

| ಘಟಕ | 2020-21 |
|---|---|
| SCP | 36.31 |
| TSP | 59.50 |
| ಸಾಮಾನ್ಯ | 181.54 |
| **ಒಟ್ಟು** | **277.35** |

| | | |
|---|---|---|
| ಇ) | ಕಡಿಮೆ ಪ್ರಮಾಣದಲ್ಲಿ ಅನುದಾನ ನೀಡುತ್ತಿರುವುದರಿಂದ ರೈತರ ಬೇಡಿಕೆಗೆ ಅನುಗುಣವಾಗಿ ಹಂಚಿಕೆ ಮಾಡಲು ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಸರ್ಕಾರದ ಗಮನಕ್ಕೆ ಬಂದಿರುವುದಿಲ್ಲ. |
| ಈ) | ಹಾಗಿದ್ದಲ್ಲಿ, ಅನುದಾನ ಹೆಚ್ಚಿಸಲು ಸರ್ಕಾರ ಕ್ರಮ ಕೈಗೊಳ್ಳಲಾಗುವುದೇ? | ಉದ್ಭವಿಸುವುದಿಲ್ಲ. |

ಸಂಖ್ಯೆ: AGRI-ASC/9/2021

(ಬಿ.ಸಿ. ಪಾಟೀಲ್)
ಕೃಷಿ ಸಚಿವರು

# ಕರ್ನಾಟಕ ವಿಧಾನ ಸಭೆ

| | | |
|---|---|---|
| ಮಾನ್ಯ ಸದಸ್ಯರ ಹೆಸರು | : | ಡಾ॥ ಅಜಯ್ ಧರ್ಮ ಸಿಂಗ್ (ಜೇವರ್ಗಿ) |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | **301** |
| ಉತ್ತರಿಸಬೇಕಾದ ದಿನಾಂಕ | : | 01.02.2021 |
| ಉತ್ತರಿಸಬೇಕಾದ ಸಚಿವರು | : | ವಸತಿ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ಕಲಬುರಗಿ ಜಿಲ್ಲೆಯ ಯಾವ ಪಟ್ಟಣಗಳ ಎಷ್ಟು ಪ್ರದೇಶಗಳನ್ನು ಕೊಳಚೆ ಪ್ರದೇಶಗಳೆಂದು ಗುರುತಿಸಲಾಗಿದೆ ; (ತಾಲ್ಲೂಕುವಾರು ವಿವರ ನೀಡುವುದು) | ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿಯ ಕಾರ್ಯ್ವೆಯಡಿ ಕಲಬುರಗಿ ಜಿಲ್ಲೆಯಲ್ಲಿ ಒಟ್ಟು 147 ಕೊಳಚೆ ಪ್ರದೇಶಗಳನ್ನು ಗುರುತಿಸಿ ಘೋಷಿಸಲಾಗಿದೆ. ತಾಲ್ಲೂಕುವಾರು ಕೊಳಚೆ ಪ್ರದೇಶಗಳ ವಿವರಗಳು ಕೆಳಕಂಡಂತಿದೆ. |

| ಕ್ರ. ಸಂ | ತಾಲ್ಲೂಕು | ಗುರುತಿಸಲಾಗಿರುವ ಕೊಳಚೆ ಪ್ರದೇಶಗಳ ಸಂಖ್ಯೆ |
|---|---|---|
| 1 | ಕಲಬುರಗಿ | 53 |
| 2 | ಆಳಂದ | 14 |
| 3 | ಅಫಜಲ್ಪುರ | 10 |
| 4 | ಜೇವರ್ಗಿ | 9 |
| 5 | ಚಿತ್ತಾಪೂರ | 17 |
| 6 | ಸೇಡಂ | 6 |
| 7 | ಶಹಬಾದ್ | 8 |
| 8 | ವಾಡಿ | 9 |
| 9 | ಚಿಂಚೋಳಿ | 13 |
| 10 | ಕಾಳಗಿ | 8 |
| | ಒಟ್ಟು | 147 |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| (ಆ) | ಸದರಿ ಪ್ರದೇಶಗಳಲ್ಲಿ ವಾಸಿಸುತ್ತಿರುವ ಕುಟುಂಬಗಳೆಷ್ಟು ; (ತಾಲ್ಲೂಕುವಾರು ವಿವರ ನೀಡುವುದು) | ಸದರಿ ಪ್ರದೇಶಗಳಲ್ಲಿ ವಾಸಿಸುತ್ತಿರುವ ಕುಟುಂಬಗಳ ಸಂಖ್ಯೆ ತಾಲ್ಲೂಕುವಾರು ವಿವರಗಳು ಈ ಕೆಳಕಂಡಂತಿದೆ. |

| ಕ್ರ.ಸಂ | ತಾಲ್ಲೂಕು | ಕುಟುಂಬಗಳ ಸಂಖ್ಯೆ |
|---|---|---|
| 1 | ಕಲಬುರಗಿ | 21221 |
| 2 | ಆಳಂದ | 2754 |
| 3 | ಅಫಜಲ್ಪುರ | 1404 |
| 4 | ಜೇವರ್ಗಿ | 2032 |
| 5 | ಚಿತ್ತಾಪೂರ | 3620 |
| 6 | ಸೇಡಂ | 1412 |
| 7 | ಶಹಬಾದ್ | 2137 |
| 8 | ವಾಡಿ | 2718 |
| 9 | ಚಿಂಚೋಳಿ | 2673 |
| 10 | ಕಾಳಗಿ | 1358 |
| | ಒಟ್ಟು | 41329 |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| (ಇ) | ಸದರಿ ಕೊಳಚೆ ಪ್ರದೇಶಗಳಲ್ಲಿ ವಾಸಿಸುತ್ತಿರುವ ಕುಟುಂಬಗಳು ಅಗತ್ಯ ಮೂಲ ಸೌಕರ್ಯಗಳಿಲ್ಲದೆ ತೊಂದರೆಗೊಳಗಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ; | ಬಂದಿದೆ. |
| (ಈ) | ಹಾಗಿದ್ದಲ್ಲಿ, ಅಗತ್ಯ ಸೌಕರ್ಯ ಒದಗಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು ? | ಕಲಬುರ್ಗಿ ಜಿಲ್ಲೆಯ ನಗರ / ಪಟ್ಟಣಗಳಲ್ಲಿ ಕಳೆದ 3 ವರ್ಷಗಳಲ್ಲಿ ಆಯವ್ಯಯದಲ್ಲಿ ಒದಗಿಸಿರುವ ಅನುದಾನಕ್ಕೆ ಅನುಗುಣವಾಗಿ ಕೈಗೊಂಡಿರುವ ಅಗತ್ಯ ಮೂಲಭೂತ ಸೌಕರ್ಯಗಳ ವಿವರಗಳು ಕೆಳಕಂಡಂತಿದೆ. (ರೂ.ಲಕ್ಷಗಳಲ್ಲಿ) |

| ವರ್ಷ | ಕಾಮಗಾರಿಗಳ ಸಂಖ್ಯೆ | ಒದಗಿಸಿರುವ ಅನುದಾನದ ವಿವರ | ಷರಾ |
|---|---|---|---|
| 2018-19 | 9 | 270.00 | ಕಾಮಗಾರಿಗಳೂ ಪೂರ್ಣಗೊಂಡಿದೆ. |
| 2019-20 | 10 | 365.00 | ಕಾಮಗಾರಿಗಳು ಪ್ರಗತಿಯಲ್ಲಿದೆ. |
| 2020-21 | 10 | 340.00 | ಟೆಂಡರ್ ಕರೆದು ಕಾಮಗಾರಿ ಪ್ರಾರಂಭಿಸಬೇಕಾಗಿದೆ. |

ಸಂಖ್ಯೆ :ವಇ 16 ಎಸ್‌ಬಿಎಂ 2021

(ವಿ. ಸೋಮಣ್ಣ)
ವಸತಿ ಸಚಿವರು



# ಕರ್ನಾಟಕ ವಿಧಾನ ಸಭೆ

| | |
|---|---|
| ಮಾನ್ಯ ಸದಸ್ಯರ ಹೆಸರು | ಶ್ರೀ ಶ್ರೀನಿವಾಸ್. ಎಂ. (ಮಂಡ್ಯ) |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 307 |
| ಉತ್ತರಿಸಬೇಕಾದ ದಿನಾಂಕ | 01.02.2021 |
| ಉತ್ತರಿಸುವ ಸಚಿವರು | ವಸತಿ ಸಚಿವರು |

| ಅನು ಕ್ರಮ | ಪ್ರಶ್ನೆ | ಉತ್ತರ |
|---|---|---|
| ಅ | ಮಂಡ್ಯ ನಗರದ ಹಾಲಹಳ್ಳಿ ಸ್ಲಂನಲ್ಲಿರುವ 712 ಕುಟುಂಬಗಳಿಗೆ ಮನೆಗಳು ಮಂಜೂರಾಗಿದ್ದು, ಕಾಮಗಾರಿ ಕುಂಠಿತಗೊಂಡಿರುವದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಆ | ಬಂದಿದ್ದಲ್ಲಿ, ಸರ್ಕಾರ ತೆಗೆದುಕೊಂಡಿರುವ ಕ್ರಮಗಳೇನು; | ಮಂಡ್ಯ ನಗರದ ಸ್ಲಂ ನಿವಾಸಿಗಳಿಗೆ ಮಂಜೂರಾಗಿರುವ ಮನೆಗಳ ಕಾಮಗಾರಿಗಳಿಗೆ ಸಂಬಂಧಿಸಿದಂತೆ ವಿವರಗಳು ಕೆಳಕಂಡಂತಿದೆ:-<br><br>(1) ಕೇಂದ್ರ ಸರ್ಕಾರದ ರಾಜೀವ್ ಆವಾಸ್ ಯೋಜನೆ (RAY) ಯಡಿ ಮಂಡ್ಯ ನಗರದ ಹಾಲಹಳ್ಳಿ ಸರ್ವೆ ನಂ. 14 ಮತ್ತು 16 ರಲ್ಲಿ, ತಮಿಳು ಕಾಲೋನಿ, ಕಾಳಿಕಾಂಬ ದೇವಸ್ಥಾನದ ಹಿಂಭಾಗ, ಮಂಡ್ಯ ಟ್ಯಾಂಕ್‌ಬೆಡ್ ಎಂಬ ಕೊಳಗೇರಿಗಳಲ್ಲಿ ಮೂಲಭೂತ ಸೌಲಭ್ಯಗಳೊಂದಿಗೆ ಜಿ+3 ಮಾದರಿಯ ಒಟ್ಟು 1,335 ಮನೆಗಳನ್ನು (In-situ and Relocation) Fast Track Technology ಅಳವಡಿಸಿಕೊಂಡು ರೂ. 6499.27 ಲಕ್ಷಗಳ ಅಂದಾಜು ವೆಚ್ಚದಲ್ಲಿ ನಿರ್ಮಾಣ ಮಾಡಲು ಸರ್ಕಾರದ ಆದೇಶ ಸಂಖ್ಯೆ: ವಅಇ 27 ಸಿಎಸ್‌ಎಸ್ 2014, ದಿನಾಂಕ: 20.02.2014 ರಲ್ಲಿ ಆಡಳಿತಾತ್ಮಕ ಅನುಮೋದನೆಯನ್ನು ನೀಡಲಾಗಿದೆ. ಅದರಂತೆ ಕಾಮಗಾರಿಯನ್ನು ಕೈಗೊಳ್ಳಲು ದಿನಾಂಕ: 21.12.2014 ರಂದು ಟೆಂಡರ್ ಆಧಾರದ ಮೇಲೆ M/s. Gowri Infra Engineers Pvt. Ltd., ಬೆಂಗಳೂರು ಇವರಿಗೆ ಕಾರ್ಯಾದೇಶ ನೀಡಲಾಗಿರುತ್ತದೆ.<br><br>(2) ಸದರಿ ಹಾಲಹಳ್ಳಿ ಸರ್ವೆ ನಂ. 14 ಮತ್ತು 16 ರಲ್ಲಿನ ಶಿಥಿಲಗೊಂಡಿದ್ದ 712 HUDCO ಮನೆಗಳ ನಿವಾಸಿಗಳನ್ನು ತೆರವುಗೊಳಿಸುವ ಸಮಯದಲ್ಲಿ ನಿವಾಸಿಗಳು ಜಿ+3 ಮಾದರಿಯ ಮನೆಗಳಿಗೆ ಪ್ರತಿರೋಧ ವ್ಯಕ್ತಪಡಿಸಿದ ಕಾರಣ, ಅವರುಗಳ ಒಪ್ಪಿಗೆಯಂತೆ ಈ ಪ್ರದೇಶದಲ್ಲಿ ಜಿ+1 ಮತ್ತು ಜಿ+2 ಮಾದರಿಯಲ್ಲಿಯೇ ಮನೆಗಳನ್ನು ನಿರ್ಮಿಸಲು ಸಲ್ಲಿಸಲಾದ ಪ್ರಸ್ತಾವನೆಗೆ ದಿನಾಂಕ: 26.05.2016 ರಂದು ಸರ್ಕಾರದ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ನಡೆದ ರಾಜ್ಯ ಮಟ್ಟದ ಅನುಮೋದನಾ ಮತ್ತು ಮೇಲ್ವಿಚಾರಣಾ ಸಮಿತಿ (ಎಸ್.ಎಲ್.ಎಸ್.ಎಂ.ಸಿ.) ಯು ತನ್ನ 2ನೇ ಸಭೆಯಲ್ಲಿ ಜಿ+2 ಮಾದರಿಯ 300 ಮನೆಗಳು ಮತ್ತು |

| | | |
|---|---|---|
| | | ಜಿ+1 ಮಾದರಿಯ 422 ಮನೆಗಳು ಸೇರಿದಂತೆ ಒಟ್ಟು 722 ಮನೆಗಳ ನಿರ್ಮಾಣಕ್ಕಾಗಿ ಅನುಮೋದನೆಯನ್ನು ನೀಡಿರುತ್ತದೆ.<br><br>(3) ಅದರಂತೆ ಗುತ್ತಿಗೆದಾರರು ಜಿ+1 ಮಾದರಿಯ 422 ಮನೆಗಳನ್ನು ಪೂರ್ಣಗೊಳಿಸಿದ್ದು, ಜಿ+2 ಮಾದರಿಯ 300 ಮನೆಗಳ ಪೈಕಿ 210 ಮನೆಗಳು ಪೂರ್ಣಗೊಂಡಿದ್ದು, ಉಳಿದ 90 ಮನೆಗಳನ್ನು ಜಿ+2 ಮಾದರಿಯ ಬದಲಾಗಿ ಜಿ+1 ಮಾದರಿಯಲ್ಲಿಯೇ ನಿರ್ಮಿಸಬೇಕೆಂದು ಒತ್ತಾಯಿಸಲಾಗಿತ್ತು. ಆದ್ದರಿಂದ, ಬಾಕಿ ಇರುವ 90 ಮನೆಗಳನ್ನು ಜಿ+2 ಮಾದರಿಯ ಬದಲಾಗಿ ಜಿ+1 ಮಾದರಿಯಲ್ಲಿ ಪ್ರತ್ಯೇಕ ಮನೆಗಳನ್ನಾಗಿ ನಿರ್ಮಾಣ ಮಾಡಲು ಆರ್ಥಿಕ ವ್ಯತ್ಯಯ, 90 ಜಿ+1 ಮಾದರಿಯ ಪ್ರತ್ಯೇಕ ಮನೆಗಳಿಗೆ ಹೊಸ ಲೇಔಟ್ ಮಂಜೂರಾತಿ ಬಾಕಿ ಹಾಗೂ ತಮಿಳು ಕಾಲೋನಿಯ ನಿವಾಸಿಗಳು ಸರ್ವೆ ಕಾರ್ಯ ಮಾಡಲು ಅಡ್ಡಿಪಡಿಸುತ್ತಿದ್ದು ಹಾಗೂ ಬಹುತೇಕ ನಿವಾಸಿಗಳು ತಾತ್ಕಾಲಿಕ ಶೆಡ್ ಗಳಲ್ಲಿ ವಾಸವಿದ್ದು, ನಿಖರವಾದ ಮಾಹಿತಿ ಪಡೆದು ಫಲಾನುಭವಿಗಳ ಪಟ್ಟಿಯನ್ನು ತಯಾರಿಸಲು ಕ್ರಮ ವಹಿಸಲಾಗುತ್ತಿದೆ. |
| ಇ | ಯಾವ ಕಾಲಮಿತಿಯೊಳಗೆ ಕಾಮಗಾರಿಗಳನ್ನು ಪೂರ್ಣಗೊಳಿಸಿ, ಹೊಸ ಮನೆಗಳನ್ನು ನೀಡಲಾಗುವುದು? | ಹಾಲಹಳ್ಳಿ, ಕೊಳಚೆ ಪ್ರದೇಶದಲ್ಲಿ 722 ಮನೆಗಳ ಪೈಕಿ 422 ಜಿ+1 ಮಾದರಿಯ ಮನೆಗಳು ಪೂರ್ಣಗೊಂಡಿದ್ದು, ಜಿ+2 ಮಾದರಿಯ 300 ಮನೆಗಳಲ್ಲಿ ಮೊದಲನೇ ಅಂತಸ್ತಿನವರೆಗೆ 210 ಜಿ+1 ಮನೆಗಳು ಪೂರ್ಣಗೊಂಡಿದ್ದು, 2ನೇ ಅಂತಸ್ತಿನ 90 ಮನೆಗಳ ನಿರ್ಮಾಣ ಕಾಮಗಾರಿ ಮುಂದುವರೆಸಲು ಸ್ಥಳೀಯ ನಿವಾಸಿಗಳು ಅವಕಾಶ ನೀಡುತ್ತಿಲ್ಲ. ಆದ್ದರಿಂದ, ಫಲಾನುಭವಿಗಳು ತಮ್ಮ ಪಾಲಿನ ವಂತಿಕೆ ಪಾವತಿಸುವ ಸಂಬಂಧ ಜಿಲ್ಲಾಧಿಕಾರಿಗಳ ಮಟ್ಟದಲ್ಲಿ ದಿನಾಂಕ: 06.08.2020 ಮತ್ತು 25.09.2020 ರಂದು ಸಭೆಗಳನ್ನು ನಡೆಸಿ, ಅವರ ಮನವೊಲಿಸುವ ಕಾರ್ಯ ಕೈಗೊಳ್ಳಲಾಗಿರುತ್ತದೆ.<br><br>ಪ್ರಸ್ತುತ ಮೂಲಭೂತ ಸೌಕರ್ಯಗಳಾದ ವಿದ್ಯುತ್, ನೀರು, ಒಳಚರಂಡಿ ಕಾಮಗಾರಿಗಳು ಪ್ರಗತಿಯಲ್ಲಿದ್ದು, ಫಲಾನುಭವಿಗಳ ಪಟ್ಟಿಗೆ ಜಿಲ್ಲಾ ಸಮನ್ವಯ ಸಮಿತಿಯಲ್ಲಿ ಅನುಮೋದನೆಯಾಗಿದ್ದು, ಫಲಾನುಭವಿಗಳ ವಂತಿಕೆ ಮೊತ್ತ ಪಾವತಿಸಲು ತಿಳುವಳಿಕೆ ಪತ್ರವನ್ನು ನೀಡಲಾಗಿದ್ದು, ಹಣದ ಲಭ್ಯತೆಗೊಳಪಟ್ಟು 6 ತಿಂಗಳಲ್ಲಿ ಕಾಮಗಾರಿ ಪೂರ್ಣಗೊಳಿಸಿ ಫಲಾನುಭವಿ ವಂತಿಕೆ ಪಾವತಿಸುವ ಅನುಮೋದಿತ ಫಲಾನುಭವಿಗಳಿಗೆ ಮನೆಗಳನ್ನು ಹಂಚಿಕೆ ಮಾಡಲು ಕ್ರಮ ವಹಿಸಲಾಗುವುದು. |

[ಸಂಖ್ಯೆ: ವಇ 20 ಹೆಚ್‌ಎಫ್‌ಎ 2021]

(ವಿ. ಸೋಮಣ್ಣ)
ವಸತಿ ಸಚಿವರು.

# ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 309 |
| ಸದಸ್ಯರ ಹೆಸರು | : | ಶ್ರೀ ಬಂಡೆಪ್ಪ ಖಾಶೆಂಪುರ್ (ಬೀದರ್ ದಕ್ಷಿಣ) |
| ಉತ್ತರಿಸುವ ದಿನಾಂಕ | : | 01.02.2021. |
| ಉತ್ತರಿಸುವ ಸಚಿವರು | : | ಉಪಮುಖ್ಯಮಂತ್ರಿ<br>ಲೋಕೋಪಯೋಗಿ ಇಲಾಖೆ |

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರಗಳು |
|---|---|---|
| ಅ) | ಬೀದರ್ ದಕ್ಷಿಣ ಕ್ಷೇತ್ರದಲ್ಲಿ ಕಳೆದ ವರ್ಷ ಪ್ರವಾಹದಿಂದ ಹಾನಿಗೊಳಗಾದ ರಸ್ತೆಗಳು ಯಾವುವು ಹಾಗೂ ಎಷ್ಟು ಕಿ.ಮೀ. ರಸ್ತೆ ಹಾನಿಯಾಗಿದೆ; | ರಾಷ್ಟ್ರೀಯ ಹೆದ್ದಾರಿ ವಲಯಕ್ಕೆ ಸಂಬಂಧಿಸಿದಂತೆ, ಬೀದರ್ ದಕ್ಷಿಣ ಕ್ಷೇತ್ರದಲ್ಲಿ ಕಳೆದ ವರ್ಷ ಪ್ರವಾಹದಿಂದ ಬೀದರ್-ಹುಮನಾಬಾದ ರಾಷ್ಟ್ರೀಯ ಹೆದ್ದಾರಿ-50ರ ಆಣದೂರ ಗ್ರಾಮದ ಹತ್ತಿರ 0.45 ಕಿ.ಮೀ ಉದ್ದದ ರಸ್ತೆಯು ಹಾನಿಗೊಳಗಾಗಿರುತ್ತದೆ.<br>ಈಶಾನ್ಯ ವಲಯದ ಲೋಕೋಪಯೋಗಿ ಇಲಾಖೆಯ ವ್ಯಾಪ್ತಿಯಲ್ಲಿನ ಬೀದರ್ (ದಕ್ಷಿಣ) ಕ್ಷೇತ್ರದಲ್ಲಿ 2019-20 ರಲ್ಲಿ ಯಾವುದೇ ರಸ್ತೆಗಳು ಪ್ರವಾಹದಿಂದ ಹಾನಿಯಾಗಿಲ್ಲ.<br>2020-21 ರಲ್ಲಿ ಬೀದರ್ (ದಕ್ಷಿಣ) ಕ್ಷೇತ್ರದಲ್ಲಿ ಈ ಕೆಳಕಂಡ ರಸ್ತೆಗಳು ಪ್ರವಾಹದಿಂದ ಹಾನಿಯಾಗಿವೆ.<br>1) ಎನ್.ಹೆಚ್-9 ರ ಕಿ.ಮೀ. 412.20 ರಿಂದ 415.20 (ಮೀನಕೇರಾ ಕ್ರಾಸ್‌ದಿಂದ ನೂರ್ ಫಂಕ್ಷನ್ ಹಾಲ್) ಮನ್ನಾಎಖೆಳ್ಳಿ ಗ್ರಾಮ ವ್ಯಾಪ್ತಿ ರಸ್ತೆ. (ಜಿಮುರ) — 3.00 ಕಿ.ಮೀ.<br>2) ಚಿಟಗುಪ್ಪ-ಬೇಮಳಖೇಡಾ ರಸ್ತೆಯ ಕಿ.ಮೀ. 0.00 ರಿಂದ 28.00 ರವರೆಗೆ ಆಯ್ದ ಭಾಗಗಳು. (ಜಿಮುರ) — 3.00 ಕಿ.ಮೀ.<br>3) ಚಾಂಗ್ಲೆರ್ ದಿಂದ ಮುತ್ತಂಗಿ ರಸ್ತೆ ಕಿ.ಮೀ. 0.00 ರಿಂದ 7.50 ರವರೆಗೆ ಆಯ್ದ ಭಾಗಗಳು. (ಜಿಮುರ) — 1.50 ಕಿ.ಮೀ.<br>4) ಕಮಠಾಣಾ-ಹಾಲಳ್ಳಿ ವಾಯಾ ಬಾವಗಿ ರಸ್ತೆ ಕಿ.ಮೀ. 10.10 ರಿಂದ 10.50 ರವರೆಗೆ. (ಜಿಮುರ) — 0.40 ಕಿ.ಮೀ.<br>5) ಮನ್ನಾಎಖೆಳ್ಳಿ-ಹೆಣಿರಂಜೋಳ್ ರಸ್ತೆ ಕಿ.ಮೀ. 4.30 ಮತ್ತು 5.00 ರಲ್ಲಿನ ಅಡ್ಡಮೋರಿಗಳು. (ಜಿಮುರ) — 2 ಸಂಖ್ಯೆ |
| ಆ) | ಪ್ರವಾಹದಿಂದ ಹಾನಿಯಾದ ರಸ್ತೆಗಳನ್ನು ಸರಿಪಡಿಸಲು ಕೈಗೊಂಡ ಕ್ರಮಗಳೇನು ಹಾಗೂ ಸದರಿ ರಸ್ತೆಗಳನ್ನು ಸರಿಪಡಿಸಲು ಮಂಜೂರು ಮಾಡಲಾದ ಅನುದಾನವೆಷ್ಟು; | ಸದರಿ ರಾಷ್ಟ್ರೀಯ ಹೆದ್ದಾರಿ-50ರ ರಸ್ತೆಯನ್ನು ಸರಿಪಡಿಸಲು ಕೇಂದ್ರ ಸರ್ಕಾರದ ಪ್ರವಾಹ ಹಾನಿ ದುರಸ್ತಿ ಯೋಜನೆ ಅಡಿಯಲ್ಲಿ ರೂ.45.00 ಲಕ್ಷಗಳನ್ನು ಅನುದಾನವನ್ನು 2019-20ನೇ ಸಾಲಿನಲ್ಲಿ ಮಂಜೂರು ಮಾಡಲಾಗಿದೆ.<br>ಈಶಾನ್ಯ ವಲಯದ ಲೋಕೋಪಯೋಗಿ ಇಲಾಖೆಯ ವ್ಯಾಪ್ತಿಯಲ್ಲಿ ಹಾನಿಗೊಳಗಾದ ರಸ್ತೆಗಳನ್ನು ಸರಿಪಡಿಸಲು ಅನುದಾನ ಬಿಡುಗಡೆಯಾಗಿದ್ದು, ರಸ್ತೆವಾರು ಮಂಜೂರಾದ ಅನುದಾನದ ವಿವರಗಳು ಈ ಕೆಳಗಿನಂತಿವೆ.<br>1) ಎನ್.ಹೆಚ್-9 ರ ಕಿ.ಮೀ. 412.20 ರಿಂದ 415.20 (ಮೀನಕೇರಾ ಕ್ರಾಸ್‌ದಿಂದ ನೂರ್ ಫಂಕ್ಷನ್ ಹಾಲ್) ಮನ್ನಾಎಖೆಳ್ಳಿ ಗ್ರಾಮ ವ್ಯಾಪ್ತಿ ರಸ್ತೆ. (ಜಿಮುರ) — 12.50 ಲಕ್ಷ. |

| | | |
|---|---|---|
| 2) | ಜೆಟಗುಪ್ಪ-ದೇವಮಳಪೇಡಾ ರಸ್ತೆಯ ಕಿ.ಮೀ. 0.00 ರಿಂದ 28.00 ರವರೆಗೆ ಆಯ್ದ ಭಾಗಗಳು. (ಜಿಮುರ) | 11.50 ಲಕ್ಷ. |
| 3) | ಜಾಂಗ್ಲೇರ್ ದಿಂದ ಮುತ್ತಂಗಿ ರಸ್ತೆ ಕಿ.ಮೀ. 0.00 ರಿಂದ 7.50 ರವರೆಗೆ ಆಯ್ದ ಭಾಗಗಳು. (ಜಿಮುರ) | 6.00 ಲಕ್ಷ. |
| 4) | ಕಮಠಾಣಾ-ಹಾಲಳ್ಳಿ ವಾಯಾ ಬಾವಗಿ ರಸ್ತೆ ಕಿ.ಮೀ. 10.10 ರಿಂದ 10.50 ರವರೆಗೆ. (ಜಿಮುರ) | 6.50 ಲಕ್ಷ. |
| 5) | ಮನ್ನಾಎಖೆಳ್ಳಿ-ಹಣೇರಂಜೋಳ್ ರಸ್ತೆ ಕಿ.ಮೀ. 4.30 ಮತ್ತು 5.00 ರಲ್ಲಿನ ಅಡ್ಡಮೋರಿಗಳು. (ಜಿಮುರ) | 10.00 ಲಕ್ಷ. |

| | | |
|---|---|---|
| ಇ) | ಸದರಿ ರಸ್ತೆಗಳನ್ನು ಸರಿಪಡಿಸಲು ಅವಶ್ಯಕವಿರುವ ಅನುದಾನವನ್ನು ಯಾವಾಗ ಬಿಡುಗಡೆ ಮಾಡಲಾಗುವುದು: | ರಾಷ್ಟ್ರೀಯ ಹೆದ್ದಾರಿ-50ರ ದುರಸ್ತಿ ಸಲುವಾಗಿ ಮಂಜೂರಾದ ರೂ.45.00 ಲಕ್ಷಗಳ ಅನುದಾನದಲ್ಲಿ, ರೂ.32.00 ಲಕ್ಷಗಳನ್ನು 2019-20ರಲ್ಲಿ ಕೇಂದ್ರ ಸರ್ಕಾರದಿಂದ ಬಿಡುಗಡೆ ಮಾಡಲಾಗಿದೆ. ಇನ್ನೂ ಬಾಕಿ ಇರುವ ರೂ.7.21 ಲಕ್ಷಗಳ ಅನುದಾನವನ್ನು ಬಿಡುಗಡೆ ಮಾಡಲು ಕೇಂದ್ರ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಲಾಗಿದೆ.<br><br>ಈಶಾನ್ಯ ವಲಯದ ಮೇಲ್ಕಂಡ ರಸ್ತೆಗಳನ್ನು ದುರಸ್ತಿಪಡಿಸಲು ಅನುದಾನ ಬಿಡುಗಡೆಯಾಗಿದ್ದು, ಕಾಮಗಾರಿಗಳ ಅನುಷ್ಠಾನಕ್ಕೆ ಗುತ್ತಿಗೆದಾರರನ್ನು ನೇಮಿಸಲಾಗಿದೆ. |
| ಈ) | ಈ ರಸ್ತೆಗಳನ್ನು ಯಾವ ಕಾಲಮಿತಿಯೊಳಗೆ ಸರಿಪಡಿಸಲಾಗುವುದು? | ರಾಷ್ಟ್ರೀಯ ಹೆದ್ದಾರಿ-50ರ ದುರಸ್ತಿ ಕಾಮಗಾರಿಯನ್ನು 2019-20ನೇ ಸಾಲಿನಲ್ಲಿ ಕೈಗೊಂಡು ಪೂರ್ಣಗೊಳಿಸಲಾಗಿದೆ.<br><br>ಈಶಾನ್ಯ ವಲಯದ ಲೋಕೋಪಯೋಗಿ ಇಲಾಖೆಯ ವ್ಯಾಪ್ತಿಯಲ್ಲಿ ಹಾನಿಗೊಳಗಾದ ಮೇಲ್ಕಂಡ ರಸ್ತೆ ಕಾಮಗಾರಿಗಳನ್ನು ಗುತ್ತಿಗೆ ಕರಾರಿನಂತೆ 2-ತಿಂಗಳಲ್ಲಿ ಅಂದರೆ ಮಾರ್ಚ್-2021 ಅಂತ್ಯದೊಳಗೆ ಪೂರ್ಣಗೊಳಿಸಲಾಗುವುದು. |

ಲೋಇ 9 ಸಿಎನ್‌ಹೆಚ್ 2021 (ಇ)

(ಗೋವಿಂದ ಎಂ. ಕಾರಜೋಳ)
ಉಪಮುಖ್ಯಮಂತ್ರಿ
ಲೋಕೋಪಯೋಗಿ ಇಲಾಖೆ.

## ಕರ್ನಾಟಕ ವಿಧಾನ ಸಭೆ

ಮಾನ್ಯ ವಿಧಾನ ಸಭೆ ಸದಸ್ಯರು : ಶ್ರೀ ಬಂಡೆಪ್ಪ ಖಾಶೆಂಪುರ್

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 311

ಉತ್ತರಿಸಬೇಕಾದ ದಿನಾಂಕ : 01.02.2021

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯ ಸರ್ಕಾರದಿಂದ ಕಳೆದ ಮೂರು ವರ್ಷಗಳಲ್ಲಿ ಶೂನ್ಯ ಬಡ್ಡಿದರದಲ್ಲಿ ಸಾಲ ಸೌಲಭ್ಯ ಪಡೆದ ರೈತರುಗಳೆಷ್ಟು? | ರಾಜ್ಯ ಸರ್ಕಾರದಿಂದ ಕಳೆದ ಮೂರು ವರ್ಷಗಳಲ್ಲಿ ಶೂನ್ಯ ಬಡ್ಡಿದರ ಯೋಜನೆಯಲ್ಲಿ ಸಹಕಾರ ಸಂಘಗಳ ಮೂಲಕ ಸಾಲ ಪಡೆದ ರೈತರ ವಿವರ ಈ ಕೆಳಗಿನಂತಿರುತ್ತದೆ. |

| ವರ್ಷ | ರೈತರ ಸಂಖ್ಯೆ |
|---|---|
| 2017-18 | 20,38,142 |
| 2018-19 | 19,71,862 |
| 2019-20 | 22,25,399 |

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| ಆ) | ಹಾಗಿದ್ದಲ್ಲಿ, ಶೂನ್ಯ ಬಡ್ಡಿದರದಲ್ಲಿ ಮೂರು ಲಕ್ಷ ಮತ್ತು ಮೇಲ್ಪಟ್ಟು ಸಾಲವನ್ನು ಪಡೆದ ರೈತರುಗಳೆಷ್ಟು; | ಕಳೆದ ಮೂರು ವರ್ಷಗಳಲ್ಲಿ ಸಹಕಾರ ಸಂಘಗಳ ಮೂಲಕ ಶೂನ್ಯ ಬಡ್ಡಿದರದಲ್ಲಿ ಮೂರು ಲಕ್ಷ ಮತ್ತು ರೂ.3.00 ಲಕ್ಷಕ್ಕಿಂತ ಮೇಲ್ಪಟ್ಟು ಸಾಮಾನ್ಯ ಬಡ್ಡಿ ದರದಲ್ಲಿ ಸಾಲ ಪಡೆದ ರೈತರುಗಳ ವಿವರವನ್ನು ಈ ಕೆಳಗೆ ನೀಡಲಾಗಿದೆ. |

| ವರ್ಷ | ರೂ.3.00 ಲಕ್ಷಗಳ ವರೆಗೆ ಸಾಲ ಪಡೆದ ರೈತರ ಸಂಖ್ಯೆ | ರೂ.3.00 ಲಕ್ಷಕ್ಕಿಂತ ಹೆಚ್ಚಿನ ಸಾಲ ಪಡೆದ ರೈತರ ಸಂಖ್ಯೆ |
|---|---|---|
| 2017-18 | 20,38,142 | 1059 |
| 2018-19 | 19,71,862 | 832 |
| 2019-20 | 22,25,399 | 5103 |

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| ಇ) | ಶೂನ್ಯ ಬಡ್ಡಿದರದಲ್ಲಿ ಸರಾಸರಿ ಎಷ್ಟು ಮೊತ್ತದ ಸಾಲವನ್ನು ರೈತರಿಗೆ ನೀಡಲಾಗಿದೆ; (ಕಳೆದ ಮೂರು ವರ್ಷಗಳ ವಿವರ ನೀಡುವುದು) | ಸಹಕಾರ ಸಂಘಗಳ ಮೂಲಕ ಶೂನ್ಯ ಬಡ್ಡಿದರದಲ್ಲಿ ಕಳೆದ ಮೂರು ವರ್ಷಗಳಲ್ಲಿ ಸರಾಸರಿ ವಿತರಿಸಿದ ಸಾಲದ ವಿವರವನ್ನು ಈ ಕೆಳಗೆ ನಿಡಲಾಗಿದೆ. |

| ವರ್ಷ | ಸಾಲ ಪಡೆದ ಮೊತ್ತ (ರೂ.ಲಕ್ಷಗಳಲ್ಲಿ) | ಸರಾಸರಿ ಸಾಲದ ಮೊತ್ತ (ರೂ.ಲಕ್ಷಗಳಲ್ಲಿ) |
|---|---|---|
| 2017-18 | 10,52,713 | 51,650 |
| 2018-19 | 10,55,075 | 53,506 |
| 2019-20 | 12,904,76 | 57,988 |

| | | |
|---|---|---|
| ಉ) | ಪ್ರಸ್ತುತ ವರ್ಷದಲ್ಲಿ ಹೆಚ್ಚುವರಿಯಾಗಿ ಎಷ್ಟು ರೈತರಿಗೆ ಶೂನ್ಯ ಬಡ್ಡಿದರದಲ್ಲಿ ಸಾಲವನ್ನು ಒದಗಿಸುವ ಪ್ರಸ್ತಾವನೆ ಸರ್ಕಾರದ ಮುಂದಿದೆ; | 2020-21 ನೇ ಸಾಲಿನಲ್ಲಿ ಶೂನ್ಯ ಬಡ್ಡಿ ದರ ಅನ್ವಯವಾಗುವಂತೆ ಬೆಳೆ ಸಾಲ ವಿತರಿಸುವ ಯೋಜನೆಯಲ್ಲಿ ಹೊಸದಾಗಿ 2.25 ಲಕ್ಷ ರೈತರಿಗೆ ಮತ್ತು ಶೂನ್ಯ ಬಡ್ಡಿ ದರದಲ್ಲಿ ಪಶು ಸಂಗೋಪನೆಗೆ ದುಡಿಯುವ ಬಂಡವಾಳ ಸಾಲ ನೀಡುವ ಯೋಜನೆಯಡಿಯಲ್ಲಿ 0.39 ಲಕ್ಷ ರೈತರಿಗೆ ಸಾಲ ವಿತರಿಸುವ ಗುರಿ ಹೊಂದಲಾಗಿದೆ. |
| ಊ) | ಹಾಗಿದ್ದಲ್ಲಿ, ಹೆಚ್ಚುವರಿಯಾಗಿ ಸಾಲ ಸೌಲಭ್ಯ ಪಡೆದ ರೈತರೆಷ್ಟು ಹಾಗೂ ಸಾಲದ ಮೊತ್ತವೆಷ್ಟು? | ಸಹಕಾರ ಸಂಘಗಳ ಮೂಲಕ 2020-21 ನೇ ಸಾಲಿನಲ್ಲಿ ಡಿಸೆಂಬರ್ ಅಂತ್ಯದವರೆಗೆ ಶೂನ್ಯ ಬಡ್ಡಿ ದರ ಅನ್ವಯವಾಗುವಂತೆ ಹೊಸದಾಗಿ 1.29 ಲಕ್ಷ ರೈತರಿಗೆ ರೂ.1440.66 ಕೋಟಿ ಬೆಳೆ ಸಾಲ ಮತ್ತು 0.57 ಲಕ್ಷ ರೈತರಿಗೆ ರೂ.105.64 ಕೋಟಿ ಪಶುಸಂಗೋಪನೆಗೆ ದುಡಿಯುವ ಬಂಡವಾಳ ಸಾಲ ವಿತರಿಸಲಾಗಿದೆ. |

**ಸಂಖ್ಯೆ: ಸಿಒ 23 ಸಿಎಲ್‌ಎಸ್ 2021**

(ಎಸ್.ಟಿ. ಸೋಮಶೇಖರ್)
ಸಹಕಾರ ಸಚಿವರು

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 317
ಸದಸ್ಯರ ಹೆಸರು : ಶ್ರೀ ಖಾದರ್ ಯು.ಟಿ (ಮಂಗಳೂರು)
ಉತ್ತರಿಸಬೇಕಾದ ದಿನಾಂಕ : 01-02-2021
ಉತ್ತರಿಸುವ ಸಚಿವರು : ಮಾನ್ಯ ಕಂದಾಯ ಸಚಿವರು

| ಪ್ರಶ್ನೆ | ಉತ್ತರ |
|---|---|
| (ಅ) 2020-21ನೇ ಸಾಲಿನಲ್ಲಿ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಪ್ರಕೃತಿ ವಿಕೋಪದಿಂದ ಹಾನಿಗೊಳಗಾದ ಮನೆಗಳೆಷ್ಟು? (ತಾಲ್ಲೂಕುವಾರು ಸಂಪೂರ್ಣ ವಿವರ ನೀಡುವುದು) | 2020-21ನೇ ಸಾಲಿನಲ್ಲಿ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಪ್ರಕೃತಿ ವಿಕೋಪದಿಂದ ಹಾನಿಗೊಳಗಾದ ಮನೆಗಳ ವಿವರ ಈ ಕೆಳಗಿನಂತಿದೆ. |

| ತಾಲ್ಲೂಕು | 'ಎ' ವರ್ಗ | 'ಬಿ' ವರ್ಗ | 'ಸಿ' ವರ್ಗ | ಒಟ್ಟು |
|---|---|---|---|---|
| ಬಂಟ್ವಾಳ | 33 | 10 | 33 | 76 |
| ಮಂಗಳೂರು | 145 | 24 | 126 | 295 |
| ಮೂಡಬಿದ್ರೆ | 09 | 0 | 0 | 09 |
| ಸುಳ್ಯ | 03 | 07 | 0 | 10 |
| ಒಟ್ಟು | 190 | 41 | 159 | 390 |

| ಪ್ರಶ್ನೆ | ಉತ್ತರ |
|---|---|
| (ಆ) ಇವುಗಳಲ್ಲಿ ಎಷ್ಟು ಮನೆಗಳ ಪುನರ್ ನಿರ್ಮಾಣ/ದುರಸ್ತಿಗೆ ಪರಿಹಾರ ಒದಗಿಸಲಾಗಿದೆ; (ತಾಲ್ಲೂಕುವಾರು ಸಂಪೂರ್ಣ ವಿವರ ನೀಡುವುದು) | 2020-21ನೇ ಸಾಲಿನ ನೆರೆ ಪ್ರವಾಹದಿಂದ ಹಾನಿಯಾದ ಮನೆಗಳ ದುರಸ್ತಿ ಹಾಗೂ ಪುನರ್ ನಿರ್ಮಾಣಕ್ಕೆ ಸಂಬಂಧಿಸಿದಂತೆ, ಸರ್ಕಾರದಿಂದ ಒಟ್ಟು ರೂ.471.77ಲಕ್ಷ ಬಿಡುಗಡೆಯಾಗಿದ್ದು, ಸದ್ರಿ ಮೊತ್ತವನ್ನು ಸರ್ಕಾರದ ನಿರ್ದೇಶನದ ಮೇರೆಗೆ ರಾಜೀವ್ ಗಾಂಧಿ ವಸತಿ ನಿಗಮ ನಿಯಮಿತ ಕ್ಕೆ ವರ್ಗಾಯಿಸಲಾಗಿರುತ್ತದೆ. ರಾಜೀವ್ ಗಾಂಧಿ ವಸತಿ ನಿಗಮ ನಿಯಮಿತದಿಂದ ನೇರವಾಗಿ ಪ್ರಗತಿಗೆ ಅನುಗುಣವಾಗಿ ಫಲಾನುಭವಿಗಳ ಬ್ಯಾಂಕ್ ಖಾತೆಗೆ ಪರಿಹಾರ ಮೊತ್ತವನ್ನು ವರ್ಗಾಯಿಸಲಾಗುತ್ತದೆ. |

| ತಾಲ್ಲೂಕು/ನ. ಸ್ಥ.ಸಂಸ್ಥೆ | ಪರಿಹಾರ ವಿತರಿಸಲಾದ ಫಲಾನುಭವಿಗಳ ಸಂಖ್ಯೆ | ನೀಡಲಾದ ಪರಿಹಾರದ ಮೊತ್ತ ರೂ.ಲಕ್ಷಗಳಲ್ಲಿ |
|---|---|---|
| ಬಂಟ್ವಾಳ | 12 | 12.00 |
| ಮಂಗಳೂರು | 17 | 16.50 |
| ಸುಳ್ಯ | 3 | 3.00 |
| ಉಳ್ಳಾಲ ಟಿ.ಎಂ.ಸಿ | 1 | 1.00 |
| **ಒಟ್ಟು** | **33** | **32.50** |

| ಪ್ರಶ್ನೆ | ಉತ್ತರ |
|---|---|
| (ಇ) ಪರಿಹಾರ ಒದಗಿಸಲು ಬಾಕಿಯಿದ್ದಲ್ಲಿ, ಯಾವಾಗ | ರಾಜೀವ್ ಗಾಂಧಿ ವಸತಿ ನಿಗಮ ನಿಯಮಿತ ವತಿಯಿಂದ ಮನೆಗಳ ಪ್ರಗತಿಗನುಗುಣವಾಗಿ ಜಿ.ಪಿ.ಎಸ್ ಛಾಯಾಚಿತ್ರ ಆಧಾರಿಸಿ ಪರಿಹಾರವನ್ನು |

| | |
|---|---|
| ಪರಿಹಾರ ಒದಗಿಸಲಾಗುವುದು; | ಕಟ್ಟಡ ನಿರ್ಮಾಣದ ಅನುಸಾರ ಹಂತ ಹಂತವಾಗಿ ಸಂತ್ರಸ್ತ ಫಲಾನುಭವಿಗಳ ಬ್ಯಾಂಕ್ ಖಾತೆಗೆ ವರ್ಗಾವಣೆ ಯಾಗಿರುತ್ತದೆ. |
| (ಈ) ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಎನ್.ಡಿ.ಆರ್.ಎಫ್ ವತಿಯಿಂದ ಎಷ್ಟು ಹಣ ಬಿಡುಗಡೆ ಮಾಡಲಾಗಿದೆ; (ಸಂಪೂರ್ಣ ವಿವರ ನೀಡುವುದು) | ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಎನ್.ಡಿ.ಆರ್.ಎಫ್‌ಅಡಿ ಬೆಳೆಹಾನಿ Input Subsidy ಗಾಗಿ ರೂ.27.88ಲಕ್ಷಗಳನ್ನು ಬಿಡುಗಡೆ ಮಾಡಲಾಗಿರುತ್ತದೆ. |
| (ಉ) ಕರಾವಳಿ ಪ್ರದೇಶದಲ್ಲಿ ಬಹಳಷ್ಟು ರಸ್ತೆಗಳು, ಗುಡ್ಡಗಳು ಕುಸಿದಿದ್ದು, ನೀರು ಹರಿಯುವ ಮನೆಗಳ ಗೋಡೆಗಳು ಕುಸಿದಿದ್ದು, ಇವುಗಳನ್ನು ದುರಸ್ತಿಗೊಳಿಸಲು ಎಷ್ಟು ಅನುದಾನ ಬಿಡುಗಡೆ ಮಾಡಲಾಗಿದೆ? (ಕ್ಷೇತ್ರವಾರು ವಿವರ ನೀಡುವುದು) | ಸರ್ಕಾರದ ಆದೇಶ ಸಂಖ್ಯೆ: ಕಂಇ 578 ಟಿಎನ್ ಆರ್ 2020 ಬೆಂಗಳೂರು, ದಿನಾಂಕ:13.01.2021 ರಂತೆ ದಕ್ಷಿಣ ಕನ್ನಡ ಜಿಲ್ಲೆಗೆ ರೂ.1659.03ಲಕ್ಷ ಮೂಲಭೂತ ಸೌಕರ್ಯಗಳ ತುರ್ತು ದುರಸ್ತಿಗಾಗಿ ಕೆಳಕಂಡ ಇಲಾಖೆಗಳಿಗೆ ಬಿಡುಗಡೆಯಾಗಿದೆ: ರೂ.ಲಕ್ಷಗಳಲ್ಲಿ |

| PWD | PRED | MESCOM | DDPI | ANGAN AWADI | PHC |
|---|---|---|---|---|---|
| 108.00 | 871.12 | 145.22 | 417.20 | 110.51 | 6.98 |

ಕಂಇ 33 ಟಿಎನ್‌ಆರ್ 2021

(ಆರ್. ಅಶೋಕ)
ಕಂದಾಯ ಸಚಿವರು

# ಕರ್ನಾಟಕ ವಿಧಾನ ಸಭೆ

| | | |
|---|---|---|
| ಮಾನ್ಯ ಸದಸ್ಯರ ಹೆಸರು | : | ಡಾ॥ ರಂಗನಾಥ್ ಹೆಚ್.ಡಿ. (ಕುಣಿಗಲ್) |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | **335** |
| ಉತ್ತರಿಸಬೇಕಾದ ದಿನಾಂಕ | : | 01.02.2021 |
| ಉತ್ತರಿಸಬೇಕಾದ ಸಚಿವರು | : | ವಸತಿ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ಕುಣಿಗಲ್ ತಾಲ್ಲೂಕಿಗೆ ವಿವಿಧ ವಸತಿ ಯೋಜನೆಗಳ ಅಡಿ ಮಂಜೂರಾಗಿರುವ ಮನೆಗಳ ಪೈಕಿ ಬಾಕಿ ಇರುವ 444 ಫಲಾನುಭವಿಗಳಿಗೆ ಅನುದಾನ ಬಿಡುಗಡೆಗೆ ಸರ್ಕಾರ ಕೈಗೊಂಡಿರುವ ಕ್ರಮಗಳೇನು ; | ರಾಜ್ಯದ ಗ್ರಾಮೀಣ ಮತ್ತು ನಗರ ಪ್ರದೇಶಗಳಲ್ಲಿ ರಾಜೀವ್ ಗಾಂಧಿ ವಸತಿ ನಿಗಮದಿಂದ ವಿವಿಧ ವಸತಿ ಯೋಜನೆಗಳನ್ನು ಅನುಷ್ಠಾನಗೊಳಸಲಾಗುತ್ತಿದ್ದು, ವಸತಿ ಯೋಜನೆಗಳಡಿ ಫಲಾನುಭವಿಗಳು ನಿರ್ಮಿಸಿ ಕೊಂಡಿರುವ ಮನೆಗಳನ್ನು ನಿಗಮವು "ಇಂದಿರಾ ಮನೆ" ಆ್ಯಪ್ ಮೂಲಕ ಜಿ.ಪಿ.ಎಸ್ ಆಧಾರಿತ ಛಾಯ ಚಿತ್ರಗಳನ್ನು ಪಂಚಾಯತಿ ಅಭಿವೃದ್ಧಿ ಅಧಿಕಾರಿ/ನಗರ ಸ್ಥಳೀಯ ಸಂಸ್ಥೆಗಳ ಅಧಿಕಾರಿಗಳ ದೃಢೀಕರಣದ ಆಧಾರದ ಮೇಲೆ ಫಲಾನುಭವಿಗಳ ಆಧಾರ್ ಆಧಾರಿತ ಬ್ಯಾಂಕ್ ಖಾತೆಗೆ ನೇರವಾಗಿ ಅನುದಾನವನ್ನು ಬಿಡುಗಡೆಗೊಳಿಸಲಾಗುತ್ತಿತ್ತು.<br><br>ರಾಜ್ಯದ ವಿವಿಧ ಕಡೆಗಳಲ್ಲಿ ವಸತಿ ಯೋಜನೆಗಳಡಿ ಆಯ್ಕೆಯಾದ ಫಲಾನುಭವಿಗಳು ಮನೆಗಳನ್ನು ನಿರ್ಮಿಸದೇ ಹಣ ಪಡೆದಿರುವ ಬಗ್ಗೆ ಬಂದಂತಹ ದೂರು ಹಿನ್ನಲೆಯಲ್ಲಿ ಅನುದಾನ ದುರ್ಬಳಕೆಯನ್ನು ತಡೆ ಹಿಡಿಯುವ ಉದ್ದೇಶದಿಂದ ಹಾಗೂ ಸಾರ್ವಜನಿಕ ಹಣ ಪೋಲಾಗದಂತೆ ತಪ್ಪಿಸಲು ಸರ್ಕಾರವು ದಿನಾಂಕ: 16.11.2019 ರಂದು ಆದೇಶ ಹೊರಡಿಸಿ ಈಗಾಗಲೇ ಪ್ರಗತಿಯಲ್ಲಿರುವ ಹಾಗೂ ಅನುದಾನ ಬಿಡುಗಡೆಗೆ ಬೇಡಿಕೆ ಇರುವ ಮನೆಗಳನ್ನು Geo ಆಧಾರಿತ Vigil App ಮೂಲಕ ಪರಿಶೀಲಿಸಲು ಗ್ರಾಮೀಣ ಪ್ರದೇಶದಲ್ಲಿ ಜಿಲ್ಲಾ ಪಂಚಾಯ್ತಿಯ ಮುಖ್ಯ ಕಾರ್ಯ ನಿರ್ವಹಣಾಧಿಕಾರಿಯವರು ಹಾಗೂ ನಗರ ಪ್ರದೇಶದಲ್ಲಿ ಜಿಲ್ಲಾಧಿಕಾರಿಯವರು ಪರಿಶೀಲಿಸಿ, ಅನುದಾನ ಬಿಡುಗಡೆಗೆ ಶಿಫಾರಸ್ಸು ಮಾಡಿರುವ ಮನೆಗಳಿಗೆ ಆಧಾರ್ ಜೋಡಣೆಯಾದ ಫಲಾನುಭವಿಗಳ ಬ್ಯಾಂಕ್ ಖಾತೆಗಳಿಗೆ ನೇರವಾಗಿ ಅನುದಾನ ಬಿಡುಗಡೆ ಮಾಡಲಾಗುತ್ತಿದೆ.<br><br>ಅದರಂತೆ ಕುಣಿಗಲ್ ತಾಲ್ಲೂಕಿಗೆ ವಿವಿಧ ವಸತಿ ಯೋಜನೆಗಳ ಅಡಿ ಮಂಜೂರಾಗಿರುವ ಮನೆಗಳಲ್ಲಿ Vigil App ಮೂಲಕ ಜಿ.ಪಿ.ಎಸ್. ಗೆ ಅಳವಡಸಿ |
| (ಆ) | ಪ್ರಸಕ್ತ ಸಾಲಿನಲ್ಲಿಯೇ ಅನುದಾನವನ್ನು ಬಿಡುಗಡೆ ಮಾಡಲಾಗುವುದೇ ? | |

| | | |
|---|---|---|
| | | ಗ್ರಾಮೀಣ ಪ್ರದೇಶದಲ್ಲಿ ಮುಖ್ಯ ಕಾರ್ಯ ನಿರ್ವಹಣಾಧಿಕಾರಿಯವರ, ಹಾಗೂ ನಗರ ಪ್ರದೇಶದಲ್ಲಿ ಜಿಲ್ಲಾಧಿಕಾರಿಗಳ ಹಂತದಲ್ಲಿ ಪರಿಶೀಲಿಸಿ, ಅನುದಾನ ಬಿಡುಗಡೆಗೆ ಶಿಫಾರಸ್ಸು ಮಾಡಿರುವ ಮನೆಗಳಿಗೆ ರೂ.7.62 ಕೋಟಿಗಳ ಅನುದಾನವನ್ನು ಬಿಡುಗಡೆ ಮಾಡಲಾಗಿದ್ದು, ಉಳಿದ ಮನೆಗಳಿಗೂ ಸಹ ಪ್ರಗತಿಗೆ ಅನುಗುಣವಾಗಿ ಶೀಘ್ರವಾಗಿ ಅನುದಾನ ಬಿಡುಗಡೆಗೆ ಕ್ರಮ ವಹಿಸಲಾಗುತ್ತಿದೆ. |

ಸಂಖ್ಯೆ :ವಇ 36 ಹೆಚ್‌ಎಂ 2021

**(ವಿ. ಸೋಮಣ್ಣ)**
ವಸತಿ ಸಚಿವರು

# ಕರ್ನಾಟಕ ವಿಧಾನ ಸಭೆ

| | | |
|---|---|---|
| ಮಾನ್ಯ ಸದಸ್ಯರ ಹೆಸರು | : | ಶ್ರೀ ಮಂಜುನಾಥ್ ಎ. (ಮಾಗಡಿ) |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | **337** |
| ಉತ್ತರಿಸಬೇಕಾದ ದಿನಾಂಕ | : | 01.02.2021 |
| ಉತ್ತರಿಸಬೇಕಾದ ಸಚಿವರು | : | ವಸತಿ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ಮಾಗಡಿ ವಿಧಾನ ಸಭಾ ಕ್ಷೇತ್ರಕ್ಕೆ ಕಳೆದ ಮೂರು ವರ್ಷಗಳಿಂದ ವಿವಿಧ ವಸತಿ ಯೋಜನೆಗಳಿಗ ಬಿಡುಗಡೆಯಾದ ಹಾಗೂ ಬಾಕಿ ಇರುವ ಅನುದಾನ ಎಷ್ಟು; (ಯೋಜನಾವಾರು ಅನುದಾನದ ವಿವರ ನೀಡುವುದು) | ಮಾಗಡಿ ವಿಧಾನ ಸಭಾ ಕ್ಷೇತ್ರಕ್ಕೆ 2017-18 ರಿಂದ 31.12.2020ವರೆಗೆ ವಿವಿಧ ವಸತಿ ಯೋಜನೆಗಳಡಿ ಒಟ್ಟು ರೂ.54.78 ಕೋಟಿಗಳನ್ನು ಬಿಡುಗಡೆ ಮಾಡಲಾಗಿದ್ದು, ಯೋಜನಾವಾರು ವಿವರಗಳು ಕೆಳಕಂಡಂತಿದೆ. (ರೂ.ಕೋಟಿಗಳಲ್ಲಿ) |
| (ಆ) | ವಿವಿಧ ವಸತಿ ಯೋಜನೆಗಳಿಗೆ ತಡೆಹಿಡಿಯಲಾಗಿರುವ ಅನುದಾನವನ್ನು ಯಾವ ಕಾಲಾವಧಿಯೊಳಗೆ ಬಿಡುಗಡೆ ಮಾಡಲು ಕ್ರಮ ಜರುಗಿಸಲಾಗುವುದು ? | (see table below) ರಾಜ್ಯದಲ್ಲಿ ವಿವಿಧ ವಸತಿ ಯೋಜನೆಗಳಡಿ ನಿರ್ಮಿಸಿಕೊಂಡಿರುವ / ಪ್ರಗತಿಯಲ್ಲಿರುವ ಮನೆಗಳನ್ನು ಇಂದಿರಾ ಮನೆ ಮೊಬೈಲ್ ಆಪ್ ಮೂಲಕ ಮನೆಗಳ ಪ್ರಗತಿಯನ್ನು ಜಿ.ಪಿ.ಎಸ್ ಗೆ ಅಳವಡಿಸಿ ಅರ್ಹಗೊಂಡ ನಂತರ ಸದರಿ ಮನೆಗಳ ಪ್ರಗತಿಯನ್ನು ಮತ್ತೊಮ್ಮೆ Geo ಆಧಾರಿತ Vigil App ಮೂಲಕ ಗ್ರಾಮೀಣ ಪ್ರದೇಶದಲ್ಲಿ ಮುಖ್ಯ ಕಾರ್ಯ ನಿರ್ವಹಣಾಧಿಕಾರಿಯವರು, ಜಿಲ್ಲಾ ಪಂಚಾಯತಿ ಹಾಗೂ ನಗರ ಪ್ರದೇಶದಲ್ಲಿ ಜಿಲ್ಲಾಧಿಕಾರಿಗಳು ಪರಿಶೀಲಿಸಿ, ಅನುದಾನ ಬಿಡುಗಡೆಗೆ ಶಿಫಾರಸ್ಸು ಮಾಡಿರುವ ಮನೆಗಳಿಗೆ ಆಧಾರ್ ಜೋಡಣೆಯಾದ ಫಲಾನುಭವಿಗಳ ಬ್ಯಾಂಕ್ ಖಾತೆಗಳಿಗೆ ನೇರವಾಗಿ ಅನುದಾನ ಬಿಡುಗಡೆ ಮಾಡಲಾಗುತ್ತಿದೆ. |

| ಯೋಜನೆ | ಬಿಡುಗಡೆ ಯಾದ ಅನುದಾನ |
|---|---|
| ಬವಸ ವಸತಿ ಯೋಜನೆ | 36.25 |
| ದೇವರಾಜ್ ಅರಸ್ ವಸತಿ ಯೋಜನೆ (ಗ್ರಾಮೀಣ ಮತ್ತು ನಗರ) | 1.22 |
| ಡಾ\|\|ಬಿ.ಆರ್.ಅಂಬೇಡ್ಕರ್ ವಸತಿ ಯೋಜನೆ (ಗ್ರಾಮೀಣ ಮತ್ತು ನಗರ) | 9.80 |
| ಪ್ರಧಾನ ಮಂತ್ರಿ ಆವಾಸ್ ಯೋಜನೆ (ಗ್ರಾಮೀಣ) | 4.06 |
| ಪ್ರಧಾನ ಮಂತ್ರಿ ಆವಾಸ್ ಯೋಜನೆ (ನಗರ) | 2.19 |
| ವಾಜಪೇಯಿ ವಸತಿ ಯೋಜನೆ | 1.26 |
| **ಒಟ್ಟು** | **54.78** |

| ಕ್ರ. ಸಂ. | ಪ್ರಶ್ನೆ | ಉತ್ತರ |
| --- | --- | --- |
| | | ಮಾಗಡಿ ವಿಧಾನ ಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಪ್ರಸ್ತುತ ವಿಜಿಲ್ ಆಪ್‌ನಲ್ಲಿ ಪರಿಶೀಲಿಸಲಾದ ಮನೆಗಳ ಅರ್ಹ ಫಲಾನುಭವಿಗಳಿಗೆ ಈವರೆಗೂ ರೂ.5.80 ಕೋಟಿಗಳನ್ನು ಬಿಡುಗಡೆ ಮಾಡಲಾಗಿದ್ದು, ಪ್ರಗತಿಗನುಸಾರವಾಗಿ ಶೀಘ್ರವಾಗಿ ಅನುದಾನ ಬಿಡುಗಡೆಗೆ ಕ್ರಮ ವಹಿಸಲಾಗುವುದು. |

ಸಂಖ್ಯೆ :ವಇ 37 ಹೆಚ್‌ಎಎಂ 2021

(ವಿ. ಸೋಮಣ್ಣ)
ವಸತಿ ಸಚಿವರು

# ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 339 |
| ಸದಸ್ಯರ ಹೆಸರು | : | ಶ್ರೀ ಮಂಜುನಾಥ್.ಎ., (ಮಾಗಡಿ) |
| ಉತ್ತರಿಸುವ ದಿನಾಂಕ | : | 01.02.2021. |
| ಉತ್ತರಿಸುವ ಸಚಿವರು | : | ಉಪಮುಖ್ಯಮಂತ್ರಿ<br>ಲೋಕೋಪಯೋಗಿ ಇಲಾಖೆ |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಷ್ಟ್ರೀಯ ಹೆದ್ದಾರಿ-275ಅನ್ನು ನಿರ್ಮಿಸಲು ಬಿಡದಿ ಹಾಗೂ ಕೂಟಗಲ್ ಹೋಬಳಿಗಳ ವ್ಯಾಪ್ತಿಯಲ್ಲಿ ಬರುವ ವಿವಿಧ ಸರ್ವೆ ನಂಬರ್‌ಗಳಲ್ಲಿ ಸ್ವಾಧೀನಪಡಿಸಿಕೊಂಡಿರುವ ಜಮೀನು ಎಷ್ಟು; ಪ್ರತಿ ಎಕರೆಗೆ ನಿಗದಿಪಡಿಸಿರುವ ಪರಿಹಾರವೆಷ್ಟು; ಈ ಪೈಕಿ ಸರ್ಕಾರಿ ಹಾಗೂ ಖಾಸಗಿ ಜಮೀನು ಎಷ್ಟು; ಯಾವ ಮಾನದಂಡದ ಆಧಾರದ ಮೇಲೆ ಪರಿಹಾರ ನಿಗದಿಪಡಿಸಲಾಗಿದೆ; ಕಟ್ಟಡ ಮಾಲೀಕರಿಗೆ ನಿಗದಿಪಡಿಸಲಾದ ಅನುದಾನವೆಷ್ಟು | ರಾಷ್ಟ್ರೀಯ ಹೆದ್ದಾರಿ-275ಅನ್ನು ಅಗಲಗೊಳಿಸಲು ಬಿಡದಿ ಹೋಬಳಿ ಗ್ರಾಮದಿಂದ ಒಟ್ಟು 70.4759 ಹೆಕ್ಟರ್ ಭೂಮಿಯನ್ನು ಸ್ವಾಧೀನಪಡಿಸಿಕೊಂಡಿದ್ದು, ಅದರಲ್ಲಿ 67.5947 ಹೆಕ್ಟರ್ ಖಾಸಗಿ ಭೂಮಿ ಹಾಗೂ 2.8812 ಹೆಕ್ಟರ್ ಸರ್ಕಾರದ ಭೂಮಿಯಾಗಿರುತ್ತದೆ.<br><br>ರಾಷ್ಟ್ರೀಯ . ಹೆದ್ದಾರಿ-275ಅನ್ನು ಅಗಲಗೊಳಿಸಲು ಕೂಟಗಲ್ ಹೋಬಳಿಯಿಂದ ಯಾವುದೇ ಭೂಮಿಯನ್ನು ಸ್ವಾಧೀನಪಡಿಸಿಕೊಂಡಿರುವುದಿಲ್ಲ.<br><br>ರಾಷ್ಟ್ರೀಯ ಹೆದ್ದಾರಿ ಕಾಯ್ದೆ 1956 ಮತ್ತು RFCTLARR ಕಾಯ್ದೆ 2013ರ ಮಾನದಂಡದ ಆಧಾರದ ಮೇಲೆ ಪರಿಹಾರ ನಿಗದಿಪಡಿಸಲಾಗಿದೆ.<br><br>ಭೂಸ್ವಾಧೀನ ಪಡಿಸಿಕೊಂಡ ಕಟ್ಟಡದ ಮಾಲೀಕರಿಗೆ 5 ವರ್ಗದ ಕಟ್ಟಡಗಳ ಪರಿಹಾರಕ್ಕೆ ಕರ್ನಾಟಕ ಸರ್ಕಾರದ ಅಧೀಕ್ಷಕ ಅಭಿಯಂತರರು, ಲೋಕೋಪಯೋಗಿ ವೃತ್ತರವರು ನಿಗಿದಿಪಡಿಸಿರುವ ದರಗಳ ಅನ್ವಯ ರಾಷ್ಟ್ರೀಯ ಹೆದ್ದಾರಿ ಪ್ರಾಧಿಕಾರದವರಿಂದ ಗುರುತಿಸಲ್ಪಟ್ಟಿರುವ ವ್ಯಾಲ್ಯುಯೇಟರ್ ಅವರ ಮೂಲಕ ಹಾನಿಗೊಂಡಿರುವ ಕಟ್ಟಡಗಳ ಭಾಗದ ಸವಕಳಿ ಮತ್ತು ಮರು ನಿರ್ಮಾಣ ವೆಚ್ಚವನ್ನು ಕಡಿತಗೊಳಿಸದೆ ಕಟ್ಟಡಗಳ ವರ್ಗದ ಆಧಾರದ ಮೇಲೆ ಪರಿಹಾರವನ್ನು ನಿಗದಿಪಡಿಸಲಾಗುವುದು. |
| ಆ) | ಹಾಗಿದ್ದಲ್ಲಿ, ಭೂಮಾಲೀಕರಿಗೆ ಬಿಡುಗಡೆ ಮಾಡಲಾಗಿರುವ ಹಾಗೂ ಬಾಕಿ ಇರುವ ಪರಿಹಾರವೆಷ್ಟು; (ಸಂಪೂರ್ಣ ವಿವರ ನೀಡುವುದು) | ರಾಷ್ಟ್ರೀಯ ಹೆದ್ದಾರಿ-275ಅನ್ನು ಅಗಲಗೊಳಿಸಲು ಬಿಡದಿ ಹೋಬಳಿಯಲ್ಲಿ ಭೂಸ್ವಾಧೀನಪಡಿಸಿಕೊಂಡು ಪರಿಹಾರ ನೀಡಬೇಕಾಗಿರುವ ಮೊತ್ತದಲ್ಲಿ ಈಗಾಗಲೇ ರೂ.645.20 ಕೋಟಿ ಮೊತ್ತವನ್ನು ಬಿಡುಗಡೆಗೊಳಿಸಲಾಗಿದ್ದು, ಭೂಸ್ವಾಧೀನಪಡಿಸಿಕೊಂಡು ಪರಿಹಾರ ನೀಡಬೇಕಾಗಿರುವ ಮೊತ್ತದಲ್ಲಿ ರೂ.65.22 ಕೋಟಿ ಮೊತ್ತವನ್ನು ದಾಖಲೆ ಸಲ್ಲಿಸದಿರುವ ಭೂಮಾಲಿಕರಿಗೆ, . ಪತ್ತೆ ಹಚ್ಚಲಾಗದ ಭೂಮಾಲೀಕರಿಗೆ ಹಾಗೂ ವಿವಾದ ಪ್ರಕರಣಗಳಿಗೆ ಈವರೆಗೂ ನೀಡಲಾಗಿರುವುದಿಲ್ಲ. |
| ಇ) | ಬಿಡದಿ ಹೋಬಳಿಯ ವ್ಯಾಪ್ತಿಯಲ್ಲಿ ಬರುವ ಹೆಜ್ಜಾಲ, ಶೇಷಗಿರಿಹಳ್ಳಿ, ಬಿಸೋರಪಾಳ್ಯ ಹಾಗೂ | ಬಿಡದಿ ಹೋಬಳಿಯಲ್ಲಿ ಸುರಕ್ಷಾ ಹಾಗೂ ಸುಗಮ ಸಂಪರ್ಕಕ್ಕಾಗಿ ಈ ಕೆಳಗಿನ ವ್ಯವಸ್ಥೆಗಳನ್ನು ಕೈಗೊಳ್ಳಲಾಗಿದೆ : |

| | | |
|---|---|---|
| | ಇನ್ನಿತರ ಗ್ರಾಮಗಳ ಪಕ್ಕದಲ್ಲಿ ಹಾದು ಹೋಗುತ್ತಿರುವ ರಾಷ್ಟ್ರೀಯ ಹೆದ್ದಾರಿಯ ನಿರ್ಮಾಣದ ರಸ್ತೆಗೆ ಹೊಂದಿಕೊಂಡಂತೆ ಸಂಪರ್ಕ (PASSOVER/UNDER PASS) ರಸ್ತೆಗಳನ್ನು ನಿರ್ಮಿಸದೆ ಇರುವುದರಿಂದ ಗ್ರಾಮಸ್ಥರುಗಳ ಹಾಗೂ ಶಾಲಾ ಕಾಲೇಜು ವಿದ್ಯಾರ್ಥಿಗಳಿಗೆ ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | 1. ಹೆಜ್ಜಾಲ ಗ್ರಾಮದ ಕಿ.ಮೀ.24.805 ವಾಹನಗಳ ಮೇಲ್ಸೇತುವೆ ನಿರ್ಮಿಸುವುದು.<br>2. ಹೆಜ್ಜಾಲ ಗ್ರಾಮದ ಕಿಮೀ.24.11, 24.42 ಹಾಗೂ 25.26 ಕಿಮೀ. ವ್ಯಾಪ್ತಿಯಲ್ಲಿ ಟಿ–ಜಂಕ್ಷನ್ ಅನ್ನು ಅಭಿವೃದ್ಧಿಪಡಿಸಲಾಗುತ್ತಿದೆ.<br>3. ಶೇಷಗಿರಿ/ಐನೋರಪಾಲ್ಯ ಹಳ್ಳಿಯ ಕಿಮೀ.26.330 ರಲ್ಲಿ ಕ್ಯಾಟಲ್ ಅಂಡರ್ ಪಾಸ್ ಹೊಸ ಸುರಂಗ ಮಾರ್ಗ (7ಮೀ.x3.5ಮೀ.) ಅನ್ನು Change of Scope ಅಡಿಯಲ್ಲಿ ಅನುಮೋದಿಸಲಾಗುತ್ತಿದೆ. |
| ಊ) | ಹಾಗಿದ್ದಲ್ಲಿ, ರಾಷ್ಟ್ರೀಯ ಹೆದ್ದಾರಿ–275ಕ್ಕೆ ಹೊಂದಿಕೊಂಡಂತೆ ಸಂಪರ್ಕ ರಸ್ತೆಗಳನ್ನು ನಿರ್ಮಿಸಲು ತೆಗೆದುಕೊಂಡ ಕ್ರಮಗಳೇನು; (ಸಂಪೂರ್ಣ ವಿವರ ನೀಡುವುದು) | 4. ಅಲ್ಲದೇ ಈ ಕೆಳಗಿನ ನಿರ್ಮಾಣಗಳನ್ನು ಕೈಗೊಳ್ಳಲಾಗುವುದು.<br>ಅ) ವಾಹನಗಳ ಮೇಲ್ಸೇತುವೆ – ಕಿಮೀ.24.805, ಕಿಮೀ.27.50, ಕಿಮೀ.33.078<br>ಆ) ವಾಹನಗಳ ಅಡಿ ಸೇತುವೆ– ಕಿಮೀ.29.481, ಕಿಮೀ.31.457, ಕಿಮೀ.34.331 (ಎಡ), ಕಿಮೀ. ಕಿಮೀ.36.940 (ಎಡ) ಕಿಮೀ.38.226<br>ಇ) ಕ್ಯಾಟಲ್ ಅಂಡರ್ ಪಾಸ್– ಕಿಮೀ.26.30, ಕಿಮೀ.38.226 ಕಿಮೀ.32.548 ಕಿಮೀ.32.130, ಕಿಮೀ.34.264 |
| ಋ) | ರಾಷ್ಟ್ರೀಯ ಹೆದ್ದಾರಿ–275 ನಿರ್ಮಾಣ ಕಾಮಗಾರಿಯನ್ನು ಯಾವ ಖಾಸಗಿ ಸಂಸ್ಥೆಯಿಂದ ನಿರ್ವಹಿಸಲಾಗುತ್ತಿದೆ? (ಸಂಪೂರ್ಣ ವಿವರ ನೀಡುವುದು) | ರಾಷ್ಟ್ರೀಯ ಹೆದ್ದಾರಿ–275 ನಿರ್ಮಾಣ ಕಾಮಗಾರಿಯನ್ನು ಮೆ.ದಿಲೀಪ್ ಬಿಲ್ಡ್‌ಕಾನ್ ಬೆಂಗಳೂರು ನಿಡಗಟ್ಟ ಹೈವೇ ಪ್ರೈ. ಲಿ. ಸಂಸ್ಥೆಗೆ ವಹಿಸಲಾಗಿರುತ್ತದೆ. |

ಲೋಇ 15 ಸಿಎನ್‌ಹೆಚ್ 2021 (ಇ)

(ಗೋವಿಂದ ಎಂ. ಕಾರಜೋಳ)
ಉಪಮುಖ್ಯಮಂತ್ರಿ
ಲೋಕೋಪಯೋಗಿ ಇಲಾಖೆ.

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 345
ಸದಸ್ಯರ ಹೆಸರು : ಶ್ರೀ ನರೇಂದ್ರ ಆರ್. (ಹನೂರು)
ಉತ್ತರಿಸುವ ದಿನಾಂಕ : 01-02-2021
ಉತ್ತರಿಸುವ ಸಚಿವರು : ಕಂದಾಯ ಸಚಿವರು

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| (ಅ) | ಹನೂರು ವಿಧಾನ ಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ದರಖಾಸ್ತು ಕಡತಗಳಿಗೆ ನಮೂನೆ-1ರಿಂದ ನಮೂನೆ-5 ರವರೆಗೆ ಭರ್ತಿ ಮಾಡಿರುವ ಪ್ರಕರಣಗಳೆಷ್ಟು; (ವಿವರ ನೀಡುವುದು) | ಹನೂರು ವಿಧಾನ ಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ದರಖಾಸ್ತು ಕಡತಗಳಿಗೆ 03 ಪ್ರಕರಣಗಳಲ್ಲಿ ನಮೂನೆ-1 ರಿಂದ ನಮೂನೆ-5 ರವರೆಗೆ ಭರ್ತಿ ಮಾಡಲಾಗಿದೆ. ಅವುಗಳೆಂದರೆ<br>1. ಮಲೆ ಮಹದೇಶ್ವರ ಬೆಟ್ಟ- ಸ.ನಂ.124<br>2. ಇಕ್ಕಡಹಳ್ಳಿ – ಸ.ನಂ.778<br>3. ಹೂಗ್ಯಂ- ಸ.ನಂ.239 |
| (ಆ) | ನಮೂನೆ-6 ರಿಂದ ನಮೂನೆ-10 ರವರೆಗೆ ಭರ್ತಿ ಮಾಡಿ ಪೋಡಿ ದುರಸ್ತಿ ಮಾಡಿರುವ ಪ್ರಕರಣಗಳೆಷ್ಟು; (ಸಂಪೂರ್ಣ ವಿವರ ನೀಡುವುದು) | ಈ ಕೆಳಕಂಡ 01 ಪ್ರಕರಣದಲ್ಲಿ ನಮೂನೆ-6 ರಿಂದ ನಮೂನೆ-10 ರವರಗೆ ಭರ್ತಿ ಮಾಡಿ ದುರಸ್ತಿ ಮಾಡಲಾಗಿದೆ.<br>"ಇಕ್ಕಡಕಳ್ಳಿ ಗ್ರಾಮದ ರೀಸ.ನಂ. 778" |
| (ಇ) | ಪೋಡಿ ದುರಸ್ತಿಯಾಗದೇ ಸಾರ್ವಜನಿಕರಿಗೆ ಸರ್ವೆ ಕಛೇರಿಗೆ ಅಲೆದಾಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು |
| (ಈ) | ಬಂದಿದ್ದಲ್ಲಿ, ಸರ್ಕಾರ ತೆಗೆದುಕೊಂಡಿರುವ ಕ್ರಮಗಳೇನು? (ವಿವರ ನೀಡುವುದು) | ಪೋಡಿ ದುರಸ್ತಿಯಾಗದಿರುವ ಕುರಿತು ಸಾರ್ವಜನಿಕರು ಅಲೆದಾಡುತ್ತಿರುವುದನ್ನು ತಪ್ಪಿಸಲು ಈ ಕೆಳಕಂಡ ಕ್ರಮಗಳನ್ನು ಕೈಗೊಳ್ಳಲಾಗಿದೆ<br>1) ಇಲಾಖೆಯಲ್ಲಿ ಅಳತೆ ಕೋರಿ ಸ್ವೀಕೃತವಾಗುವ ಎಲ್ಲಾ ಅರ್ಜಿಗಳನ್ನು ಮೋಜಣಿ ತಂತ್ರಾಶದ ಮುಖಾಂತರ ಆನ್‌ಲೈನ್‌ನಲ್ಲಿ ಸ್ವೀಕರಿಸಲಾಗುತ್ತಿದ್ದು ತಂತ್ರಾಶದ ಪ್ರತಿ ಹಂತದಲ್ಲಿಯೂ FIFO (First In First Out - ಸರದಿ ಸಾಲಿನಂತೆ) ಅಳವಡಿಸಲಾಗಿದೆ. ಪ್ರಕರಣವು ಅಳತೆಗೆ ಯೋಗ್ಯವಾಗಿದ್ದಲ್ಲಿ FIFO (First In First Out - ಸರದಿ ಸಾಲಿನಂತೆ) ಅಳತೆಗಾಗಿ ಭೂ ಮಾಪಕರಿಗೆ ತಂತ್ರಾಶದ ಮೂಲಕ ಆನ್‌ಲೈನ್‌ನಲ್ಲಿ ವಿತರಿಸಲಾಗುತ್ತಿದೆ. ಪ್ರಕರಣದಲ್ಲಿ ಅಳತೆಯಾದ ನಂತರ ಭೂ ಮಾಪಕರು ಆನ್‌ಲೈನಿನಲ್ಲಿ ಕಡತಗಳನ್ನು ಅಪ್‌ಲೋಡ್ ಮಾಡಲು ಹಾಗೂ ಅಪ್‌ಲೋಡ್ ಮಾಡಿರುವ ಕಡತಗಳ ಪರಿಶೀಲನೆ ಮತ್ತು ಅನುಮೋದನೆಯನ್ನು ಸಹ ಆನ್‌ಲೈನ್‌ನಲ್ಲೇ ನಿರ್ವಹಿಸಲಾಗುತ್ತಿದೆ. ತಂತ್ರಾಂಶದ ಮುಖಾಂತರ, ಪ್ರಕರಣಗಳ ವಿಲೇವಾರಿಯಲ್ಲಿ ಯಾವುದೇ ವಿಳಂಬಕ್ಕೆ ಅವಕಾಶವಿಲ್ಲದಂತೆ ಕ್ರಮ ವಹಿಸಲಾಗುತ್ತಿದೆ<br>2) ಕಂದಾಯ ಇಲಾಖೆಯಿಂದ ಪಹಣಿ ತಿದ್ದುಪಡಿ ಕುರಿತು ಕಂದಾಯ ಅದಾಲತ್‌ಗಳನ್ನು ನಡೆಸಲಾಗುತ್ತಿದೆ. |

| | | |
|---|---|---|
| | | 3) ಕಂದಾಯ ಇಲಾಖೆಯ ಅಭಿಲೇಖಾಲಯದ ಎಲ್ಲಾ ಕಡತಗಳನ್ನು ಕ್ಯಾಟ್-ಲಾಗ್ ಮತ್ತು ಇಂಡೆಕ್ಸಿಂಗ್ ಮಾಡಲು ಸೂಚಿಸಲಾಗಿದೆ.<br>4) ಮಂಜೂರಿ ಪ್ರಕರಣಗಳಲ್ಲಿ ನಮೂನೆ-1 ರಿಂದ 5ನ್ನು ಭರ್ತಿಮಾಡಲು ಅಗತ್ಯ ಸೂಚನೆ ಮತ್ತು ಮಾರ್ಗಸೂಚಿಗಳನ್ನು ನೀಡಲಾಗಿದೆ.<br>5) ವಿಡಿಯೋ ಸಂವಾದ ಮತ್ತು ವಿಭಾಗಾವಾರು ಅಧಿಕಾರಿಗಳ ಸಭೆ ನಡೆಸಿ ಪ್ರಗತಿ ಪರಿಶೀಲನೆ ಮಾಡಿ ಹೆಚ್ಚಿನ ಪ್ರಗತಿ ಸಾಧಿಸಲು ಸೂಕ್ತ ಮಾರ್ಗದರ್ಶನ ಮತ್ತು ಸೂಚನೆ ನೀಡಲಾಗುತ್ತಿದೆ.<br>6) ಹೆಚ್ಚಿನ ಪ್ರಕರಣಗಳು ಬಾಕಿ ಇರುವ ತಾಲೂಕುಗಳಿಗೆ ಕಡಿಮೆ ಪ್ರಕರಣಗಳು ಬಾಕಿ ಇರುವ ತಾಲೂಕಿನಿಂದ ಭೂ ಮಾಪಕರನ್ನು ನಿಯೋಜನೆ ಮಾಡಿ ಪ್ರಕರಣಗಳನ್ನು ವಿಲೇಗೊಳಿಸಲು ಕ್ರಮ ಕೈಗೊಳ್ಳಲಾಗುತ್ತಿದೆ.<br>7) ಒಟ್ಟು 2072 ಪರವಾನಗಿ ಭೂ ಮಾಪಕರ ಆಯ್ಕೆ ಕುರಿತು ಅರ್ಜಿಗಳನ್ನು ಆಹ್ವಾನಿಸಿದ್ದು, ದಿನಾಂಕ:01.02.2020 ಮತ್ತು 02.02.2020ರಂದು ಪರೀಕ್ಷೆಗಳನ್ನು ನಡೆಸಿ, ಅರ್ಹ ಅಭ್ಯರ್ಥಿಗಳನ್ನು ಆಯ್ಕೆ ಮಾಡಿ 4 ತಿಂಗಳು ತರಬೇತಿ ನೀಡಿ, ಅಂತಿಮ ಪರೀಕ್ಷೆಯಲ್ಲಿ ಉತ್ತೀರ್ಣರಾದವರಿಗೆ ಪರವಾನಗಿ ನೀಡಿ ರಾಜ್ಯದ ವಿವಿಧ ತಾಲೂಕುಗಳಿಗೆ ಕಾರ್ಯ ನಿಯೋಜನೆ ಮಾಡಲಾಗುವುದು.<br>ಇದರಿಂದ ಬಾಕಿಯಿರುವ ಪ್ರಕರಣಗಳ ವಿಲೇವಾರಿ ಮಾಡಲು ಸಾಧ್ಯವಾಗುತ್ತದೆ. |

(ಕಡತ ಸಂಖ್ಯೆ:ಕಂಇ 11 ಎಲ್‌ಜಿಎಂ 2021)

(ಆರ್.ಅಶೋಕ)
ಕಂದಾಯ ಸಚಿವರು

# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 348 |
| ಸದಸ್ಯರ ಹೆಸರು | ಶ್ರೀ ಬಾಲಕೃಷ್ಣ ಸಿ.ಎನ್ (ಶ್ರವಣಬೆಳಗೊಳ) |
| ಉತ್ತರಿಸುವ ದಿನಾಂಕ | 01-02-2021 |
| ಉತ್ತರಿಸುವ ಸಚಿವರು | ಕೃಷಿ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕೃಷಿ ಇಲಾಖೆಗೆ ಎಸ್.ಸಿ.ಪಿ ಮತ್ತು ಟಿ.ಎಸ್.ಪಿ ಯೋಜನೆಯಡಿ ನೀಡುತ್ತಿದ್ದ ಅನುದಾನವನ್ನು ಕಡಿತಗೊಳಿಸಿರುವುದು ಸರ್ಕಾರದ ಗಮನಕ್ಕೆ ಬಂದಿದಯೇ; ಬಂದುದ್ದಲ್ಲಿ, ಕಾರಣಗಳೇನು; | ಕೃಷಿ ಇಲಾಖೆಗೆ ಎಸ್.ಸಿ.ಪಿ ಮತ್ತು ಟಿ.ಎಸ್.ಪಿ ಯೋಜನೆಯಡಿ ನೀಡುತ್ತಿದ್ದ ಅನುದಾನವನ್ನು ಕಡಿತಗೊಳಿಸಿರುವುದಿಲ್ಲ. |
| ಆ) | ರಾಜ್ಯದಲ್ಲಿ ಮುಸುಕಿನ ಜೋಳಕ್ಕೆ ನೀಡುತ್ತಿದ್ದ ಬೆಂಬಲ ಬೆಲೆಯನ್ನು ಕೈ ಬಿಟ್ಟಿರುವುದು ಸರ್ಕಾರದ ಗಮನಕ್ಕೆ ಬಂದಿದಯೇ; ಬಂದಿದ್ದಲ್ಲಿ, ಕಾರಣಗಳೇನು; | ಕೇಂದ್ರ ಸರ್ಕಾರವು 2020-21 ನೇ ಸಾಲಿನಲ್ಲಿ ಎಫ್.ಎ.ಕ್ಯೂ ಗುಣಮಟ್ಟದ ಮುಸುಕಿನ ಜೋಳಕ್ಕೆ ಪ್ರತಿ ಕ್ವಿಂಟಾಲ್ ಗೆ ರೂ.1850=00 ಬೆಂಬಲ ಬೆಲೆಯನ್ನು ನಿಗಧಿಪಡಿಸಿರುತ್ತದೆ.<br>ಕೇಂದ್ರ ಸರ್ಕಾರವು ಬೆಂಬಲ ಬೆಲೆಯಲ್ಲಿ ಖರೀದಿಸಿದ ಮುಸುಕಿನ ಜೋಳವನ್ನು ಆಯಾ ರಾಜ್ಯಗಳಲ್ಲಿ ಪಡಿತರ ವ್ಯವಸ್ಥೆಯಲ್ಲಿ ವಿತರಿಸಬೇಕೆನ್ನುವ ಷರತ್ತು ವಿಧಿಸಿರುತ್ತದೆ.<br>ರಾಜ್ಯದಲ್ಲಿ ಮುಸುಕಿನ ಜೋಳವನ್ನು ಆಹಾರವನ್ನಾಗಿ ಬಳಸಲಾಗುತ್ತಿಲ್ಲವಾದುದರಿಂದ ಮುಸುಕಿನ ಜೋಳವನ್ನು ಸಾರ್ವಜನಿಕ ವಿತರಣಾ ಪದ್ಧತಿಯಡಿ ಪಡಿತರ ಚೀಟಿದಾರರಿಗೆ ವಿತರಣೆ ಮಾಡಲು ಅವಕಾಶವಿರುವುದಿಲ್ಲ. ಆದ್ದರಿಂದ 2014-15ನೇ ಸಾಲಿನಿಂದ ಮುಸುಕಿನ ಜೋಳವನ್ನು ಬೆಂಬಲ ಬೆಲೆಯಲ್ಲಿ ಖರೀದಿಸಲಾಗಿರುವುದಿಲ್ಲ. |

| | | |
|---|---|---|
| ಇ) | ಕೃಷಿ ಒಕ್ಕಣೆ ಮಾಡುವ ಟಾರ್ಪಲ್ಗಳ ಕೊರತೆಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಈ ಬಗ್ಗೆ ಸರ್ಕಾರ ಕೈಗೊಂಡಿರುವ ಕ್ರಮಗಳೇನು? | 2020-21 ನೇ ಸಾಲಿನಲ್ಲಿ ಟಾರ್ಪಲ್‌ಗಳಿಗೆ ಹೆಚ್ಚಿನ ಬೇಡಿಕೆ ಬಂದಿರುತ್ತದೆ. ಜಿಲ್ಲೆಗಳಿಗೆ ನೀಡಲಾಗಿರುವ ವಾರ್ಷಿಕ ಕ್ರಿಯಾ ಯೋಜನೆ/ಗುರಿಯಂತೆ ಸರಬರಾಜು ಮಾಡಲು ಕ್ರಮವಹಿಸಲಾಗಿರುತ್ತದೆ. |

ಸಂಖ್ಯೆ:AGRI-AML/29/2021

(ಬಿ.ಸಿ. ಪಾಟೀಲ್)
ಕೃಷಿ ಸಚಿವರು

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 349
ಸದಸ್ಯರ ಹೆಸರು : ಶ್ರೀ ಯಶವಂತರಾಯಗೌಡ ವಿಠ್ಠಗೌಡ ಪಾಟೀಲ್ (ಇಂಡಿ ವಿಧಾನ ಸಭೆಯಿಂದ ಚುನಾಯಿತರಾದವರು)
ಉತ್ತರಿಸಬೇಕಾದ ದಿನಾಂಕ : 01.02.2021
ಉತ್ತರಿಸುವ ಸಚಿವರು : ಮಾನ್ಯ ಕಂದಾಯ ಸಚಿವರು

| ಕ್ರ. ಸಂ | ಚುಕ್ಕೆ ಗುರುತಿಲ್ಲದ ಪ್ರಶ್ನೆ | ಉತ್ತರ |
|---|---|---|
| ಅ | 2020ರ ಅಕ್ಟೋಬರ್ ಮಾಹೆಯಲ್ಲಿ ಮಹಾರಾಷ್ಟ್ರ ರಾಜ್ಯದಲ್ಲಿ ಸುರಿದ ಅಪಾರ ಮಳೆಯಿಂದ ವಿವಿಧ ಜಲಾಶಯಗಳಿಂದ ಹೆಚ್ಚುವರಿ ನೀರನ್ನು ಭೀಮಾ ನದಿಗೆ ಹರಿಬಿಟ್ಟು ಪರಿಣಾಮ ಪ್ರವಾಹ ಉಂಟಾಗಿ ಅಪಾರ ಪ್ರಮಾಣದ ಬೆಳೆ ನಷ್ಟ, ಮನೆಗಳ ದುರಸ್ತಿ, ಮನೆಗಳು ಕುಸಿತ, ಪ್ರಾಣಹಾನಿ, ರಸ್ತೆಗಳು, ಸೇತುವೆಗಳು, ಶಾಲಾ ಕೊಠಡಿಗಳು ಹಾಗೂ ಸಾರ್ವಜನಿಕ ಆಸ್ತಿಗೆ ನಷ್ಟ ಉಂಟಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ : | ಬಂದಿದೆ |
| ಆ | ಬಂದಿದ್ದಲ್ಲಿ, ಸದರಿ ಇಲಾಖಾವಾರು ನಷ್ಟದ ಪ್ರಮಾಣ ಎಷ್ಟು (ಜಿಲ್ಲಾವಾರು ಹಾಗೂ ತಾಲ್ಲೂಕುವಾರು ವಿವರ ನೀಡುವುದು) ; | ಅನುಬಂಧದಲ್ಲಿ ಒದಗಿಸಿದೆ |
| ಇ | ಸದರಿ ನಷ್ಟದ ಪರಿಹಾರಕ್ಕಾಗಿ ಕೇಂದ್ರ ಹಾಗೂ ರಾಜ್ಯ ಸರ್ಕಾರದಿಂದ ಮಂಜೂರು ಮಾಡಿದ ಅನುದಾನ ಎಷ್ಟು ; | ಎಸ್.ಡಿ.ಆರ್.ಎಫ್ / ಎನ್.ಡಿ.ಆರ್.ಎಫ್ ವತಿಯಿಂದ ಪ್ರವಾಹ ಪರಿಹಾರಕ್ಕಾಗಿ ಜಿಲ್ಲಾವಾರು ಬಿಡುಗಡೆ ಮಾಡಿದ ಅನುದಾನದ ವಿವರ (ರೂ ಕೋಟಿಗಳಲ್ಲಿ) (see table below) |
| ಈ | ಸದರಿ ಅನುದಾನದಲ್ಲಿ ಕೈಗೊಂಡಿರುವ ನಷ್ಟದ ಪರಿಹಾರ ಹಾಗೂ ಕೈಗೊಂಡಿರುವ ಕಾಮಗಾರಿಗಳು ಯಾವುವು; ಮಂಜೂರು ಮಾಡಿದ ಅನುದಾನವೆಷ್ಟು (ಜಿಲ್ಲಾವಾರು ಪ್ರತ್ಯೇಕ ವಿವರ ನೀಡುವುದು) ? | 2020 ನೇ ಸಾಲಿನ ಅಕ್ಟೋಬರ್ – ನವೆಂಬರ್ ಮಾಹೆಯಲ್ಲಿ ಉಂಟಾದ ಪ್ರವಾಹ ಪರಿಹಾರಕ್ಕಾಗಿ ರೂ.1505.69 ಕೋಟಿ ಆರ್ಥಿಕ ನೆರವನ್ನು ಕೋರುತ್ತಾ, ಕೇಂದ್ರ ಸರ್ಕಾರಕ್ಕೆ ಮೆಮೋರೆಂಡಮ್ ಸಲ್ಲಿಸಲಾಗಿದ್ದು, ಕೇಂದ್ರದಿಂದ ಅನುದಾನ ನಿರೀಕ್ಷಿಸಲಾಗಿದೆ. ಕೇಂದ್ರ ಸರ್ಕಾರದ SDRF / NDRF ಮಾರ್ಗಸೂಚಿಯನ್ವಯ ತುರ್ತು ಪರಿಹಾರ ಕಾಮಗಾರಿಗಳನ್ನು ಕೈಗೆತ್ತಿಕೊಳ್ಳಲಾಗುತ್ತಿದೆ. |

| ಜಿಲ್ಲೆ | ತುರ್ತು ಪರಿಹಾರ | ಮನೆ ಹಾನಿ | ಬೆಳೆ ಹಾನಿ | ಮೂಲ ಸೌಕರ್ಯಗಳ ದುರಸ್ತಿ |
|---|---|---|---|---|
| ವಿಜಯಪುರ | 13.66 | 4.67 | 109.46 | 29.61 |
| ಕಲಬುರ್ಗಿ | 29.52 | 3.21 | 104.38 | 28.53 |
| ಯಾದಗಿರಿ | 15.35 | 4.97 | 23.62 | 9.77 |
| ರಾಯಚೂರು | 11.06 | 10.65 | 17.33 | 18.29 |

ಕಂಇ 30 ಟಿಎನ್‌ಆರ್ 2021

(ಆರ್. ಅಶೋಕ)
ಕಂದಾಯ ಸಚಿವರು

<u>ವಿಧಾನ ಸಭೆಯ ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ-349 ಕ್ಕೆ ಅನುಬಂಧ</u>

**ಪ್ರವಾಹದಿಂದ ಹಾನಿಯಾದ ವಿವರ**

| ಕ್ರಮ ಸಂಖ್ಯೆ | ವಿವರ | ವಿಜಯಪುರ ಜಿಲ್ಲೆ | | ಕಲಬುರ್ಗಿ ಜಿಲ್ಲೆ | | ಯಾದಗಿರಿ ಜಿಲ್ಲೆ | | ರಾಯಚೂರು ಜಿಲ್ಲೆ | |
|---|---|---|---|---|---|---|---|---|---|
| | | ನಷ್ಟದ ಪ್ರಮಾಣ | ಅಂದಾಜು ನಷ್ಟ (ರೂ ಕೋಟಿಗಳಲ್ಲಿ) | ನಷ್ಟದ ಪ್ರಮಾಣ | ಅಂದಾಜು ನಷ್ಟ (ರೂ ಕೋಟಿಗಳಲ್ಲಿ) | ನಷ್ಟದ ಪ್ರಮಾಣ | ಅಂದಾಜು ನಷ್ಟ (ರೂ ಕೋಟಿಗಳಲ್ಲಿ) | ನಷ್ಟದ ಪ್ರಮಾಣ | ಅಂದಾಜು ನಷ್ಟ (ರೂ ಕೋಟಿಗಳಲ್ಲಿ) |
| 1 | ರಸ್ತೆ (ಕಿ.ಮೀ) | 2007.84 | 233.84 | 999.87 | 159.79 | 356.80 | 74.19 | 283 | 6.74 |
| 2 | ಸೇತುವೆ (ಸಂಖ್ಯೆ) | 77 | 6 | 212 | 82.87 | 88 | 34.73 | 21 | 2.10 |
| 3 | ಕೆರೆ ಕಟ್ಟೆ (ಸಂಖ್ಯೆ) | 5 | 0.91 | - | - | 9 | 0.28 | - | - |
| 4 | ಸರ್ಕಾರಿ ಕಟ್ಟಡಗಳು (ಸಂಖ್ಯೆ) | 269 | 13.79 | 388 | 30.03 | 9 | 0.68 | 6 | 0.49 |
| 5 | ವಿದ್ಯುತ್ ಪರಿಕರಗಳು (ಅಂದಾಜು ನಷ್ಟ) | - | 3.37 | - | 10.21 | - | 0.50 | - | - |
| 6 | ನೀರಾವರಿ (Schemes) | - | - | 191 | 135.23 | 5 | 0.96 | - | - |
| 7 | ಕುಡಿಯುವ ನೀರು ಸರಬರಾಜು (Schemes) | 55 | 2.30 | 44 | 8.23 | - | - | - | - |
| 8 | ಬೆಳೆ ಹಾನಿ (ಹೆಕ್ಟೇರ್ ಗಳಲ್ಲಿ) | 2,23,343 | 1513.44 | 1,82,352 | 1492.04 | 31,231 | 281.64 | 20,611 | 153.73 |
| 9 | ಮನೆ ಹಾನಿ (ಸಂಖ್ಯೆ) | 2397 | 12.65 | 3180 | 15.9 | 825 | 4.23 | 578 | 3.49 |
| 10 | ಜೀವ ಹಾನಿ (ಸಂಖ್ಯೆ) | 3 | - | 0 | - | 0 | - | 2 | - |

# ಕರ್ನಾಟಕ ವಿಧಾನಸಭೆ

| | | |
|---|---|---|
| 1 | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 603 |
| 2 | ಸದಸ್ಯರ ಹೆಸರು | ಶ್ರೀ ಹೂಲಗೇರಿ ಡಿ.ಎಸ್. (ಲಿಂಗಸುಗೂರು) |
| 3 | ಉತ್ತರಿಸಬೇಕಾದ ದಿನಾಂಕ | 01.02.2021 |
| 4 | ಉತ್ತರಿಸುವ ಸಚಿವರು | ಕಂದಾಯ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಯಚೂರು ಜಿಲ್ಲೆಯ ಲಿಂಗಸಗೂರು ತಾಲ್ಲೂಕಿನ ಮುದಗಲ್ಲ ಪಟ್ಟಣವನ್ನು ನೂತನ ತಾಲ್ಲೂಕು ಕೇಂದ್ರವಾಗಿ ಘೋಷಣೆ ಮಾಡಲು ಸರ್ಕಾರ ತೆಗೆದುಕೊಂಡ ಕ್ರಮಗಳೇನು; | ಲಿಂಗಸೂಗೂರು ತಾಲ್ಲೂಕಿನ ಮುದಗಲ್ಲ ಪಟ್ಟಣವನ್ನು ನೂತನ ತಾಲ್ಲೂಕಾಗಿ ರಚಿಸುವ ಕೋರಿಕೆ ಇದ್ದು, ಜಿಲ್ಲಾಧಿಕಾರಿಗಳಿಂದ ಪ್ರಸ್ತಾವನೆ ಸ್ವೀಕೃತವಾದ ನಂತರ ಪರಿಶೀಲಿಸಲಾಗುವುದು. |
| ಆ) | ಸದರಿ ಜಿಲ್ಲೆಯ ಲಿಂಗಸಗೂರು ಪಟ್ಟಣದಲ್ಲಿ ನೂತನ ಮಿನಿ ವಿಧಾನಸೌಧ ನಿರ್ಮಾಣ ಮಾಡಲು ಸರ್ಕಾರ ತೆಗೆದುಕೊಂಡ ಕ್ರಮಗಳೇನು; | ಲಿಂಗಸೂಗೂರು ತಾಲ್ಲೂಕಿನ ಕರಡಕಲ್ಲ ಗ್ರಾಮದ ಸರ್ಕಾರಿ ಸರ್ವೆ ನಂ.197/3 ರಲ್ಲಿ ಮಿನಿ ವಿಧಾನ ಸೌಧ ಕಟ್ಟಡ ನಿರ್ಮಾಣಕ್ಕೆ ಸ್ಥಳ ಗುರ್ತಿಸಿದ್ದು, ಪ್ರಸ್ತಾವನೆ ಪರಿಶೀಲಿಸಿ ಕ್ರಮ ಕೈಗೊಳ್ಳಲಾಗುವುದು. |
| ಇ) | ಲಿಂಗಸಗೂರು ಪಟ್ಟಣದಲ್ಲಿ ಉಪ ನೋಂದಣಾಧಿಕಾರಿಗಳ ಕಛೇರಿ ಕಟ್ಟಡ ನಿರ್ಮಾಣ ಮಾಡಲು ಸರ್ಕಾರ ತೆಗೆದುಕೊಂಡ ಕ್ರಮ ಗಳೇನು; | ಲಿಂಗಸೂಗೂರು ಉಪ ನೊಂದಣಿ ಕಚೇರಿಗೆ ಕಟ್ಟಡ ನಿರ್ಮಾಣ ಮಾಡಲು ಲಿಂಗಸೂಗೂರು ಪುರಸಭೆ ವ್ಯಾಪ್ತಿಯಲ್ಲಿನ ಹುಲಿಗುಡ್ಡ ಸರ್ವೆ ನಂ.7/3 ರಲ್ಲಿ 0.05 ಗುಂಟೆ ಜಾಗವನ್ನು ಕಾಯ್ದಿರಿಸಿದ್ದು, ಕಟ್ಟಡದ ನೀಲ ನಕ್ಷೆ ಮತ್ತು ಅಂದಾಜು ಪಟ್ಟಿಯೊಂದಿಗೆ ಆಡಳಿತಾತ್ಮಕ ಮಂಜೂರಾತಿ ಕೋರಿ ಜಿಲ್ಲಾಧಿಕಾರಿಗಳಿಂದ ಪ್ರಸ್ತಾವನೆ ಸ್ವೀಕೃತವಾಗಿದ್ದು, ಪರಿಶೀಲನೆಯಲ್ಲಿದೆ. |
| ಈ) | ಲಿಂಗಸಗೂರು ತಾಲ್ಲೂಕಿನಲ್ಲಿ ಕಳೆದ ಮೂರು ವರ್ಷಗಳಲ್ಲಿ ಆರ್.ಆರ್.ಟಿ. ಪ್ರಕರಣಗಳಿಗೆ ಹಾಗೂ ಪಹಣಿ ತಿದ್ದುಪಡಿಗೆ ಬಂದಿರುವ ಅರ್ಜಿಗಳು ಎಷ್ಟು; ಇಲ್ಲಿವರೆಗೂ ವಿಲೇವಾರಿ ಆದ ಹಾಗೂ ಬಾಕಿ ಉಳಿದಿರುವ ಅರ್ಜಿಗಳು ಎಷ್ಟು; ಬಾಕಿ ಉಳಿಯಲು ಕಾರಣಗಳೇನು; (ವಿವರ ನೀಡುವುದು) | ಲಿಂಗಸೂಗೂರು ತಾಲ್ಲೂಕಿನಲ್ಲಿ ಕಳೆದ ಮೂರು ವರ್ಷಗಳಲ್ಲಿ ಒಟ್ಟು 612 ಆರ್.ಆರ್.ಟಿ. ಪ್ರಕರಣ ಗಳು ಸ್ವೀಕೃತಿಯಾಗಿದ್ದು, 393 ಪ್ರಕರಣಗಳು ಅರ್ಜಿ ಗಳು ವಿಲೇವಾರಿಯಾಗಿದ್ದು, 219 ಪ್ರಕರಣಗಳು ಬಾಕಿ ಉಳಿದಿರುತ್ತವೆ. ಆರ್.ಆರ್.ಟಿ. ತಿದ್ದುಪಡಿ ಪ್ರಕರಣಗಳು 1415 ಅರ್ಜಿಗಳು ಸ್ವೀಕೃತವಾಗಿದ್ದು, 727 ಪ್ರಕರಣಗಳು ವಿಲೇವಾರಿಯಾಗಿದ್ದು, 688 ಪ್ರಕರಣಗಳು ಬಾಕಿ ಇರುತ್ತವೆ. ಇತ್ತೀಚೆಗೆ ನಡೆದ ಗ್ರಾಮ ಪಂಚಾಯತಿ ಚುನಾವಣೆ ಕಾರ್ಯದ ಹಿನ್ನೆಲೆಯಲ್ಲಿ ಸದರಿ ಅರ್ಜಿಗಳು ಬಾಕಿ ಉಳಿದಿದ್ದು, ತ್ವರಿತವಾಗಿ ವಿಲೇ ಮಾಡಲಾಗುವುದು. |

| | | |
|---|---|---|
| ಉ) | ಲಿಂಗಸಗೂರು ತಾಲ್ಲೂಕಿನ ಬೆಕ್ಕಹೆಸರೂರ ಗ್ರಾಮದ ಹತ್ತಿರ ಜಿನುಗು ಕೆರೆ ನಿರ್ಮಾಣಕ್ಕಾಗಿ ಭೂಸ್ವಾಧೀನಪಡಿಸಿಕೊಂಡಿರುವ ರೈತರು ಗಳಿಗೆ ಬಾಕಿ ಮೊತ್ತ ಬಿಡುಗಡೆ ಮಾಡಲು ಸರ್ಕಾರ ತೆಗೆದುಕೊಂಡ ಕ್ರಮಗಳೇನು? | ಲಿಂಗಸಗೂರು ತಾಲ್ಲೂಕಿನ ಚಿಕ್ಕಹೆಸರೂರು ಗ್ರಾಮದ ಹತ್ತಿರ ಜಿನುಗು ಕೆರೆ ನಿರ್ಮಾಣಕ್ಕಾಗಿ ಒಟ್ಟು 18ಎಕರೆ-12ಗುಂಟೆ ಜಮೀನು ಸ್ವಾಧೀನ ಪಡಿಸಿಕೊಳ್ಳಲಾಗಿದ್ದು, ಸದರಿ ಭೂಸ್ವಾಧೀನಕ್ಕೆ ಸಂಬಂಧಿಸಿದಂತೆ ಈಗಾಗಲೇ ರೂ:41,37,256=00 ಗಳನ್ನು ಸಹಾಯಕ ಆಯುಕ್ತರು ಹಾಗೂ ಭೂಸ್ವಾಧೀನಾಧಿಕಾರಿಗಳು, ಲಿಂಗಸೂಗೂರು ಇಲ್ಲಿ ಠೇವಣಿ ಮಾಡಲಾಗಿದ್ದು, ಬಾಕಿ ಮೊತ್ತ ರೂ.88,87,710=00ಗಳನ್ನು ಪ್ರಸಕ್ತ ಸಾಲಿಗೆ ಭೂಸ್ವಾಧೀನ ಲೆಕ್ಕ ಶೀರ್ಷಿಕೆ ಅಡಿ ಒದಗಿಸಿರುವ ಅನುದಾನದ ಲಭ್ಯತೆಯನುಸಾರ ಬಿಡುಗಡೆ ಗೊಳಿಸಲು ಕ್ರಮ ವಹಿಸಲಾಗುವುದು. |

**ಸಂಖ್ಯೆ: ಕಂಇ/9/ಎಲ್ಆರ್‌ಡಿ/2021**

(ಆರ್.ಅಶೋಕ)
ಕಂದಾಯ ಸಚಿವರು

# ಕರ್ನಾಟಕ ವಿಧಾನಸಭೆ

ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ: 607
ಸದಸ್ಯರ ಹೆಸರು ಶ್ರೀ ರಘುಪತಿ ಭಟ್ ಕೆ. (ಉಡುಪಿ)
ಉತ್ತರಿಸುವ ದಿನಾಂಕ: 01.02.2021
ಉತ್ತರಿಸುವ ಸಚಿವರು: ಉಪ ಮುಖ್ಯಮಂತ್ರಿಗಳು, ಲೋಕೋಪಯೋಗಿ ಇಲಾಖೆ

| ಕ್ರಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ಈ ಹಿಂದೆ ಜಿಲ್ಲಾ ಪಂಚಾಯತ್ ಇಲಾಖೆಯಿಂದ ರಸ್ತೆಗಳನ್ನು ಮೇಲ್ದರ್ಜೆಗೇರಿಸಿದಾಗ ಲೋಕೋಪಯೋಗಿ ಇಲಾಖೆಗೆ ಹಸ್ತಾಂತರಿಸಲಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಸರ್ಕಾರದ ಗಮನಕ್ಕೆ ಬಂದಿದೆ. |
| ಆ) | ಹಾಗಿದ್ದಲ್ಲಿ ಆ ಸಂದರ್ಭದಲ್ಲಿ ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆಯ ರಸ್ತೆಯು ಮಾರ್ಜಿನ್ ರಸ್ತೆ ಮಧ್ಯಭಾಗದಿಂದ 25 ಮೀಟರ್ ಇರುವುದರಿಂದ ಸದರಿ ಮಾರ್ಜಿನ ವ್ಯತ್ಯಾಸದಿಂದ ಹಲವಾರು ಕಟ್ಟಡಗಳು ಬರುವುದರಿಂದ ರಸ್ತೆಯ ಅಗಲೀಕರಣಕ್ಕೆ ತುಂಬಾ ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ (ವಿವರ ನೀಡುವುದು) | |
| ಇ) | ಬಂದಿದ್ದಲ್ಲಿ ಈ ಸಮಸ್ಯೆಯನ್ನು ಪರಿಹರಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು (ಸಂಪೂರ್ಣ ವಿವರ ನೀಡುವುದು) ? | ಗ್ರಾಮೀಣ ರಸ್ತೆಯಿಂದ ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸಲಾದ ರಸ್ತೆಗಳನ್ನು ಅಭಿವೃದ್ಧಿಪಡಿಸಲು ಸರ್ಕಾರದ ಆದೇಶ ಸಂ: ಪಿಡಬ್ಲ್ಯುಡಿ 362 ಸಿಆರ್‌ಎಂ 98 ದಿನಾಂಕ: 09.10.1998 ರ ಕೋಷ್ಟಕ ರನ್ವಯ ಗ್ರಾಮೀಣ ಪರಿಮಿತಿಯಲ್ಲಿ Right of way (ROW) 25.00ಮೀ ರಿಂದ 30.00ಮೀ ಹಾಗೂ ಪಟ್ಟಣ ಪರಿಮಿತಿಯಲ್ಲಿ Right of way (ROW) 15.00ಮೀ ದಿಂದ 25.00ಮೀ ವರೆಗೆ ಇರುತ್ತದೆ. ಅದರನ್ವಯ Right of way (ROW) ಹೊಂದಿರುವ ಜಿಲ್ಲಾ ಪಂಚಾಯತ್ ರಸ್ತೆಗಳನ್ನು ಮೇಲ್ದರ್ಜೆಗೇರಿಸಲು ಕ್ರಮ ವಹಿಸಲಾಗುವುದು.<br><br>ರಸ್ತೆಯ ಅಗಲೀಕರಣ ಸಂದರ್ಭದಲ್ಲಿ ಜಿಲ್ಲಾ ಪಂಚಾಯತ್ |

| ಕ್ರಸಂ | ಪ್ರಶ್ನೆಗಳು | ಉತ್ತರಗಳು |
| --- | --- | --- |
| | | ರಸ್ತೆಗಳನ್ನು ಮೇಲ್ದರ್ಜೆಗೇರಿಸಿದ ನಂತರ ಅಗಲೀಕರಣ ಮಾಡುವ ಸಂದರ್ಭ ಉಂಟಾದಾಗ ರಸ್ತೆಯ ಮಾರ್ಜಿನಲ್ಲಿರುವ ಅನಧಿಕೃತ ಕಟ್ಟಡಗಳನ್ನು ತೆರವುಗೊಳಿಸಲು ಕ್ರಮವಹಿಸಲಾಗುತ್ತದೆ. ಒಂದು ವೇಳೆ ROW ಕಡಿಮೆಯಿದ್ದಲ್ಲಿ ಭೂ ಸ್ವಾಧೀನ ಪಡಿಸಿಕೊಂಡು ಇಲಾಖೆಯಿಂದ ಪರಿಹಾರವನ್ನು ನೀಡಿ ರಸ್ತೆ ಅಗಲೀಕರಣಗೊಳಿಸಲಾಗುತ್ತಿದೆ. ಅಗಲೀಕರಣ ಸಾಧ್ಯವಿಲ್ಲವೆಂದು ಕಂಡುಬಂದಲ್ಲಿ ಪಟ್ಟಣ ಪಂಚಾಯತ್/ ನಗರಸಭೆ / ಮಹಾನಗರ ಪಾಲಿಕೆ ಹೊಂದಿರುವ ನಗರಗಳಿಗೆ ಬೈಪಾಸ್ ರಸ್ತೆಗಳನ್ನು ನಿರ್ಮಿಸಿ ವಾಹನಗಳ ಸುಗಮ ಸಂಚಾರಕ್ಕೆ ಅನುವುಮಾಡಿಕೊಡಲಾಗುತ್ತದೆ. |

ಲೋಇ 14 ಸಿಕ್ಯೂಎನ್ 2021(ಇ)

(ಗೋವಿಂದ ಎಂ. ಕಾರಜೋಳ)
ಉಪ ಮುಖ್ಯಮಂತ್ರಿಗಳು,
ಲೋಕೋಪಯೋಗಿ ಇಲಾಖೆ

# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 609 |
| ಸದಸ್ಯರ ಹೆಸರು | ಶ್ರೀ ರಘುಪತಿ ಭಟ್.ಕೆ (ಉಡುಪಿ) |
| ಉತ್ತರಿಸಬೇಕಾದ ದಿನಾಂಕ | 01-02-2021 |
| ಉತ್ತರಿಸುವ ಸಚಿವರು | ಉಪ ಮುಖ್ಯಮಂತ್ರಿಗಳು, ಲೋಕೋಪಯೋಗಿ ಇಲಾಖೆ |

<table>
<tr><th>ಕ್ರಸಂ</th><th>ಪ್ರಶ್ನೆಗಳು</th><th>ಉತ್ತರ</th></tr>
<tr><td>ಅ)</td><td>ಲೋಕೋಪಯೋಗಿ ಇಲಾಖೆಯ ರಸ್ತೆಯ ಮಾರ್ಜಿನ್ ಕನಿಷ್ಠ 2500 ಮೀಟರ್ ಇದ್ದರೂ ಪಟ್ಟಣ ಪಂಚಾಯತ್/ ನಗರಸಭೆ/ ಮಹಾನಗರ ಪಾಲಿಕೆಗಳಲ್ಲಿ ರಸ್ತೆಯ ಮಾರ್ಜಿನ್ 15 ಮೀಟರ್ ಇರುವುದರಿಂದ ಸದರಿ ಸ್ಥಳಗಳಲ್ಲಿ ರಸ್ತೆಯ ಅಗಲೀಕರಣಕ್ಕೆ ತುಂಬಾ ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;</td><td>ಸರ್ಕಾರದ ಗಮನಕ್ಕೆ ಬಂದಿದೆ.</td></tr>
<tr><td>ಆ)</td><td>ಬಂದಿದ್ದಲ್ಲಿ ಸರ್ಕಾರ ಯಾವ ಕ್ರಮಗಳನ್ನು ಕೈಗೊಂಡಿದೆ (ವಿವರ ನೀಡುವುದು)</td><td>ಕರ್ನಾಟಕ ರಾಜ್ಯ ಹೆದ್ದಾರಿ ಕಾಯ್ದೆ 1964ರ ಅಧಿನಿಯಮ 7(1)ರಂತೆ ಪಟ್ಟಣ ಪಂಚಾಯತ್/ ನಗರಸಭೆ / ಮಹಾನಗರ ಪಾಲಿಕೆಯ ವ್ಯಾಪ್ತಿಯಲ್ಲಿ ಆಯ್ದುಹೋಗುವ ರಾಜ್ಯ ಹೆದ್ದಾರಿಯ ಗಡಿ ಮತ್ತು ಕಟ್ಟಡ ರೇಖೆಗಳನ್ನು ಸರ್ಕಾರದ ಆದೇಶ ಸಂಖ್ಯೆ: ಲೋಇ 23 ಆರ್‌ಡಿಎಫ್ 2004 ದಿನಾಂಕ: 18.10.2004ರಲ್ಲಿ ಈ ಕೆಳಕಂಡಂತೆ ನಿಗಧಿಗೊಳಿಸಿ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಲಾಗಿದೆ.
<table>
<tr><td rowspan="5">1</td><td>ಸಿಟಿ ಕಾರ್ಪೋರೇಷನ್ ಪರಿಮಿತಿ</td><td rowspan="5">ರಾಜ್ಯ ಹೆದ್ದಾರಿ ದಾಖಲಿತ ರಸ್ತೆ ಭೂ ಗಡಿಯ ಅಂಚಿನಿಂದ 6 ಮೀಟರ್</td></tr>
<tr><td>ಸಿಟಿ ಮುನ್ಸಿಪಲ್ ಕೌನ್ಸಿಲ್ ಪರಿಮಿತಿ</td></tr>
<tr><td>ಟೌನ್ ಮುನ್ಸಿಪಲ್ ಕೌನ್ಸಿಲ್ ಪರಿಮಿತಿ</td></tr>
<tr><td>ಟೌನ್ ಪಂಚಾಯತಿ ಪರಿಮಿತಿ</td></tr>
<tr><td>ಗ್ರಾಮ ಪಂಚಾಯಿತಿ ಪರಿಮಿತಿಯಲ್ಲಿ</td></tr>
<tr><td>2</td><td>ಸಿಟಿ ಕಾರ್ಪೋರೇಷನ್ ಪರಿಮಿತಿಯಿಂದ 15.00 ಕಿ.ಮೀ. ದೂರದವರೆಗೆ</td><td>12 ಮೀಟರ್</td></tr>
</table>
</td></tr>
</table>

| | | |
|---|---|---|
| | | ರಸ್ತೆ ಅಗಲೀಕರಣ ಸಂದರ್ಭದಲ್ಲಿ ನಿಗದಿತ Right of way (ROW) ಇಲ್ಲದಿದ್ದಲ್ಲಿ ROWನ ಒತ್ತುವರಿಯಾಗಿದೆಯೇ ಅಥವಾ ROW ಕಡಿಮೆಯಿರುವುದೇ ಎಂಬುದನ್ನು ಪರಿಶೀಲಿಸಿ Right of way ಒತ್ತುವರಿಯಾಗಿದ್ದಲ್ಲಿ, ಒತ್ತುವರಿಯನ್ನು ತೆರವುಗೊಳಿಸಲು ಕ್ರಮವಹಿಸಲಾಗುತ್ತಿದೆ. ಒಂದು ವೇಳೆ ROW ಕಡಿಮೆಯಿದ್ದಲ್ಲಿ ಭೂ ಸ್ವಾಧೀನ ಪಡಿಸಿಕೊಂಡು ಇಲಾಖೆಯಿಂದ ಪರಿಹಾರವನ್ನು ನೀಡಿ ರಸ್ತೆ ಅಗಲೀಕರಣಗೊಳಿಸಲಾಗುತ್ತಿದೆ. ಒಂದು ವೇಳೆ ಅಗಲೀಕರಣ ಸಾಧ್ಯವಿಲ್ಲವೆಂದು ಕಂಡುಬಂದಲ್ಲಿ ಪಟ್ಟಣ ಪಂಚಾಯತ್/ ನಗರಸಭೆ / ಮಹಾನಗರ ಪಾಲಿಕೆ ಹೊಂದಿರುವ ನಗರಗಳಿಗೆ ಬೈಪಾಸ್ ರಸ್ತೆಗಳನ್ನು ನಿರ್ಮಿಸಿ ವಾಹನಗಳ ಸುಗಮ ಸಂಚಾರಕ್ಕೆ ಅನುವುಮಾಡಿಕೊಡಲಾಗುತ್ತದೆ. |

ಲೋಇ 10 ಸಿಕ್ಯೂಎನ್ 2021(ಇ)

(ಗೋವಿಂದ ಎಂ. ಕಾರಜೋಳ)
ಉಪ ಮುಖ್ಯಮಂತ್ರಿಗಳು,
ಲೋಕೋಪಯೋಗಿ ಇಲಾಖೆ

# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 612 |
| ಮಾನ್ಯ ಸದಸ್ಯರ ಹೆಸರು | ಶ್ರೀ ಪುಟ್ಟರಂಗಶೆಟ್ಟಿ ಸಿ. (ಚಾಮರಾಜನಗರ) |
| ಉತ್ತರಿಸಬೇಕಾದ ದಿನಾಂಕ | 01.02.2021 |
| ಉತ್ತರಿಸುವ ಸಚಿವರು | ಮಾನ್ಯ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು. |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ರಾಜ್ಯದಲ್ಲಿ ಪ್ರಸ್ತುತ ಹಿಂದುಳಿದ ವರ್ಗಗಳ ವ್ಯಾಪ್ತಿಯಡಿ ಅಸ್ತಿತ್ವದಲ್ಲಿರುವ ವಸತಿನಿಲಯಗಳೆಷ್ಟು (ವಸತಿ ನಿಲಯಗಳವಾರು, ಜಿಲ್ಲಾವಾರು ವಿವರ ನೀಡುವುದು): | ರಾಜ್ಯದಲ್ಲಿ ಪ್ರಸ್ತುತ ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯಡಿ 1301 ಮೆಟ್ರಿಕ್-ಪೂರ್ವ ಹಾಗೂ 1137 ಮೆಟ್ರಿಕ್-ನಂತರದ ಹೀಗೆ ಒಟ್ಟು 2438 ವಿದ್ಯಾರ್ಥಿನಿಲಯಗಳು ಕಾರ್ಯನಿರ್ವಹಿಸುತ್ತಿರುತ್ತವೆ.<br>ಜಿಲ್ಲಾವಾರು ಕಾರ್ಯನಿರ್ವಹಿಸುತ್ತಿರುವ ವಸತಿನಿಲಯಗಳವಾರು ಮಾಹಿತಿಯನ್ನು ವಿವರಗಳನ್ನು ಇಲಾಖಾ ಜಾಲತಾಣ http://bcwd.karnataka.gov.in/ ರಲ್ಲಿ ನೀಡಲಾಗಿದೆ. |
| ಆ | ಸದರಿ ವಸತಿನಿಲಯಗಳಲ್ಲಿ ಬಾಲಕ / ಬಾಲಕಿಯರ ವಸತಿನಿಲಯಗಳೆಷ್ಟು; ಇವುಗಳಲ್ಲಿ ಪ್ರವೇಶ ಪಡೆದು ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿ / ವಿದ್ಯಾರ್ಥಿನಿಯರ ಸಂಖ್ಯೆ ಎಷ್ಟು (ವಿವರ ನೀಡುವುದು): | 2438 ವಿದ್ಯಾರ್ಥಿನಿಲಯಗಳ ಪೈಕಿ 1519 ಬಾಲಕರ ಮತ್ತು 919 ಬಾಲಕಿಯರ ವಿದ್ಯಾರ್ಥಿನಿಲಯಗಳಿದ್ದು, ವಿವರ ಕೆಳಕಂಡಂತಿವೆ. |

| ಕ್ರ. ಸಂ. | ವಿವರ | ವಿದ್ಯಾರ್ಥಿನಿಲಯಗಳ ಸಂಖ್ಯೆ | | |
|---|---|---|---|---|
| | | ಬಾಲಕರು | ಬಾಲಕಿಯರು | ಒಟ್ಟು |
| 1 | ಮೆಟ್ರಿಕ್-ಪೂರ್ವ ವಿದ್ಯಾರ್ಥಿನಿಲಯಗಳು | 1010 | 291 | 1301 |
| 2 | ಮೆಟ್ರಿಕ್-ನಂತರದ ವಿದ್ಯಾರ್ಥಿನಿಲಯಗಳು | 509 | 628 | 1137 |
| | **ಒಟ್ಟು** | **1519** | **919** | **2438** |

2020-21ನೇ ಸಾಲಿನಲ್ಲಿ ಕೋವಿಡ್-19ರ ಸಂಬಂಧ ವಿದ್ಯಾರ್ಥಿನಿಲಯಗಳನ್ನು ಪ್ರಸ್ತುತ ನವೆಂಬರ್ ಮಾಹೆಯಿಂದ ಪ್ರಾರಂಭಿಸಲಾಗಿದ್ದು, ಎಸ್.ಎಸ್.ಎಲ್.ಸಿ ಮತ್ತು ಮೆಟ್ರಿಕ್-ನಂತರದ ತರಗತಿಗಳ ದ್ವಿತೀಯ ವರ್ಷದಿಂದ ಅಂತಿಮ ವರ್ಷದವರೆಗಿನ ನವೀಕರಣ ವಿದ್ಯಾರ್ಥಿಗಳಿಗೆ ಪ್ರವೇಶವನ್ನು ಕಲ್ಪಿಸಲಾಗಿರುತ್ತದೆ.

ಮುಂದುವರೆದು, ಈ ವಿದ್ಯಾರ್ಥಿನಿಲಯಗಳಲ್ಲಿ 20901 ಬಾಲಕರು ಹಾಗೂ 21175 ಬಾಲಕಿಯರಿಗೆ ಪ್ರವೇಶವನ್ನು ಕಲ್ಪಿಸಲಾಗಿದ್ದು, ವಿವರ ಕೆಳಕಂಡಂತಿದೆ.

| ಕ್ರ. ಸಂ. | ವಿವರ | ಪ್ರವೇಶ ಪಡೆದಿರುವ ನವೀಕರಣ ವಿದ್ಯಾರ್ಥಿಗಳ ವಿವರ | | |
|---|---|---|---|---|
| | | ಬಾಲಕರು | ಬಾಲಕಿಯರು | ಒಟ್ಟು |
| 1 | ಮೆಟ್ರಿಕ್-ಪೂರ್ವ ವಿದ್ಯಾರ್ಥಿ ನಿಲಯಗಳು (ಎಸ್.ಎಸ್.ಎಲ್.ಸಿ ನವೀಕರಣ ವಿದ್ಯಾರ್ಥಿಗಳು ಮಾತ್ರ) | 3915 | 1334 | 5249 |
| 2 | ಮೆಟ್ರಿಕ್-ನಂತರದ ವಿದ್ಯಾರ್ಥಿನಿಲಯಗಳು | 16986 | 19841 | 36827 |
| | **ಒಟ್ಟು** | **20901** | **21175** | **42076** |

| | | |
|---|---|---|
| ಇ | ಈ ಪೈಕಿ ಸ್ವಂತ ಕಟ್ಟಡ ಹೊಂದಿರುವ ವಸತಿನಿಲಯಗಳೆಷ್ಟು; | ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯಡಿ ಕಾರ್ಯನಿರ್ವಹಿಸುತ್ತಿರುವ ಒಟ್ಟು 2438 ವಿದ್ಯಾರ್ಥಿನಿಲಯಗಳ ಪೈಕಿ 1463 ವಿದ್ಯಾರ್ಥಿನಿಲಯಗಳು ಸ್ವಂತ ಕಟ್ಟಡಗಳಲ್ಲಿ ಕಾರ್ಯನಿರ್ವಹಿಸುತ್ತಿರುತ್ತವೆ. |
| ಈ | ಬಾಡಿಗೆ ಕಟ್ಟಡದಲ್ಲಿ ನಿರ್ವಹಿಸುತ್ತಿರುವ ವಸತಿನಿಲಯಗಳು ಯಾವುವು ಹಾಗೂ ಅವುಗಳಿಗೆ ನೀಡಲಾಗುತ್ತಿರುವ ವಾರ್ಷಿಕ ಬಾಡಿಗೆಯ ಮೊತ್ತವೆಷ್ಟು (ವಿವರ ನೀಡುವುದು)? | 2438 ವಿದ್ಯಾರ್ಥಿನಿಲಯಗಳ ಪೈಕಿ 870 ವಿದ್ಯಾರ್ಥಿನಿಲಯಗಳು ಬಾಡಿಗೆ ಕಟ್ಟಡಗಳಲ್ಲಿ ಕಾರ್ಯನಿರ್ವಹಿಸುತ್ತಿದ್ದು, ವಾರ್ಷಿಕವಾಗಿ ಒಟ್ಟಾರೆ ರೂ.4503.89 ಲಕ್ಷಗಳನ್ನು ಬಾಡಿಗೆಗಾಗಿ ಪಾವತಿಸಲಾಗುತ್ತಿದೆ.<br>ವಿದ್ಯಾರ್ಥಿನಿಲಯವಾರು ಮಾಹಿತಿಯನ್ನು ಅನುಬಂಧ-2ರಲ್ಲಿ ನೀಡಲಾಗಿದೆ. |

ಸಂಖ್ಯೆ:ಹಿಂವಕ 66 ಬಿಎಂಎಸ್ 2021

(ಕೋಟ ಶ್ರೀನಿವಾಸ ಪೂಜಾರಿ)
ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ

# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 614 |
| ಮಾನ್ಯ ಸದಸ್ಯರ ಹೆಸರು | ಶ್ರೀ ಕುಮಾರ ಬಂಗಾರಪ್ಪ ಎಸ್. (ಸೊರಬ) |
| ಉತ್ತರಿಸಬೇಕಾದ ದಿನಾಂಕ | 01.02.2021 |
| ಉತ್ತರಿಸುವ ಸಚಿವರು | ಮಾನ್ಯ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು. |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಡಾ: ನಂಜುಂಡಪ್ಪ ವರದಿಯ ಪ್ರಕಾರ ಹಿಂದುಳಿದ ತಾಲ್ಲೂಕಾಗಿರುವ ಸೊರಬ ತಾಲ್ಲೂಕಿನ ಆನವಟ್ಟಿಯಲ್ಲಿ ಮೆಟ್ರಿಕ್-ಪೂರ್ವ ಹಾಗೂ ಮೆಟ್ರಿಕ್-ನಂತರದ ಬಾಲಕರ/ಬಾಲಕಿಯರ ವಸತಿನಿಲಯಗಳು ತೀವ್ರ ಕೊರತೆಯಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖಾ ವತಿಯಿಂದ ಪ್ರಸ್ತುತ ಸೊರಬ ತಾಲ್ಲೂಕಿನ ಅನವಟ್ಟಿಯಲ್ಲಿ ಒಂದು ಬಾಲಕರ ಮೆಟ್ರಿಕ್-ಪೂರ್ವ ಹಾಗೂ 4 ಮೆಟ್ರಿಕ್-ನಂತರದ (3 ಬಾಲಕಿಯರು ಹಾಗೂ 1 ಬಾಲಕರು) ವಿದ್ಯಾರ್ಥಿನಿಲಯಗಳು ಕಾರ್ಯನಿರ್ವಹಿಸುತ್ತಿದ್ದು, ಒಟ್ಟು 500 ವಿದ್ಯಾರ್ಥಿಗಳಿಗೆ ಪ್ರವೇಶಾವಕಾಶದ ಸೌಲಭ್ಯವನ್ನು ಕಲ್ಪಿಸಲಾಗಿರುತ್ತದೆ.<br><br>2020ನೇ ಸಾಲಿನಲ್ಲಿ ಮೆಟ್ರಿಕ್-ನಂತರದ ಬಾಲಕರ ವಿದ್ಯಾರ್ಥಿನಿಲಯ, ಸೊರಬ ಟೌನ್ ಈ ವಿದ್ಯಾರ್ಥಿನಿಲಯವನ್ನು ದಿನಾಂಕ 6.10.2020ರಲ್ಲಿ ಸೊರಬ ತಾಲ್ಲೂಕು ಅನವಟ್ಟಿಗೆ ಸ್ಥಳಾಂತರಿಸಿ ಆದೇಶಿಸಲಾಗಿರುತ್ತದೆ. ಹಾಗೂ ದಿನಾಂಕ 21.1.2020ರಲ್ಲಿ ಶಿವಮೊಗ್ಗ ಜಿಲ್ಲೆಯ ಒಟ್ಟು 28 ವಿದ್ಯಾರ್ಥಿನಿಲಯಗಳಿಗೆ 550 ಸಂಖ್ಯಾಬಲ ಹೆಚ್ಚಳ ಮಾಡಲಾಗಿದ್ದು, ಅದರಲ್ಲಿ ಮೆಟ್ರಿಕ್-ನಂತರದ ಬಾಲಕಿಯರ ವಿದ್ಯಾರ್ಥಿನಿಲಯ, ಅನವಟ್ಟಿ ಈ ವಿದ್ಯಾರ್ಥಿನಿಲಯದ ಸಂಖ್ಯಾಬಲವನ್ನು 125 ರಿಂದ 150ಕ್ಕೆ ಹೆಚ್ಚಿಸಲಾಗಿರುತ್ತದೆ.<br><br>ಸೊರಬ ತಾಲ್ಲೂಕಿನ ಅನವಟ್ಟಿಯಲ್ಲಿ ಮೆಟ್ರಿಕ್-ಪೂರ್ವ ಬಾಲಕಿಯರ ವಿದ್ಯಾರ್ಥಿನಿಲಯಗಳಿಗೆ ಬೇಡಿಕೆ ಇರುವುದರಿಂದ, ಚಂದ್ರಗುತ್ತಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ಮೆಟ್ರಿಕ್-ಪೂರ್ವ ಬಾಲಕರ ವಿದ್ಯಾರ್ಥಿನಿಲಯದ ಪ್ರವೇಶಕ್ಕೆ ಹೆಚ್ಚಿನ ಬೇಡಿಕೆ ಇಲ್ಲದ ಕಾರಣ ಸದರಿ ವಿದ್ಯಾರ್ಥಿನಿಲಯವನ್ನು ಅನವಟ್ಟಿ ಗ್ರಾಮಕ್ಕೆ ಮೆಟ್ರಿಕ್-ಪೂರ್ವ ಬಾಲಕಿಯರ ವಿದ್ಯಾರ್ಥಿನಿಲಯವನ್ನಾಗಿ ಪರಿವರ್ತಿಸಿ ಸ್ಥಳಾಂತರಿಸುವ ಕುರಿತು ಪ್ರಸ್ತಾವನೆ ಸ್ವೀಕೃತವಾಗಿದ್ದು, ಸರ್ಕಾರದ ಪರಿಶೀಲನೆಯಲ್ಲಿದೆ.<br><br>ಹೊಸ ವಿದ್ಯಾರ್ಥಿನಿಲಯಗಳ ಮಂಜೂರಾತಿಯು ರಾಜ್ಯದ ಒಟ್ಟಾರೆ ಬೇಡಿಕೆ ಹಾಗೂ ಆಯವ್ಯಯದ ಲಭ್ಯತೆಯನ್ನು ಆಧರಿಸಿರುತ್ತದೆ. |

| | | |
|---|---|---|
| ಆ | ಹಾಲಿ ಇರುವ ವಸತಿನಿಲಯಗಳು ಸೊರಬ ಹಾಗೂ ತಾಳಗುಪ್ಪ ಹೋಬಳಿಯಲ್ಲಿ ತೀವ್ರ ಸಮಸ್ಯೆಗಳನ್ನು ಎದುರಿಸುತ್ತಿದ್ದು, ಮಕ್ಕಳಿಗೆ ಮೂಲಭೂತ ವ್ಯವಸ್ಥೆಗಳಿಲ್ಲದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಸೊರಬ ಹಾಗೂ ತಾಳಗುಪ್ಪ ಹೋಬಳಿಯಲ್ಲಿರುವ 27 ವಿದ್ಯಾರ್ಥಿನಿಲಯಗಳ ಪೈಕಿ 21 ವಿದ್ಯಾರ್ಥಿನಿಲಯಗಳು ಸ್ವಂತ ಕಟ್ಟಡಗಳಲ್ಲಿ ಹಾಗೂ 6 ವಿದ್ಯಾರ್ಥಿನಿಲಯಗಳು ಬಾಡಿಗೆ ಕಟ್ಟಡಗಳಲ್ಲಿ ಕಾರ್ಯನಿರ್ವಹಿಸುತ್ತಿರುತ್ತವೆ.<br>ಬಾಡಿಗೆ ಕಟ್ಟಡಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ವಿದ್ಯಾರ್ಥಿನಿಲಯಗಳಲ್ಲಿ ಸ್ಥಳಾವಕಾಶದ ಕೊರತೆಯಿಂದ ಕೆಲವೊಂದು ಮೂಲಭೂತ ಸೌಲಭ್ಯಗಳ ಕೊರತೆ ಇರುತ್ತದೆ. |
| ಇ | ಬಂದಿದ್ದಲ್ಲಿ, ಪ್ರಸ್ತುತ ಆರ್ಥಿಕ ವರ್ಷದಲ್ಲಿ ಅನುದಾನ ಬಿಡುಗಡೆ ಮಾಡಲಾಗುವುದೇ? | ಬಾಡಿಗೆ ಕಟ್ಟಡಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ವಿದ್ಯಾರ್ಥಿನಿಲಯಗಳಿಗೆ ನಿವೇಶನದ ಲಭ್ಯತೆ ಹಾಗೂ ಆಯವ್ಯಯದಲ್ಲಿ ಒದಗಿಸುವ ಅನುದಾನದ ಲಭ್ಯತೆಯನುಸಾರ ಹಂತ ಹಂತವಾಗಿ ಸ್ವಂತ ಕಟ್ಟಡಗಳನ್ನು ನಿರ್ಮಿಸಿ, ಮಂಜೂರಾತಿ ಸಂಖ್ಯೆಗನುಗುಣವಾಗಿ ಅಗತ್ಯ ಮೂಲಭೂತ ಸೌಲಭ್ಯಗಳನ್ನು ಕಲ್ಪಿಸಲಾಗುತ್ತದೆ. |

ಸಂಖ್ಯೆ:ಹಿಂವಕ 68 ಬಿಂಎಂಎಸ್ 2021

(ಕೋಟ ಶ್ರೀನಿವಾಸ ಪೂಜಾರಿ)
ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ

# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 621 |
| ಮಾನ್ಯ ಸದಸ್ಯರ ಹೆಸರು | ಶ್ರೀ ಆಚಾರ್ ಹಾಲಪ್ಪ ಬಸಪ್ಪ (ಯಲಬುರ್ಗ) |
| ಉತ್ತರಿಸಬೇಕಾದ ದಿನಾಂಕ | 01.02.2021 |
| ಉತ್ತರಿಸುವ ಸಚಿವರು | ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಅಂಬಿಗರ ಚೌಡಯ್ಯ, ಉಪ್ಪಾರ, ವಿಶ್ವಕರ್ಮ, ಆರ್ಯವೈಶ್ಯ ನಿಗಮಗಳನ್ನು ಯಾವ ದಿನಾಂಕಗಳಿಂದ ಜಾರಿಗೆ ತರಲಾಗಿದೆ | 1) ಅಂಬಿಗರ ಚೌಡಯ್ಯ ಅಭಿವೃದ್ಧಿ ನಿಗಮವು ದಿನಾಂಕ:10.11.2017 ರಿಂದ ಜಾರಿಗೆ ಬಂದಿರುತ್ತದೆ.<br>2) ಕರ್ನಾಟಕ ಉಪ್ಪಾರ ಅಭಿವೃದ್ಧಿ ನಿಗಮವು ದಿನಾಂಕ:31.01.2017 ರಿಂದ ಜಾರಿಗೆ ಬಂದಿರುತ್ತದೆ.<br>3) ಕರ್ನಾಟಕ ವಿಶ್ವಕರ್ಮ ಸಮುದಾಯಗಳ ಅಭಿವೃದ್ಧಿ ನಿಗಮವು ದಿ:28.02.2016 ರಿಂದ ಜಾರಿಗೆ ಬಂದಿರುತ್ತದೆ.<br>4) ಕರ್ನಾಟಕ ಆರ್ಯ ವೈಶ್ಯ ಸಮುದಾಯ ಅಭಿವೃದಿ ನಿಗಮವು ದಿ:13.06.2019 ರಿಂದ ಜಾರಿಗೆ ಬಂದಿರುತ್ತದೆ. |
| ಆ) | ಈ ನಿಗಮಗಳಲ್ಲಿ ಫಲಾನುಭವಿಗಳಿಗೆ ನೀಡಲಾಗುತ್ತಿರುವ ಯೋಜನೆಗಳಾವುವು; (ವಿವರ ನೀಡುವುದು) | ಸದರಿ ನಿಗಮಗಳಲ್ಲಿ ಫಲಾನುಭವಿಗಳಿಗೆ ನೀಡಲಾಗುತ್ತಿರುವ ಯೋಜನೆಗಳು ಈ ಕೆಳಕಂಡಂತಿದೆ.<br>1) ಸ್ವಯಂ ಉದ್ಯೋಗ ನೇರ ಸಾಲ ಯೋಜನೆ.<br>2) ಬ್ಯಾಂಕ್‌ಗಳ ಸಹಯೋಗದೊಂದಿಗೆ ಸ್ವಯಂ ಉದ್ಯೋಗ ಸಾಲ.<br>3) ಅರಿವು ಶೈಕ್ಷಣಿಕ ಸಾಲ ಯೋಜನೆ.<br>4) ಗಂಗಾ ಕಲ್ಯಾಣ ಯೋಜನೆ.<br>5) ಕಿರು ಸಾಲ ಯೋಜನೆ.<br>6) ಪಂಚವೃತ್ತಿ ಸಾಲ ಯೋಜನೆ.<br>7) ಸಾಂಪ್ರದಾಯಿಕ ವೃತ್ತಿ ಸಾಲ ಯೋಜನೆ. |

..2

ಕೊಪ್ಪಳ ಜಿಲ್ಲೆಗೆ ಸಂಬಂಧಪಟ್ಟಂತೆ ತಾಲ್ಲೂಕುವಾರು ಮಾಹಿತಿ ಈ ಕೆಳಕಂಡಂತಿದೆ:-

**2018-19ನೇ ಸಾಲಿನ ಗುರಿ ಮತ್ತು ಸಾಧನೆ**

| ತಾಲ್ಲೂಕಿನ ಹೆಸರು | ಸ್ವಯಂ ಉದ್ಯೋಗ | | | | ಅರಿವು ಶೈಕ್ಷಣಿಕ ಸಾಲ | | | | ಗಂಗಾ ಕಲ್ಯಾಣ ಯೋಜನೆ | | | |
|---|---|---|---|---|---|---|---|---|---|---|---|---|
| | ಗುರಿ | | ಸಾಧನೆ | | ಗುರಿ | | ಸಾಧನೆ | | ಗುರಿ | | ಸಾಧನೆ | |
| | ಭೌತಿಕ | ಆರ್ಥಿಕ | ಭೌತಿಕ | ಆರ್ಥಿಕ | ಭೌತಿಕ | ಆರ್ಥಿಕ | ಭೌತಿಕ | ಆರ್ಥಿಕ | ಭೌತಿಕ | ಆರ್ಥಿಕ | ಭೌತಿಕ | ಆರ್ಥಿಕ |
| ಕನಕಗಿರಿ | 3 | 1.50 | 2 | 1.00 | 1 | 1.00 | - | - | - | - | - | - |
| ಕುಷ್ಟಗಿ | 3 | 1.50 | 3 | 1.50 | 1 | 1.00 | - | - | - | - | - | - |
| ಕೊಪ್ಪಳ | 3 | 1.50 | 3 | 1.50 | 2 | 2.00 | 2 | 1.75 | - | - | - | - |
| ಗಂಗಾವತಿ | 2 | 1.00 | 2 | 1.00 | 1 | 1.00 | 1 | 1.00 | 1 | 2.00 | 1 | 2.00 |
| ಯಲಬುರ್ಗಾ | 1 | 0.50 | 1 | 0.50 | 2 | 2.00 | - | - | - | - | - | - |
| ಒಟ್ಟು | 12 | 6.00 | 11 | 5.50 | 7 | 7.00 | 3 | 2.75 | 1 | 2.00 | 1 | 2.00 |

**2019-20ನೇ ಸಾಲಿನ ಗುರಿ ಮತ್ತು ಸಾಧನೆ**

| ತಾಲ್ಲೂಕಿನ ಹೆಸರು | ಸ್ವಯಂ ಉದ್ಯೋಗ | | | | ಅರಿವು ಶೈಕ್ಷಣಿಕ ಸಾಲ | | | | ಗಂಗಾ ಕಲ್ಯಾಣ ಯೋಜನೆ | | | |
|---|---|---|---|---|---|---|---|---|---|---|---|---|
| | ಗುರಿ | | ಸಾಧನೆ | | ಗುರಿ | | ಸಾಧನೆ | | ಗುರಿ | | ಸಾಧನೆ | |
| | ಭೌತಿಕ | ಆರ್ಥಿಕ | ಭೌತಿಕ | ಆರ್ಥಿಕ | ಭೌತಿಕ | ಆರ್ಥಿಕ | ಭೌತಿಕ | ಆರ್ಥಿಕ | ಭೌತಿಕ | ಆರ್ಥಿಕ | ಭೌತಿಕ | ಆರ್ಥಿಕ |
| ಕನಕಗಿರಿ | 5 | 2.50 | 5 | 2.50 | - | - | - | - | 1 | 2.00 | 1 | 2.00 |
| ಕುಷ್ಟಗಿ | 5 | 2.50 | 5 | 2.50 | - | - | - | - | 1 | 2.00 | 1 | 2.00 |
| ಕೊಪ್ಪಳ | 4 | 2.00 | 4 | 2.00 | 2 | 1.30 | 2 | 1.61 | 2 | 4.00 | 2 | 4.00 |
| ಗಂಗಾವತಿ | 4 | 2.00 | 4 | 2.00 | - | - | - | - | 1 | 2.00 | 1 | 2.00 |
| ಯಲಬುರ್ಗಾ | 4 | 2.00 | 3 | 1.50 | - | - | - | - | 1 | 2.00 | 1 | 2.00 |
| ಒಟ್ಟು | 22 | 11.00 | 21 | 10.50 | 2 | 1.30 | 2 | 1.61 | 6 | 12.00 | 6 | 12.00 |

ಉಳಿದ ನಿಗಮಗಳ ಕಾರ್ಯಾರಂಭದಿಂದ ಅಥವಾ ಕಳೆದ ಮೂರು ವರ್ಷಗಳಿಂದ ಇದುವರೆವಿಗೂ ಆಯ್ಕೆ ಮಾಡಲಾದ ಫಲಾನುಭವಿಗಳ ಪಟ್ಟಿಯನ್ನು ಅನುಬಂಧ-2ರಲ್ಲಿ ನೀಡಲಾಗಿದೆ.

ಸಂಖ್ಯೆ:ಹಿಂವಕ 60 ಬಿಎಂಎಸ್ 2021

(ಕೋಟ ಶ್ರೀನಿವಾಸ ಪೂಜಾರಿ)
ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ

# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 622 |
| ಮಾನ್ಯ ಸದಸ್ಯರ ಹೆಸರು | ಶ್ರೀ ಆಚಾರ್ ಹಾಲಪ್ಪ ಬಸಪ್ಪ, (ಯಲಬುರ್ಗಾ) |
| ಉತ್ತರಿಸಬೇಕಾದ ದಿನಾಂಕ | 01.02.2021 |
| ಉತ್ತರಿಸುವ ಸಚಿವರು | ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು |

<table>
<tr><th>ಕ್ರ. ಸಂ</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ)</td><td>ಕಳೆದ ಮೂರು ವರ್ಷಗಳ ಅವಧಿಯಲ್ಲಿ ಗಂಗಾ ಕಲ್ಯಾಣ ಯೋಜನೆಯಡಿ ನೀಡಲಾಗಿದ್ದ ಗುರಿ ಎಷ್ಟು;</td><td>ಡಿ.ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮದ ಗಂಗಾ ಕಲ್ಯಾಣ ಯೋಜನೆಯಡಿ ಕಳೆದ 3 ವರ್ಷಗಳ (2017-18 ರಿಂದ 2019-20) ರ ಅವಧಿಯಲ್ಲಿ ನಿಗಧಿಪಡಿಸಿದ ಗುರಿ: 15179.</td></tr>
<tr><td>ಆ)</td><td>ಸದರಿ ಅವಧಿಯಲ್ಲಿ ಆಯ್ಕೆ ಮಾಡಲಾದ ಫಲಾನುಭವಿಗಳ ಸಂಖ್ಯೆ ಎಷ್ಟು;(ಕೊಪ್ಪಳ ಜಿಲ್ಲೆಯ ತಾಲ್ಲೂಕುವಾರು ವಿವರ ನೀಡುವುದು)</td><td>ಕಳೆದ 3 ವರ್ಷಗಳ ಅವಧಿಯಲ್ಲಿ ಆಯ್ಕೆ ಮಾಡಿದ ಫಲಾನುಭವಿಗಳ ಸಂಖ್ಯೆ: 14826.<br>ಕೊಪ್ಪಳ ಜಿಲ್ಲೆಯಲ್ಲಿ ಆಯ್ಕೆ ಮಾಡಿದ ಫಲಾನುಭವಿಗಳ ಸಂಖ್ಯೆ 335.<br>ವಿಧಾನ ಸಭಾ ಕ್ಷೇತ್ರವಾರು ವಿವರ ಈ ಕೆಳಕಂಡಂತಿದೆ
<table>
<tr><th>ಕ್ರ. ಸಂ</th><th>ವಿಧಾನ ಸಭಾ ಕ್ಷೇತ್ರದ ವಿವರ ಹೆಸರು</th><th>ಫಲಾನುಭವಿಗಳ ಸಂಖ್ಯೆ</th></tr>
<tr><td>1</td><td>ಕೊಪ್ಪಳ</td><td>70</td></tr>
<tr><td>2</td><td>ಗಂಗಾವತಿ</td><td>70</td></tr>
<tr><td>3</td><td>ಕುಷ್ಟಗಿ</td><td>71</td></tr>
<tr><td>4</td><td>ಯಲಬುರ್ಗಾ</td><td>62</td></tr>
<tr><td>5</td><td>ಕನಕಗಿರಿ</td><td>62</td></tr>
<tr><td colspan="2">ಒಟ್ಟು</td><td>335</td></tr>
</table></td></tr>
<tr><td>ಇ)</td><td>ಸದರಿ ಫಲಾನುಭವಿಗಳಿಗೆ ಯೋಜನೆಯನ್ನು ಸಮರ್ಪಕವಾಗಿ ಒದಗಿಸಲಾಗಿದೆಯೇ;</td><td>2017-18 ನೇ ಸಾಲಿನ ಫಲಾನುಭವಿಗಳಿಗೆ ಯೋಜನೆಯನ್ನು ಸಮರ್ಪಕವಾಗಿ ಒದಗಿಸಲಾಗಿದೆ. ಉಳಿದ 2 ವರ್ಷಗಳ ಕೊಳವೆ ಬಾವಿಗಳನ್ನು ಇತ್ತೀಚೆಗೆ ಕೊರೆಯಿಸುವುದರಿಂದ ಯೋಜನೆ ಸೌಲಭ್ಯ ಒದಗಿಸುವ ಪ್ರಕ್ರಿಯೆ ಪ್ರಗತಿಯಲ್ಲಿದೆ.</td></tr>
<tr><td>ಈ)</td><td>ಯೋಜನೆಯನ್ವಯ ಕೊರೆಯಲಾದ ಕೊಳವೆ ಬಾವಿಗಳಲ್ಲಿ ಸಫಲವಾಗಿರುವ ಸಂಖ್ಯೆ ಎಷ್ಟು;</td><td>ಯೋಜನೆಯನ್ವಯ ಕಳೆದ ಮೂರು ವರ್ಷಗಳಲ್ಲಿ ಕೊರೆಯಲಾದ ಕೊಳವೆ ಬಾವಿಗಳಲ್ಲಿ ಸಫಲವಾಗಿರುವ ಕೊಳವೆ ಬಾವಿಗಳ ಸಂಖ್ಯೆ: 9517.</td></tr>
<tr><td>ಉ)</td><td>ಸಫಲ ಕೊಳವೆ ಬಾವಿ ಫಲಾನುಭವಿಗಳಿಗೆ ಸಾಮಗ್ರಿಗಳನ್ನು ವಿತರಿಸಲಾಗಿದೆಯೇ; ಇಲ್ಲವಾದಲ್ಲಿ ಬಾಕಿ ಇರುವ ಪ್ರಕರಣಗಳೆಷ್ಟು; (ವಿವರಗಳನ್ನು ನೀಡುವುದು)</td><td>2017-18ನೇ ಸಾಲಿನ ಫಲಾನುಭವಿಗಳಿಗೆ ಸಾಮಗ್ರಿಗಳನ್ನು ವಿತರಿಸಲಾಗಿದೆ. 2018-19ನೇ ಸಾಲಿನ ಇತ್ತೀಚೆಗೆ ಕೊರೆಯಿಸಿರುವ 1476 ಕೊಳವೆ ಬಾವಿಗಳಿಗೆ ಸಾಮಗ್ರಿಗಳನ್ನು ಸರಬರಾಜು ಮಾಡಲು ಕಾರ್ಯಾದೇಶ ನೀಡಿದ್ದು, ಪ್ರಕ್ರಿಯೆ ಪ್ರಗತಿಯಲ್ಲಿದೆ.<br><br>2019-20ನೇ ಸಾಲಿನ 1724 ಕೊಳವೆ ಬಾವಿಗಳನ್ನು ಕೊರೆಯಿಸಿದ್ದು, ಉಳಿದ ಕೊಳವೆ ಬಾವಿಗಳನ್ನು ಕೊರೆಯಿಸುವ ಕೆಲಸ ಪ್ರಗತಿಯಲ್ಲಿದೆ. ಈ ಸಾಲಿನ ಕೊಳವೆ ಬಾವಿಗಳಿಗೆ ಸಾಮಗ್ರಿಗಳನ್ನು ಸರಬರಾಜು ಮಾಡಲು ಟೆಂಡರ್ ಆಹ್ವಾನಿಸಲಾಗಿರುತ್ತದೆ.</td></tr>
</table>

| | | |
|---|---|---|
| ಊ) | ವಿದ್ಯುದ್ದೀಕರಣಕಾಗಿ ಬಾಕಿ ಇರುವ ಪ್ರಕರಣಗಳ ಸಂಖ್ಯೆ ಎಷ್ಟು | 2017-18ನೇ ಸಾಲಿನಿಂದ 2019-20ನೇ ಸಾಲಿನವರೆಗೆ ಕೊರೆದ, ಕೊಳವೆ ಬಾವಿಗಳಿಗೆ ವಿದ್ಯುತ್ ಸಂಪರ್ಕ ಕಲ್ಪಿಸಿದ ಹಾಗೂ ವಿದ್ಯುತ್ ಸಂಪರ್ಕ ಕಲ್ಪಿಸಲು ಬಾಕಿ ಇರುವ ಕೊಳವೆ ಬಾವಿಗಳ ವಿವರ ಕೆಳಕಂಡಂತಿದೆ.<br><br>ಕೊರೆದ ಕೊಳವೆ ಬಾವಿಗಳು: 9517; ವಿದ್ಯುತ್ ಸಂಪರ್ಕ ಕಲ್ಪಿಸಿರುವುದು: 5906; ವಿದ್ಯುತ್ ಸಂಪರ್ಕಕ್ಕೆ ಬಾಕಿ: 3611<br><br>2018-19 ಹಾಗೂ 2019-20ನೇ ಸಾಲಿನ ಕೊಳವೆ ಬಾವಿಗಳನ್ನು ಇತ್ತೀಚೆಗೆ ಕೊರೆಯಿಸಿದ್ದು, ಇವುಗಳನ್ನು ಎಸ್ಕಾಂಗಳಲ್ಲಿ ನೋಂದಾಯಿಸಿ ವಿದ್ಯುದ್ದೀಕರಣ ಗೊಳಿಸುವ ಪ್ರಕ್ರಿಯೆ ಪ್ರಗತಿಯಲ್ಲಿದೆ. |

| ಕೊರೆದ ಕೊಳವೆ ಬಾವಿಗಳು | ವಿದ್ಯುತ್ ಸಂಪರ್ಕ ಕಲ್ಪಿಸಿರುವುದು | ವಿದ್ಯುತ್ ಸಂಪರ್ಕಕ್ಕೆ ಬಾಕಿ |
|---|---|---|
| 9517 | 5906 | 3611 |

ಸಂಖ್ಯೆ:ಹಿಂವಕ 57 ಬಿಎಂಎಸ್ 2021

(ಕೋಟ ಶ್ರೀನಿವಾಸ ಪೂಜಾರಿ)
ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ

# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 623 |
| ಮಾನ್ಯ ಸದಸ್ಯರ ಹೆಸರು | ಶ್ರೀ ಹರ್ಷವರ್ಧನ್ ಬಿ. (ನಂಜನಗೂಡು) |
| ಉತ್ತರಿಸಬೇಕಾದ ದಿನಾಂಕ | 01.02.2021 |
| ಉತ್ತರಿಸುವ ಸಚಿವರು | ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | 2019-20 ಮತ್ತು 2020-21ನೇ ಸಾಲಿನಲ್ಲಿ ರಾಜ್ಯದಲ್ಲಿ ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಗೆ ಬಿಡುಗಡೆಯಾದ ಅನುದಾನವೆಷ್ಟು; ಅನುದಾನವನ್ನು ಯಾವ ಯಾವ ಉದ್ದೇಶಗಳಿಗೆ ಬಳಕೆ ಮಾಡಲಾಗಿದೆ; | ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಗೆ 2019-20 ಮತ್ತು 2020-21ನೇ ಸಾಲಿನಲ್ಲಿ ಬಿಡುಗಡೆಯಾದ ಅನುದಾನದ ವಿವರ ಈ ಕೆಳಕಂಡಂತಿದೆ. |
| ಆ) | ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯಿಂದ ನಡೆಯುತ್ತಿರುವ ಶಾಲೆಗಳು ಮತ್ತು ಹಾಸ್ಟೆಲ್‌ಗಳೆಷ್ಟು; ಅವು ಯಾವುವು; ಹೊಸದಾಗಿ ಶಾಲೆಗಳು ಮತ್ತು ಹಾಸ್ಟೆಲ್‌ಗಳನ್ನು ಪ್ರಾರಂಭಿಸುವ ಉದ್ದೇಶವಿದೆಯೇ; ಹಾಗಿದ್ದಲ್ಲಿ ಯಾವ ಯಾವ ಸ್ಥಳಗಳಲ್ಲಿ ಪ್ರಾರಂಭಿಸಲಾಗುವುದು; | ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖಾ ವತಿಯಿಂದ 1301 ಮೆಟ್ರಿಕ್-ಪೂರ್ವ ಹಾಗೂ 1137 ಮೆಟ್ರಿಕ್-ನಂತರದ ಹೀಗೆ ಒಟ್ಟು 2438 ವಿದ್ಯಾರ್ಥಿನಿಲಯಗಳು ಕಾರ್ಯನಿರ್ವಹಿಸುತ್ತಿದ್ದು, ವಿವರ ಕೆಳಕಂಡಂತಿವೆ. |

(ರೂ. ಲಕ್ಷಗಳಲ್ಲಿ)

| ಕ್ರ ಸಂ | ಆರ್ಥಿಕ ವರ್ಷ | ಬಿಡುಗಡೆಯಾದ ಅನುದಾನ | ವಿನಿಯೋಗಿಸಿದ ಅನುದಾನ |
|---|---|---|---|
| 1 | 2019-20 | 271353.94 | 264387.08 |
| 2 | 2020-21 | 92716.00 (ಡಿಸೆಂಬರ್ ಮಾಹೆಯ ಅಂತ್ಯಕ್ಕೆ) | 45688.50 (ಡಿಸೆಂಬರ್ ಮಾಹೆಯ ಅಂತ್ಯಕ್ಕೆ) |

ಸದರಿ ಅನುದಾನವನ್ನು ಕಾರ್ಯಕ್ರಮ/ಯೋಜನೆವಾರು ವಿನಿಯೋಗಿಸಿರುವ ವಿವರಗಳನ್ನು http://bcwd.karnataka.gov.in/ ರಲ್ಲಿ ನೀಡಲಾಗಿದೆ.

| ಕ್ರ. ಸಂ. | ವಿವರ | ವಿದ್ಯಾರ್ಥಿನಿಲಯಗಳ ಸಂಖ್ಯೆ | | |
|---|---|---|---|---|
| | | ಬಾಲಕರು | ಬಾಲಕಿಯರು | ಒಟ್ಟು |
| 1 | ಮೆಟ್ರಿಕ್-ಪೂರ್ವ ವಿದ್ಯಾರ್ಥಿನಿಲಯಗಳು | 1010 | 291 | 1301 |
| 2 | ಮೆಟ್ರಿಕ್-ನಂತರದ ವಿದ್ಯಾರ್ಥಿನಿಲಯಗಳು | 509 | 628 | 1137 |
| | ಒಟ್ಟು | 1519 | 919 | 2438 |

ಮುಂದುವರೆದು, ಇಲಾಖಾ ವತಿಯಿಂದ 18 ಆಶ್ರಮಶಾಲೆಗಳು ಹಾಗೂ 167 ವಿವಿಧ ವಸತಿಶಾಲೆಗಳು ಕಾರ್ಯನಿರ್ವಹಿಸುತ್ತಿದ್ದು, ವಸತಿಶಾಲೆಗಳ ವಿವರಗಳು ಕೆಳಕಂಡಂತಿದೆ.

| ವಸತಿಶಾಲೆ/ಕಾಲೇಜುಗಳ ವಿವರ | ಸಂಖ್ಯೆ |
|---|---|
| ಮೊರಾರ್ಜಿ ದೇಸಾಯಿ ವಸತಿಶಾಲೆಗಳು | 142 |
| ಮೊರಾರ್ಜಿ ದೇಸಾಯಿ ಪದವಿ ಪೂರ್ವ ವಸತಿ ಕಾಲೇಜುಗಳು | 12 |
| ಇಂದಿರಾಗಾಂಧಿ ವಸತಿಶಾಲೆಗಳು | 8 |
| ಅಟಲ್ ಬಿಹಾರಿ ವಾಜಪೇಯಿ ವಸತಿಶಾಲೆಗಳು | 4 |
| ಮಾಸ್ತಿ ವೆಂಕಟೇಶ ಅಯ್ಯಂಗಾರ್ ವಸತಿಶಾಲೆ | 1 |
| **ಒಟ್ಟು** | **167** |

| | | |
|---|---|---|
| | | ಹೊಸ ವಿದ್ಯಾರ್ಥಿನಿಲಯಗಳ ಮಂಜೂರಾತಿಯು ರಾಜ್ಯದ ಒಟ್ಟಾರೆ ಬೇಡಿಕೆ ಹಾಗೂ ಆಯಾ ಆರ್ಥಿಕ ವರ್ಷದಲ್ಲಿ ಒದಗಿಸಲಾಗುವ ಅನುದಾನದ ಲಭ್ಯತೆಯನ್ನು ಅವಲಂಬಿಸಿರುತ್ತದೆ. |
| ಇ) | 2018-19 ಮತ್ತು 2019-20 ನೇ ಸಾಲಿನಲ್ಲಿ, ಯಾವ ಯಾವ ಮಠಗಳು, ಸಮುದಾಯ ಭವನಗಳು ನಿರ್ಮಾಣ/ದುರಸ್ತಿ ಇತ್ಯಾದಿಗಳಿಗೆ ಅನುದಾನ ಬಿಡುಗಡೆಗೊಳಿಸಲಾಗಿದೆ; ಮಠಗಳು/ಸಮುದಾಯ ಭವನಗಳು ನಿರ್ಮಾಣ; ಇತ್ಯಾದಿ ಕಾಮಗಾರಿಯನ್ನು ಮಂಜೂರು ಮಾಡಲು ಯಾವ ರೀತಿಯ ಮಾನದಂಡವನ್ನು ಅನುಸರಿಸಲಾಗುತ್ತಿದೆ. | 2018-19 ಮತ್ತು 2019-20 ನೇ ಸಾಲಿನಲ್ಲಿ ವಿವಿಧ ಸಂಘ-ಸಂಸ್ಥೆಗಳಿಗೆ ಸಮುದಾಯ ಭವನ/ವಿದ್ಯಾರ್ಥಿ ನಿಲಯ ಕಟ್ಟಡ ನಿರ್ಮಾಣಕ್ಕೆ ಬಿಡುಗಡೆ ಮಾಡಿರುವ ಅನುದಾನ ವಿವರಗಳನ್ನು http://bcwd.karnataka.gov.in/ ರಲ್ಲಿ ನೀಡಲಾಗಿದೆ.<br><br>ಸರ್ಕಾರದ ಆದೇಶ ಸಂಖ್ಯೆ: ಹಿಂವಕ 695 ಬಿಎಂಎಸ್ 2014 (ಭಾ-2), ದಿನಾಂಕ : 05.11.2014 ಮತ್ತು ಸರ್ಕಾರದ ಆದೇಶ ಸಂಖ್ಯೆ : ಹಿಂವಕ 1133 ಬಿಎಂಎಸ್ 2017 ದಿನಾಂಕ: 29.11.2017 ರ ಮಾರ್ಗಸೂಚಿಗಳನ್ವಯ ಮಂಜೂರು ಮಾಡಲಾಗುತ್ತಿದೆ. http://bcwd.karnataka.gov.in/ ರಲ್ಲಿ ನೀಡಲಾಗಿದೆ. |
| ಈ) | ಮೈಸೂರು ಜಿಲ್ಲೆಯಲ್ಲಿ ಮಠಗಳು/ಸಮುದಾಯ ಭವನಗಳು ನಿರ್ಮಾಣ, ದುರಸ್ತಿ, ಇತ್ಯಾದಿ ಕಾಮಗಾರಿಗಳನ್ನು ಮಂಜೂರು ಮಾಡುವ ಪ್ರಸ್ತಾವನೆಯು ಸರ್ಕಾರದ ಮುಂದಿದೆಯೇ ? (ವಿವರ ನೀಡುವುದು) | ಮೈಸೂರು ಜಿಲ್ಲೆಗೆ ಸಂಬಂಧಿಸಿದಂತೆ ಸಮುದಾಯ ಭವನ/ವಿದ್ಯಾರ್ಥಿ ನಿಲಯ ಕಟ್ಟಡ ನಿರ್ಮಾಣಕ್ಕೆ ಸಹಾಯಧನ ಮಂಜೂರಾತಿಗಾಗಿ ಸರ್ಕಾರಕ್ಕೆ ಸಲ್ಲಿಸಿರುವ ಪ್ರಸ್ತಾವನೆಗಳು ಹಾಗೂ ಆಯುಕ್ತಾಲಯದಲ್ಲಿ ಪರಿಶೀಲನೆಯಲ್ಲಿರುವ ಸಂಘ-ಸಂಸ್ಥೆಗಳ ವಿವರಗಳನ್ನು http://bcwd.karnataka.gov.in/ ರಲ್ಲಿ ನೀಡಲಾಗಿದೆ.<br><br>ಸಮುದಾಯ ಭವನ/ವಿದ್ಯಾರ್ಥಿನಿಲಯ ಕಟ್ಟಡ ನಿರ್ಮಾಣ, ಕಾಮಗಾರಿಗಳಿಗೆ ಸಹಾಯಧನ ಮಂಜೂರಾತಿಯು ಆಯಾ ಆರ್ಥಿಕ ವರ್ಷದಲ್ಲಿ ಒದಗಿಸಲಾಗುವ ಅನುದಾನದ ಲಭ್ಯತೆಯನ್ನು ಆಧರಿಸಿರುತ್ತದೆ. |

ಸಂಖ್ಯೆ:ಹಿಂವಕ 58 ಬಿಎಂಎಸ್ 2021

(ಕೋಟ ಶ್ರೀನಿವಾಸ ಪೂಜಾರಿ)
ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ

# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 624 |
| ಮಾನ್ಯ ಸದಸ್ಯರ ಹೆಸರು | ಶ್ರೀ ಬಾಲಕೃಷ್ಣ ಸಿ.ಎನ್ (ಶ್ರವಣಬೆಳಗೊಳ) |
| ಉತ್ತರಿಸಬೇಕಾದ ದಿನಾಂಕ | 01-02-2021 |
| ಉತ್ತರಿಸುವ ಸಚಿವರು | ಮಾನ್ಯ ಮುಜರಾಯಿ ಮತ್ತು ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು |

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಹಿಂದುಳಿದ ವರ್ಗಗಳ ವಿದ್ಯಾರ್ಥಿ ನಿಲಯಗಳಲ್ಲಿ ಪ್ರವೇಶದ ನವೀಕರಣಗೊಳಿಸಿದ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿ ನಿಲಯಗಳು ಪ್ರಾರಂಭವಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ? | ಹೌದು ಹಿಂದುಳಿದ ವರ್ಗಗಳ ವಿದ್ಯಾರ್ಥಿನಿಲಯಗಳಲ್ಲಿ ಎಸ್.ಎಸ್.ಎಲ್.ಸಿ ಮತ್ತು ಮೆಟ್ರಿಕ್ ನಂತರದ ತರಗತಿಗಳ ದ್ವಿತೀಯ ವರ್ಷದಿಂದ ಅಂತಿಮ ವರ್ಷದ (ಮೊದಲನೇ ವರ್ಷದ ವಿದ್ಯಾರ್ಥಿಗಳನ್ನು ಹೊರತುಪಡಿಸಿ) ನವೀಕರಣ ವಿದ್ಯಾರ್ಥಿಗಳಿಗೆ ಪ್ರವೇಶವನ್ನು ಕಲ್ಪಿಸಲಾಗಿರುತ್ತದೆ. ಮೆಟ್ರಿಕ್ ನಂತರದ ಪ್ರಥಮ ವರ್ಷದ ತರಗತಿಗಳಲ್ಲಿ ವ್ಯಾಸಾಂಗ ಮಾಡುತ್ತಿರುವ ವಿದ್ಯಾರ್ಥಿಗಳಿಗೆ ಪ್ರವೇಶಾತಿ ಕಲ್ಪಿಸಲು ಆನ್‌ಲೈನ್ ಮೂಲಕ ಅರ್ಜಿ ಆಹ್ವಾನಿಸಲಾಗಿದೆ. |
| ಆ) | ಹಾಗಿದ್ದಲ್ಲಿ, ಈ ವಿದ್ಯಾರ್ಥಿ ನಿಲಯದಲ್ಲಿ ಹೊರ ಗುತ್ತಿಗೆ ಅಡುಗೆ ಸಿಬ್ಬಂದಿಗಳಿಗೆ ಕೆಲಸ ನಿರ್ವಹಿಸಲು ಅನುಮತಿ ನೀಡದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಇದರಿಂದ ವಿದ್ಯಾರ್ಥಿಗಳಿಗೆ ತುಂಬಾ ತೊಂದರೆಯಾಗುತ್ತಿರುವುದು ನಿಜವೇ? | ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಗೆ ಸಂಬಂಧಿಸಿದಂತೆ, ಕೊವಿಡ್-19 ಹಿನ್ನೆಲೆಯಲ್ಲಿ ಇಲಾಖಾ ವಿದ್ಯಾರ್ಥಿನಿಲಯಗಳನ್ನು ಮುಚ್ಚಲಾಗಿತ್ತು. ಪ್ರಸ್ತುತ ನಿಲಯಗಳನ್ನು ಪುನರಾರಂಭಿಸಲಾಗಿದ್ದು, ವಿದ್ಯಾರ್ಥಿ ನಿಲಯಗಳಿಗೆ ಸಂಬಂಧಿಸಿದಂತೆ, ಇಲಾಖೆಯ ಖಾಯಂ ನೌಕರರನ್ನೇ ಅವಶ್ಯಕತೆಗೆ ತಕ್ಕಂತೆ ಮರುಹೊಂದಾಣಿಕೆ ಮಾಡಿ ವಿದ್ಯಾರ್ಥಿ ನಿಲಯಗಳನ್ನು ನಿರ್ವಹಿಸಲು ಸೂಚಿಸಲಾಗಿತ್ತು. ವಿದ್ಯಾರ್ಥಿ ನಿಲಯಗಳಲ್ಲಿ ಜಿಲ್ಲಾ ಮಟ್ಟದಲ್ಲಿ ಅವಶ್ಯಕತೆಗೆ ಅನುಗುಣವಾಗಿ ಹೊರ ಸಂಪನ್ಮೂಲ ಸಿಬ್ಬಂದಿಗಳ ಸೇವೆಯನ್ನು ಪಡೆಯಲಾಗುತ್ತದೆ. ವಿದ್ಯಾರ್ಥಿಗಳಿಗೆ ಯಾವುದೇ ತೊಂದರೆಯಾಗಿರುವುದಿಲ್ಲ. |

| | | |
|---|---|---|
| ಇ) | ಹೊರ ಗುತ್ತಿಗೆ ಅಡುಗೆ ಸಿಬ್ಬಂದಿಗಳಿಗೆ ಕೆಲಸ ನಿರ್ವಹಿಸಲು ಅನುಮತಿ ನೀಡಲು ಸರ್ಕಾರಕ್ಕಿರುವ ತೊಂದರೆಗಳೇನು? | ನೇರ ನೇಮಕಾತಿ ಮೂಲಕ ಹುದ್ದೆಗಳನ್ನು ಭರ್ತಿ ಮಾಡಿದ ಕಾರಣದಿಂದ ಆ ಸ್ಥಳದಲ್ಲಿ ಹೊರಸಂಪನ್ಮೂಲ ಏಜೆನ್ಸಿ ಮೂಲಕ ಕಾರ್ಯನಿರ್ವಹಿಸುತ್ತಿದ್ದ ಹೊರಸಂಪನ್ಮೂಲ ಸಿಬ್ಬಂದಿಗಳನ್ನು 2018-19ನೇ ಸಾಲಿನಲ್ಲಿ ಬಿಡುಗಡೆಗೊಳಿಸಲಾಗಿತ್ತು. ನಂತರ ಮಾನವೀಯತೆ ದೃಷ್ಟಿಯಿಂದ ಸದರಿಯವರನ್ನು ಸರ್ಕಾರದ ಆದೇಶ ದಿನಾಂಕ:23.10.2018, 01.02.2019 ರಂತೆ ದಿ:05.08.2018 ರಿಂದ 07.06.2019ರವರೆಗೆ ಮಾತ್ರ ಮುಂದುವರೆಸಲಾಗಿರುತ್ತದೆ. ಪ್ರಸ್ತುತ ಸರ್ಕಾರದ ಸುತ್ತೋಲೆ ಸಂಖ್ಯೆ: ಆಇ 03 ಬಿಇಎಂ 2020, ದಿನಾಂಕ: 06.07.2020ರನ್ವಯ ಎಲ್ಲಾ ಹುದ್ದೆಗಳ ನೇಮಕಾತಿಗಳನ್ನು ತಡೆ ಹಿಡಿಯಲಾಗಿದೆ. |
| ಈ) | ಸಮಾಜ ಕಲ್ಯಾಣ ಇಲಾಖೆಯ ವಿದ್ಯಾರ್ಥಿ ನಿಲಯಗಳಲ್ಲಿ ಹೊರ ಗುತ್ತಿಗೆ ಸಿಬ್ಬಂದಿಗಳಿಗೆ ಕೆಲಸ ನೀಡಲು ಅನುಮತಿ ನೀಡಲಾಗಿದ್ದು, ಈ ಸಿಬ್ಬಂದಿಗಳಿಗೆ ಅನುಮತಿ ನೀಡದಿರಲು ಕಾರಣಗಳೇನು? | ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಗೆ ಸಂಬಂಧಿಸಿದಂತೆ, ಕೊವಿಡ್-19 ಹಿನ್ನೆಲೆಯಲ್ಲಿ ಇಲಾಖಾ ವಿದ್ಯಾರ್ಥಿನಿಲಯಗಳನ್ನು ಮುಚ್ಚಲಾಗಿತ್ತು. ಪ್ರಸ್ತುತ ನಿಲಯಗಳನ್ನು ಪುನರಾರಂಭಿಸಲಾಗಿದ್ದು, ಅವಶ್ಯಕತೆಗೆ ಅನುಗುಣವಾಗಿ ಹೊರಸಂಪನ್ಮೂಲ ಸಿಬ್ಬಂದಿಗಳ ಸೇವೆಯನ್ನು ಪಡೆಯಲಾಗುತ್ತದೆ. |

ಬಿಸಿಡಬ್ಲ್ಯೂ 11 ಆರ್.ಐ 2021

(ಕೋಟ ಶ್ರೀನಿವಾಸ ಪೂಜಾರಿ)
ಮುಜರಾಯಿ ಮತ್ತು ಹಿಂದುಳಿದ
ವರ್ಗಗಳ ಕಲ್ಯಾಣ ಸಚಿವರು

# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 625 |
| ಮಾನ್ಯ ಸದಸ್ಯರ ಹೆಸರು | ಶ್ರೀ ಸುಕುಮಾರ್ ಶೆಟ್ಟಿ ಬಿ.ಎಂ (ಬೈಂದೂರು) |
| ಉತ್ತರಿಸಬೇಕಾದ ದಿನಾಂಕ | 01.02.2021 |
| ಉತ್ತರಿಸುವ ಸಚಿವರು | ಮಾನ್ಯ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು. |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಉಡುಪಿ ಜಿಲ್ಲೆಯಲ್ಲಿ ಇರುವ ಹಿಂದುಳಿದ ವರ್ಗಗಳ ವಸತಿನಿಲಯಗಳು ಹಾಗೂ ಮಂಜೂರಾದ ಸೀಟುಗಳೆಷ್ಟು; (ವಸತಿ ನಿಲಯವಾರು ಸಂಪೂರ್ಣ ವಿವರ ಒದಗಿಸುವುದು) | ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖಾ ವತಿಯಿಂದ ಉಡುಪಿ ಜಿಲ್ಲೆಯಲ್ಲಿ ಒಟ್ಟು 41 ವಿದ್ಯಾರ್ಥಿನಿಲಯಗಳು ಕಾರ್ಯನಿರ್ವಹಿಸುತ್ತಿರುತ್ತವೆ. ಈ ವಿದ್ಯಾರ್ಥಿನಿಲಯಗಳಲ್ಲಿರುವ ಒಟ್ಟು ಮಂಜೂರಾತಿ ಸಂಖ್ಯೆ 3505.<br>ವಸತಿನಿಲಯವಾರು ವಿವರಗಳನ್ನು ಅನುಬಂಧದಲ್ಲಿ ನೀಡಲಾಗಿದೆ. |
| ಆ | ಉಡುಪಿಯಲ್ಲಿ ಪಿಯುಸಿ ಮತ್ತು ಪದವಿ ಶಿಕ್ಷಣ ಪಡೆಯಲು ಗ್ರಾಮೀಣ ಭಾಗದ ಹೆಚ್ಚು ಬಡ ವಿದ್ಯಾರ್ಥಿಗಳು ಕಾಲೇಜುಗಳಿಗೆ ದಾಖಲಾತಿ ಆಗುತ್ತಿರುವ ಸಂಖ್ಯೆಗೆ ಅನುಗುಣವಾಗಿ ಹಿಂದುಳಿದ ವರ್ಗಗಳ ವಸತಿನಿಲಯಗಳಲ್ಲಿ ಸೀಟುಗಳ ಸಂಖ್ಯೆ ಹೆಚ್ಚಿಸುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ? | ಗ್ರಾಮೀಣ ವಿದ್ಯಾರ್ಥಿಗಳ ಶೈಕ್ಷಣಿಕ ಹಿತದೃಷ್ಟಿಯಿಂದ ಹೆಚ್ಚಿನ ವಿದ್ಯಾರ್ಥಿಗಳಿಗೆ ಪ್ರವೇಶಾವಕಾಶ ಕಲ್ಪಿಸುವ ದೃಷ್ಟಿಯಿಂದ ಸರ್ಕಾರದ ಆದೇಶ ಸಂಖ್ಯೆ ಹಿಂವಕ 352 ಬಿಎಂಎಸ್ 2019, ದಿನಾಂಕ 20.1.2020ರಲ್ಲಿ ರಾಜ್ಯದ ವಿವಿಧ ಮೆಟ್ರಿಕ್-ನಂತರದ ವಿದ್ಯಾರ್ಥಿನಿಲಯಗಳಲ್ಲಿ ಸಂಖ್ಯಾಬಲ ಹೆಚ್ಚಳ ಮಾಡಲಾಗಿದ್ದು, ಉಡುಪಿ ಜಿಲ್ಲೆಯಲ್ಲಿನ ಉಡುಪಿ ಮತ್ತು ಕುಂದಾಪುರ ತಾಲ್ಲೂಕಿನ 5 ಮೆಟ್ರಿಕ್-ನಂತರದ ವಿದ್ಯಾರ್ಥಿನಿಲಯಗಳಲ್ಲಿ ತಲಾ 20 ರಂತೆ ಸಂಖ್ಯಾಬಲವನ್ನು ಹೆಚ್ಚಿಸಲಾಗಿರುತ್ತದೆ.<br>ಮುಂದುವರೆದು, ಮೆಟ್ರಿಕ್-ನಂತರದ ವಿದ್ಯಾರ್ಥಿನಿಲಯಗಳಲ್ಲಿ ಪ್ರವೇಶ ದೊರಕದ ಅರ್ಹ ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳಿಗೆ ಪರ್ಯಾಯವಾಗಿ ಅನುದಾನದ ಲಭ್ಯತೆಯನುಸಾರ ವಿದ್ಯಾಸಿರಿ ಯೋಜನೆಯಡಿ ಪ್ರತಿ ಮಾಹೆ ರೂ.1500/- ರಂತೆ ಗರಿಷ್ಠ 10 ತಿಂಗಳಿಗೆ ರೂ.15,000/- ಗಳನ್ನು ಮಂಜೂರು ಮಾಡಲಾಗುತ್ತದೆ. |

ಸಂಖ್ಯೆ:ಹಿಂವಕ 63 ಬಿಎಂಎಸ್ 2021

(ಕೋಟ ಶ್ರೀನಿವಾಸ ಪೂಜಾರಿ)
ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ

ಮಾನ್ಯ ವಿಧಾನಸಭಾ ಸದಸ್ಯರಾದ ಶ್ರೀ ಸುಕುಮಾರ್ ಶೆಟ್ಟಿ, ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂ.625(ಅ)ಕ್ಕೆ ಅನುಬಂಧ

**ಉಡುಪಿ ಜಿಲ್ಲೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಹಿಂದುಳಿದ ವರ್ಗಗಳ ವಿದ್ಯಾರ್ಥಿನಿಲಯಗಳ ಹಾಗೂ ವಿದ್ಯಾರ್ಥಿಗಳ ಮಂಜೂರಾತಿ ಸಂಖ್ಯೆಯ ವಿವರ**

| ಕ್ರ.ಸಂ. | ವಿದ್ಯಾರ್ಥಿ ನಿಲಯದ ಹೆಸರು | ಮಂಜೂರಾತಿ ಸಂಖ್ಯೆ |
|---|---|---|
| | **ಉಡುಪಿ ತಾಲೂಕು** | |
| 1 | ಮೆಟ್ರಿಕ್ ಪೂರ್ವ ಬಾಲಕರ ನಿಲಯ ಬನ್ನಂಜೆ ಉಡುಪಿ | 60 |
| 2 | ಮೆಟ್ರಿಕ್ ಪೂರ್ವ ಬಾಲಕರ ನಿಲಯ ಬೆಳ್ಳಂಪಳ್ಳಿ ಉಡುಪಿ. | 45 |
| 3 | ಮೆಟ್ರಿಕ್ ಪೂರ್ವ ಬಾಲಕರ ನಿಲಯ ಪೆರ್ಡೂರು ಉಡುಪಿ. | 60 |
| 4 | ಮೆಟ್ರಿಕ್ ಪೂರ್ವ ಬಾಲಕರ ನಿಲಯ ಕುದಿ ಉಡುಪಿ | 65 |
| 5 | ಮೆಟ್ರಿಕ್ ಪೂರ್ವ ಬಾಲಕರ ನಿಲಯ ಗೋಳಿಯಂಗಡಿ. | 100 |
| 6 | ಮೆಟ್ರಿಕ್ ಪೂರ್ವ ಬಾಲಕಿಯರ ನಿಲಯ ಪಟ್ಲ, ಉಡುಪಿ | 60 |
| 7 | ಮೆಟ್ರಿಕ್ ಪೂರ್ವ ಬಾಲಕಿಯರ ನಿಲಯ ಬ್ರಹ್ಮಾವರ ಉಡುಪಿ | 60 |
| 8 | ಮೆಟ್ರಿಕ್ ನಂತರದ ಬಾಲಕರ ನಿಲಯ ಹಿರಿಯಡ್ಕ ಉಡುಪಿ | 100 |
| 9 | ಮೆಟ್ರಿಕ್ ನಂತರದ ಬಾಲಕರ ನಿಲಯ ಕಾಪು. ಉಡುಪಿ | 100 |
| 10 | ಮೆಟ್ರಿಕ್ ನಂತರದ ಬಾಲಕರ ನಿಲಯ 76 ಬಡಗಬೆಟ್ಟು. | 100 |
| 11 | ಮೆಟ್ರಿಕ್ ನಂತರದ ಬಾಲಕರ ನಿಲಯ ಬಲಾಯಿಪಾದೆ ಉಡುಪಿ | 100 |
| 12 | ಮೆಟ್ರಿಕ್ ನಂತರದ ಬಾಲಕರನಿಲಯ ಅಂಬಾಗಿಲು (ಪಾಪಡಿ). | 100 |
| 13 | ಮೆಟ್ರಿಕ್ ನಂತರದ ಬಾಲಕಿಯರ ನಿಲಯ ಬನ್ನಂಜೆ. ಉಡುಪಿ | 145 |
| 14 | ಮೆಟ್ರಿಕ್ ನಂತರದ ಬಾಲಕಿಯರ ನಿಲಯ (ವೃತ್ತಿಪರ) ಉಡುಪಿ | 145 |
| 15 | ಮೆಟ್ರಿಕ್ ನಂತರದ ಬಾಲಕಿಯರ ನಿಲಯ ಮಣಿಪಾಲ. | 100 |
| 16 | ಮೆಟ್ರಿಕ್ ನಂತರದ ಬಾಲಕಿಯರ ನಿಲಯ ಆದಿಉಡುಪಿ. | 100 |
| 17 | ಮೆಟ್ರಿಕ್ ನಂತರದ ಬಾಲಕಿಯರ ನರ್ಸಿಂಗ್ ನಿಲಯ. ಉಡುಪಿ | 100 |
| 18 | ಮೆಟ್ರಿಕ್ ನಂತರದ ಬಾಲಕಿಯರ ನಿಲಯ ಬಾರಕೂರು ಉಡುಪಿ | 100 |
| 19 | ಮೆಟ್ರಿಕ್ ನಂತರದ ಬಾಲಕಿಯರ ನಿಲಯ ಕಿನ್ನಿಮುಲ್ಕಿ ಉಡುಪಿ | 120 |
| | **ಒಟ್ಟು** | **1760** |
| | **ಕುಂದಾಪುರ ತಾಲೂಕು** | |
| 20 | ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿ ನಿಲಯ ಕುಂದಾಪುರ | 50 |
| 21 | ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿ ನಿಲಯ ಬಸ್ರೂರು | 60 |
| 22 | ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿ ನಿಲಯ ನಾವುಂದ | 50 |
| 23 | ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿ ನಿಲಯ ವಂಡಾರು | 55 |
| 24 | ಮೆಟ್ರಿಕ್ ಪೂರ್ವ ಬಾಲಕಿಯರ ವಿದ್ಯಾರ್ಥಿ ನಿಲಯ ಕುಂದಾಪುರ ಟೌನ್ | 50 |
| 25 | ಮೆಟ್ರಿಕ್ ಪೂರ್ವ ಬಾಲಕಿಯರ ವಿದ್ಯಾರ್ಥಿ ನಿಲಯ ಕೋಡೂರು | 45 |
| 26 | ಮೆಟ್ರಿಕ್ ಪೂರ್ವ ಬಾಲಕಿಯರ ವಿದ್ಯಾರ್ಥಿ ನಿಲಯ ಅಮಾಸೆಬೈಲು | 50 |

# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 626 |
| ಮಾನ್ಯ ಸದಸ್ಯರ ಹೆಸರು | ಶ್ರೀ ಸುಕುಮಾರ್ ಶೆಟ್ಟಿ ಬಿ.ಎಂ (ಬೈಂದೂರು) |
| ಉತ್ತರಿಸಬೇಕಾದ ದಿನಾಂಕ | 01.02.2021 |
| ಉತ್ತರಿಸುವ ಸಚಿವರು | ಮಾನ್ಯ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು. |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಉಡುಪಿ ಜಿಲ್ಲೆಯಲ್ಲಿ ಶಾಲಾ-ಕಾಲೇಜುಗಳು ಪ್ರಾರಂಭವಾಗುತ್ತಿದ್ದು, ವಸತಿನಿಲಯಗಳಲ್ಲಿ ವಿದ್ಯಾರ್ಥಿಗಳಿಗೆ ಸೀಟು ದೊರಕದೇ ಗ್ರಾಮೀಣ ಭಾಗದ ಬಡ ವಿದ್ಯಾರ್ಥಿಗಳು ತೊಂದರೆ ಅನುಭವಿಸುತ್ತಿರುವುದನ್ನು ಸರಿಪಡಿಸಲು ಸರ್ಕಾರದ ತೆಗೆದುಕೊಂಡ ಕ್ರಮಗಳೇನು; | ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖಾ ವತಿಯಿಂದ ಉಡುಪಿ ಜಿಲ್ಲೆಯಲ್ಲಿ ಒಟ್ಟು 41 ವಿದ್ಯಾರ್ಥಿನಿಲಯಗಳು ಕಾರ್ಯನಿರ್ವಹಿಸುತ್ತಿದ್ದು, ಒಟ್ಟು 3505 ವಿದ್ಯಾರ್ಥಿಗಳಿಗೆ ಪ್ರವೇಶಾವಕಾಶದ ಸೌಲಭ್ಯವನ್ನು ಕಲ್ಪಿಸಲಾಗಿರುತ್ತದೆ.<br><br>2020-21ನೇ ಸಾಲಿನ ಶೈಕ್ಷಣಿಕ ವರ್ಷದಲ್ಲಿ ಈವರೆವಿಗೆ ಪೂರ್ಣ ಪ್ರಮಾಣದಲ್ಲಿ ಶಾಲಾ ಕಾಲೇಜುಗಳು ಪ್ರಾರಂಭವಾಗದಿರುವುದರಿಂದ, ಹಿಂದುಳಿದ ವರ್ಗಗಳ ವಿದ್ಯಾರ್ಥಿನಿಲಯಗಳಲ್ಲಿ ಎಸ್.ಎಸ್.ಎಲ್.ಸಿ ಮತ್ತು ಪದವಿ ಹಾಗೂ ಸ್ನಾತಕೋತ್ತರ (ಮೊದಲನೇ ವರ್ಷದ ವಿದ್ಯಾರ್ಥಿಗಳನ್ನು ಹೊರತುಪಡಿಸಿ) ನವೀಕರಣ ವಿದ್ಯಾರ್ಥಿಗಳಿಗೆ ಪ್ರವೇಶವನ್ನು ಕಲ್ಪಿಸಲಾಗಿರುತ್ತದೆ.<br><br>2018-19ನೇ ಸಾಲಿನಲ್ಲಿ ಉಡುಪಿ ಜಿಲ್ಲೆಯ ಉಡುಪಿ ಮತ್ತು ಕುಂದಾಪುರ ತಾಲ್ಲೂಕಿನ 7 ಮೆಟ್ರಿಕ್-ಪೂರ್ವ ಬಾಲಕರ ಹಾಗೂ ಬಾಲಕಿಯರ ವಿದ್ಯಾರ್ಥಿನಿಲಯಗಳಲ್ಲಿ ಒಟ್ಟು 140 ಸಂಖ್ಯಾಬಲವನ್ನು ಹೆಚ್ಚಿಸಲಾಗಿರುತ್ತದೆ.<br><br>2019-20ನೇ ಸಾಲಿನಲ್ಲಿ ರಾಜ್ಯದ ವಿವಿಧ ಮೆಟ್ರಿಕ್-ನಂತರದ ವಿದ್ಯಾರ್ಥಿನಿಲಯಗಳಲ್ಲಿ ಸಂಖ್ಯಾಬಲ ಹೆಚ್ಚಳ ಮಾಡಲಾಗಿದ್ದು, ಉಡುಪಿ ಜಿಲ್ಲೆಯಲ್ಲಿನ ಉಡುಪಿ ಮತ್ತು ಕುಂದಾಪುರ ತಾಲ್ಲೂಕಿನ 5 ಮೆಟ್ರಿಕ್-ನಂತರದ ವಿದ್ಯಾರ್ಥಿನಿಲಯಗಳಲ್ಲಿ ತಲಾ 20 ರಂತೆ ಸಂಖ್ಯಾಬಲವನ್ನು ಹೆಚ್ಚಿಸಲಾಗಿರುತ್ತದೆ. ಅಲ್ಲದೆ ಮೆಟ್ರಿಕ್-ನಂತರದ ವಿದ್ಯಾರ್ಥಿನಿಲಯಗಳಲ್ಲಿ ಪ್ರವೇಶ ದೊರಕದ ಅರ್ಹ ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳಿಗೆ ಅನುದಾನದ ಲಭ್ಯತೆಯನುಸಾರ ವಿದ್ಯಾಸಿರಿ ಯೋಜನೆಯಡಿ ಪ್ರತಿ ಮಾಹೆ ರೂ.1500/- ರಂತೆ ಗರಿಷ್ಠ 10 ತಿಂಗಳಿಗೆ ರೂ.15,000/- ಗಳನ್ನು ಮಂಜೂರು ಮಾಡಲಾಗುತ್ತದೆ. |

| | | |
|---|---|---|
| ಆ | ಉಡುಪಿ ಜಿಲ್ಲೆಯ ಕೆಲವು ಹಾಸ್ಟೆಲ್ ಗಳಲ್ಲಿ ಹೆಚ್ಚು ವಿದ್ಯಾರ್ಥಿಗಳು ಅರ್ಜಿ ಸಲ್ಲಿಸಿ ಹಾಸ್ಟೆಲ್ ಸೀಟು ಸಿಗದೇ ವಿದ್ಯಾರ್ಥಿಗಳು ಕಷ್ಟಪಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು. |
| ಇ | ಬಂದಿದ್ದಲ್ಲಿ, ಬೇಡಿಕೆ ಇರುವ ಹಾಸ್ಟೆಲ್ ಗಳಲ್ಲಿ ಸೀಟುಗಳನ್ನು ಹೆಚ್ಚಿಸಲು ಸರ್ಕಾರ ತೆಗೆದುಕೊಂಡ ಕ್ರಮಗಳೇನು? | ಗ್ರಾಮೀಣ ವಿದ್ಯಾರ್ಥಿಗಳ ಶೈಕ್ಷಣಿಕ ಹಿತದೃಷ್ಟಿಯಿಂದ ಹೆಚ್ಚಿನ ವಿದ್ಯಾರ್ಥಿಗಳಿಗೆ ಪ್ರವೇಶಾವಕಾಶ ಕಲ್ಪಿಸುವ ದೃಷ್ಟಿಯಿಂದ ಸರ್ಕಾರದ ಆದೇಶ ಸಂಖ್ಯೆ ಹಿಂವಕ 352 ಬಿಎಂಎಸ್ 2019, ದಿನಾಂಕ 20.1.2020ರಲ್ಲಿ ರಾಜ್ಯದ ವಿವಿಧ ಮೆಟ್ರಿಕ್-ನಂತರದ ವಿದ್ಯಾರ್ಥಿನಿಲಯಗಳಲ್ಲಿ ಸಂಖ್ಯಾಬಲ ಹೆಚ್ಚಳ ಮಾಡಲಾಗಿದ್ದು, ಉಡುಪಿ ಜಿಲ್ಲೆಯಲ್ಲಿನ ಉಡುಪಿ ಮತ್ತು ಕುಂದಾಪುರ ತಾಲ್ಲೂಕಿನ 5 ಮೆಟ್ರಿಕ್-ನಂತರದ ವಿದ್ಯಾರ್ಥಿನಿಲಯಗಳಲ್ಲಿ ತಲಾ 20 ರಂತೆ ಸಂಖ್ಯಾಬಲವನ್ನು ಹೆಚ್ಚಿಸಲಾಗಿರುತ್ತದೆ.<br><br>ಮುಂದುವರೆದು, ಮೆಟ್ರಿಕ್-ನಂತರದ ವಿದ್ಯಾರ್ಥಿನಿಲಯಗಳಲ್ಲಿ ಪ್ರವೇಶ ದೊರಕದ ಅರ್ಹ ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳಿಗೆ ಪರ್ಯಾಯವಾಗಿ ಅನುದಾನದ ಲಭ್ಯತೆಯನುಸಾರ ವಿದ್ಯಾಸಿರಿ ಯೋಜನೆಯಡಿ ಪ್ರತಿ ಮಾಹೆ ರೂ.1500/- ರಂತೆ ಗರಿಷ್ಠ 10 ತಿಂಗಳಿಗೆ ರೂ.15,000/- ಗಳನ್ನು ಮಂಜೂರು ಮಾಡಲಾಗುತ್ತದೆ. |

ಸಂಖ್ಯೆ:ಹಿಂವಕ 64 ಬಿಎಂಎಸ್ 2021

(ಕೋಟ ಶ್ರೀನಿವಾಸ ಪೂಜಾರಿ)
ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ

# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 876 |
| ಮಾನ್ಯ ಸದಸ್ಯರ ಹೆಸರು | ಶ್ರೀ ಮುನಿಯಪ್ಪ. ವಿ. (ಶಿಡ್ಲಘಟ್ಟ) |
| ಉತ್ತರಿಸಬೇಕಾದ ದಿನಾಂಕ | 01.02.2021 |
| ಉತ್ತರಿಸುವ ಸಚಿವರು | ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | 2020-21ನೇ ಸಾಲಿನಲ್ಲಿ ಚಿಕ್ಕಬಳ್ಳಾಪುರ ಜಿಲ್ಲೆಗೆ ಡಿ.ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮದಿಂದ ಗಂಗಾ ಕಲ್ಯಾಣ ಮತ್ತು ಸ್ವಯಂ ಉದ್ಯೋಗ ಯೋಜನೆಯಡಿಯಲ್ಲಿ ಅನುದಾನ ಬಿಡುಗಡೆ ಮಾಡದೇ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಹಾಗಿದ್ದಲ್ಲಿ, ಕಾರಣಗಳೇನು; | ಹೌದು<br>ಡಿ.ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮಕ್ಕೆ 2020-21ನೇ ಸಾಲಿಗೆ ಆಯವ್ಯಯದಲ್ಲಿ 80.00 ಕೋಟಿಗಳನ್ನು ಒದಗಿಸಿದೆ. ಈ ಮೊತ್ತದಲ್ಲಿ ಕಳೆದ ಸಾಲಿನಲ್ಲಿ ಗಂಗಾ ಕಲ್ಯಾಣ ಯೋಜನೆಗೆ ಆಯವ್ಯಯ ಕಡಿತ ಮಾಡಿದ ಮೊತ್ತ ರೂ.60.00 ಕೋಟಿಗಳನ್ನು ಹೊಂದಾಣಿಕೆ ಮಾಡಿದ ಉಳಿಕೆ ರೂ.20.00 ಕೋಟಿಗಳಲ್ಲಿ ಅರಿವು ಶೈಕ್ಷಣಿಕ ಸಾಲ ಯೋಜನೆಗೆ ಸಾಲ ಪಡೆದ ವಿದ್ಯಾರ್ಥಿಗಳಿಗೆ 2,3,4ನೇ ಕಂತುಗಳ ಮೊತ್ತ ಬಿಡುಗಡೆ ಮಾಡಲು ರೂ.17.50 ಕೋಟಿಗಳನ್ನು ನಿಗದಿಪಡಿಸಿದೆ ಹಾಗೂ 2020-21ನೇ ಆಯವ್ಯಯ ಭಾಷಣದ ಕಂಡಿಕೆ 90 ರಲ್ಲಿ ಘೋಷಿಸಿದಂತೆ ಆನ್‌ಲೈನ್ ಮೂಲಕ ಉತ್ಪನ್ನಗಳನ್ನು ಸರಬರಾಜು ಮಾಡುವ 1000 ಅಭ್ಯರ್ಥಿಗಳಿಗೆ ಬೈಕ್ ಕೊಳ್ಳಲು ಸಹಾಯ ಧನ ಮಂಜೂರಾತಿಗೆ ರೂ.2.50 ಕೋಟಿಗಳನ್ನು ಹಂಚಿಕೆ ಮಾಡಿದೆ.<br>ಅನುದಾನ ಲಭ್ಯವಿಲ್ಲದ ಕಾರಣ 2020-21ನೇ ಸಾಲಿನಲ್ಲಿ ಸ್ವಯಂ ಉದ್ಯೋಗ ಸಾಲ ಯೋಜನೆ ಹಾಗೂ ಗಂಗಾ ಕಲ್ಯಾಣ ನೀರಾವರಿ ಯೋಜನೆಯನ್ನು ಅನುಷ್ಠಾನಗೊಳಿಸುತ್ತಿರುವುದಿಲ್ಲ. ಕೋವಿಡ್-19 ಸಾಂಕ್ರಾಮಿಕ ರೋಗದ ಹಿನ್ನೆಲೆಯಲ್ಲಿ ಕ್ಲಿಷ್ಟ ಆರ್ಥಿಕ ಸನ್ನಿವೇಶ ಇರುವುದರಿಂದ ಅನುದಾನವನ್ನು ಸೀಮಿತಗೊಳಿಸಲಾಗಿದೆ. |
| ಆ) | ಈ ಯೋಜನೆಯಡಿಯಲ್ಲಿ ಫಲಾನುಭವಿಗಳು ಸಾಲ ಮಂಜೂರಾತಿಗೆ ಹೆಚ್ಚಿನ ಸಂಖ್ಯೆಯಲ್ಲಿ ಅರ್ಜಿ ಸಲ್ಲಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಹಾಗಿದ್ದಲ್ಲಿ, ಫಲಾನುಭವಿಗಳ ಗುರಿಯನ್ನು ಹೆಚ್ಚಿಸಲು ಸರ್ಕಾರ ತೆಗೆದುಕೊಂಡಿರುವ ಕ್ರಮವೇನು; | ಹೌದು<br>ಕೋವಿಡ್-19 ಸಾಂಕ್ರಾಮಿಕ ರೋಗದ ಹಿನ್ನೆಲೆಯಲ್ಲಿ ಕ್ಲಿಷ್ಟ ಆರ್ಥಿಕ ಸನ್ನಿವೇಶ ಇರುವುದರಿಂದ ಅನುದಾನವನ್ನು ಸೀಮಿತಗೊಳಿಸಿರುವುದರಿಂದ 2020-21ನೇ ಸಾಲಿಗೆ ಫಲಾನುಭವಿಗಳ ಗುರಿಯನ್ನು ನಿಗದಿಪಡಿಸಲು ಸಾಧ್ಯವಾಗಿರುವುದಿಲ್ಲ. |
| ಇ) | ಫಲಾನುಭವಿಗಳಿಗೆ ನೀಡುತ್ತಿರುವ ಸಾಲದ ಹಣ ಮತ್ತು ಸಹಾಯ ಧನವನ್ನು ಹೆಚ್ಚಿಸುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; | ಹೌದು. |

| | | |
|---|---|---|
| ಈ) | ಶಿಡ್ಲಘಟ್ಟ ವಿಧಾನ ಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಸುಮಾರು 1500-1600 ಅಡಿಗಳ ಕೊಳವೆ ಬಾವಿ ಕೊರೆದರು ಸಹ ನೀರು ಸಿಗದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿರುವುದಿಲ್ಲ. |
| ಉ) | ಹಾಗಿದ್ದಲ್ಲಿ, ಸದರಿ ನಿಗಮದಿಂದ ಗಂಗಾ ಕಲ್ಯಾಣ ಯೋಜನೆಯಡಿಯಲ್ಲಿ 1500-1600 ಅಡಿಗಳು ಕೊಳವೆ ಬಾವಿ ಕೊರೆಸಲು ಅವಕಾಶವಿದೆಯೇ. | ಇಲ್ಲ. |
| ಊ) | ಗಂಗಾ ಕಲ್ಯಾಣ ಯೋಜನೆಯಡಿಯಲ್ಲಿ ಕೊರೆದಿರುವ ಫಲಾನುಭವಿಗಳ ಕೊಳವೆ ಬಾವಿಗಳಿಗೆ ನೀಡುತ್ತಿರುವ ಹಣ ಮತ್ತು ಸಹಾಯ ಧನವನ್ನು ಹೆಚ್ಚಿಸುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; | ಹೌದು. |
| ಋ) | ಹಾಗಿದ್ದಲ್ಲಿ, ಈ ಬಗ್ಗೆ ಸರ್ಕಾರ ತೆಗೆದುಕೊಂಡಿರುವ ಕ್ರಮವೇನು? | ಪ್ರಸ್ತುತ ಚಿಕ್ಕಬಳ್ಳಾಪುರ, ಕೋಲಾರ, ಬೆಂಗಳೂರು ನಗರ, ಬೆಂಗಳೂರು ಗ್ರಾಮಾಂತರ, ರಾಮನಗರ ಹಾಗೂ ತುಮಕೂರು ಜಿಲ್ಲೆಗಳಿಗೆ ನಿಗದಿಪಡಿಸಿರುವ ಘಟಕ ವೆಚ್ಚದ ಸಹಾಯಧನ ಮೊತ್ತವನ್ನು ರೂ.3.50 ಲಕ್ಷಗಳಿಂದ ರೂ.4.00 ಲಕ್ಷಗಳಿಗೆ ಹಾಗೂ ಉಳಿದ 24 ಜಿಲ್ಲೆಗಳಿಗೆ ರೂ.2.00 ಲಕ್ಷಗಳಿಂದ ರೂ.3.00 ಲಕ್ಷಗಳಿಗೆ ಹೆಚ್ಚಿಸುವ ಕುರಿತಂತೆ ಪ್ರಸ್ತಾವನೆ ಸರ್ಕಾರದ ಪರಿಶೀಲನೆಯಲ್ಲಿ ಇದೆ. |

ಸಂಖ್ಯೆ:ಹಿಂವಕ 61 ಬಿಎಂಎಸ್ 2021

(ಕೋಟ ಶ್ರೀನಿವಾಸ ಪೂಜಾರಿ)
ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ

## ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 2 |
| ಸದಸ್ಯರ ಹೆಸರು | ಶ್ರೀ ಆನಂದ್ ಸಿದ್ದು ನ್ಯಾಮಗೌಡ (ಜಮಖಂಡಿ) |
| ಉತ್ತರಿಸ್ಬುವ ದಿನಾಂಕ | 01.02.2021 |
| ಉತ್ತರಿಸುವ ಸಚಿವರು | ಕೃಷಿ ಸಚಿವರು |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಕಳೆದ ಮೂರು ವರ್ಷಗಳಿಂದ ರಾಜ್ಯದಲ್ಲಿ ಕಳಪೆ ಬೀಜ ವಿತರಣೆಯಾಗಿರುವ ಸಂಬಂಧ ಸರ್ಕಾರಕ್ಕೆ ವರದಿಯಾಗಿರುವ ದೂರುಗಳ ಸಂಖ್ಯೆಯೆಷ್ಟು; | ಕಳೆದ ಮೂರು ವರ್ಷಗಳಿಂದ ರಾಜ್ಯದಲ್ಲಿ ಕಳಪೆ ಬೀಜ ವಿತರಣೆಯಾಗಿರುವ ಸಂಬಂಧ ಸರ್ಕಾರಕ್ಕೆ ವರದಿಯಾಗಿರುವ ದೂರುಗಳ ಸಂಖ್ಯೆ:127. |
| ಆ | ಸದರಿ ದೂರಿನನ್ವಯ ದಾಖಲಾಗಿರುವ ಪ್ರಕರಣಗಳೆಷ್ಟು;(ಜಿಲ್ಲಾವಾರು ಮಾಹಿತಿ ನೀಡುವುದು) | ಸದರಿ ದೂರಿನನ್ವಯ ದಾಖಲಾಗಿರುವ ಪ್ರಕರಣಗಳ ಸಂಖ್ಯೆ:94. ಜಿಲ್ಲಾವಾರು ಮಾಹಿತಿ ಅನುಬಂಧದಲ್ಲಿ ನೀಡಿದೆ |
| ಇ | ಅಂತಹವರ ವಿರುದ್ಧ ಸರ್ಕಾರ ಕೈಗೊಂಡಿರುವ ಕ್ರಮಗಳೇನು? | ವಿವಿಧ ಹಂತದಲ್ಲಿರುವ ಕ್ರಮಗಳ ಜಿಲ್ಲಾವಾರು ಮಾಹಿತಿ ಅನುಬಂಧದಲ್ಲಿ ನೀಡಿದೆ. |

**ಸಂಖ್ಯೆ: AGRI-ACT/11/2021**

(ಬಿ.ಸಿ. ಪಾಟೀಲ್)
ಕೃಷಿ ಸಚಿವರು

2

# ಅನುಬಂಧ

## ಕಳೆದ ಮೂರು ವರ್ಷಗಳಿಂದ ರಾಜ್ಯದಲ್ಲಿ ಕಳಪೆ ಬೀಜ ವಿತರಣೆಯಾಗಿರುವ ಸಂಬಂಧ ಸರ್ಕಾರಕ್ಕೆ ವರದಿಯಾಗಿರುವ ದೂರುಗಳ ಹಾಗೂ ದೂರಿನನ್ವಯ ದಾಖಲಾಗಿರುವ ಪ್ರಕರಣಗಳ ಸಂಖ್ಯೆ

| ಕ್ರ.ಸಂ. | ಜಿಲ್ಲೆ | 2018-19 | | | 2019-20 | | | 2020-21 | | |
|---|---|---|---|---|---|---|---|---|---|---|
| | | ವರದಿಯಾಗಿರುವ ದೂರುಗಳ ಸಂಖ್ಯೆ | ದೂರಿನನ್ವಯ ದಾಖಲಾಗಿರುವ ಪ್ರಕರಣಗಳ ಸಂಖ್ಯೆ | ಸರ್ಕಾರ ಕೈಗೊಂಡಿರುವ ಕ್ರಮ | ವರದಿಯಾಗಿರುವ ದೂರುಗಳ ಸಂಖ್ಯೆ | ದೂರಿನನ್ವಯ ದಾಖಲಾಗಿರುವ ಪ್ರಕರಣಗಳ ಸಂಖ್ಯೆ | ಸರ್ಕಾರ ಕೈಗೊಂಡಿರುವ ಕ್ರಮ | ವರದಿಯಾಗಿರುವ ದೂರುಗಳ ಸಂಖ್ಯೆ | ದೂರಿನನ್ವಯ ದಾಖಲಾಗಿರುವ ಪ್ರಕರಣಗಳ ಸಂಖ್ಯೆ | ಸರ್ಕಾರ ಕೈಗೊಂಡಿರುವ ಕ್ರಮ |
| 1 | ಬಾಗಲಕೋಟೆ | ಇಲ್ಲ | ಇಲ್ಲ | ಅನ್ವಯಿಸುವುದಿಲ್ಲ | ಇಲ್ಲ | ಇಲ್ಲ | ಅನ್ವಯಿಸುವುದಿಲ್ಲ | 10(ಸೋಯಾಅವರೆ) | 10 (ಮಾನ್ಯ ನ್ಯಾಯಾಲಯದಲ್ಲಿ ಪ್ರಕರಣ ದಾಖಲಿಸಲಾಗಿದೆ) | ಬೀಜ ಅಧಿನಿಯಮದಡಿ ನ್ಯಾಯಾಲಯದಲ್ಲಿ ಪ್ರಕರಣ ದಾಖಲು ಪಡಿಸಲಾಗಿದೆ. |
| 2 | ಬೆಳಗಾವಿ | 0 | | | 0 | | | 6 | 6 | ಬೀಜ ಅಧಿನಿಯಮದಡಿ ನ್ಯಾಯಾಲಯದಲ್ಲಿ ಪ್ರಕರಣ ದಾಖಲು ಪಡಿಸಲಾಗಿದೆ. |
| 3 | ಬಳ್ಳಾರಿ | ಇಲ್ಲ | | | ಇಲ್ಲ | | | ಇಲ್ಲ | | |
| 4 | ಬೆಂಗಳೂರು(ಗ್ರಾ) | ಇಲ್ಲ | | | ಇಲ್ಲ | | | ಇಲ್ಲ | | |
| 5 | ಬೆಂಗಳೂರು(ನ) | ಇಲ್ಲ | | | ಇಲ್ಲ | | | ಇಲ್ಲ | | |
| 6 | ಬೀದರ್ | 2 | 2 | ನ್ಯಾಯಾಲಯದಲ್ಲಿ ಪ್ರಕರಣ ದಾಖಲಿಸಲಾಗಿದೆ | 1 | 1 | ಕಾರಣ ಕೇಳುವ ನೋಟಿಸು ನೀಡಲಾಗಿದೆ | 69 | 42 | ನ್ಯಾಯಾಲಯದಲ್ಲಿ 42 ಪ್ರಕರಣ ದಾಖಲಿಸಲಾಗಿದೆ ಮತ್ತು 27 ಕಾರಣ ಕೇಳುವ ನೋಟಿಸು ನೀಡಲಾಗಿದೆ |
| 7 | ಚಾಮರಾಜನಗರ | ಇಲ್ಲ | | | ಇಲ್ಲ | | | ಇಲ್ಲ | | |
| 8 | ಚಿಕ್ಕಬಳ್ಳಾಪುರ | ಇಲ್ಲ | | | ಇಲ್ಲ | | | ಇಲ್ಲ | | |
| 9 | ಚಿಕ್ಕಮಗಳೂರು | ಇಲ್ಲ | | | ಇಲ್ಲ | | | ಇಲ್ಲ | | |
| 10 | ಚಿತ್ರದುರ್ಗ | ಇಲ್ಲ | | | ಇಲ್ಲ | | | ಇಲ್ಲ | | |
| 11 | ದಕ್ಷಿಣಕನ್ನಡ | ಇಲ್ಲ | | | ಇಲ್ಲ | | | ಇಲ್ಲ | | |
| 12 | ದಾವಣಗೆರೆ | 5 | 5 | ಎಲ್ಲಾ ಪ್ರಕರಣಗಳು ಜಿಲ್ಲಾ ಗ್ರಾಹಕರ ವೇದಿಕೆಯಲ್ಲಿ ದಾಖಲಾಗಿರುತ್ತವೆ | 6 | 6 | ಎಲ್ಲಾ ಪ್ರಕರಣಗಳು ಜಿಲ್ಲಾ ಗ್ರಾಹಕರ ವೇದಿಕೆಯಲ್ಲಿ ದಾಖಲಾಗಿರುತ್ತವೆ | 0 | 0 | - |
| 13 | ಧಾರವಾಡ | 0 | | | 0 | | | 5 | 5 | ಬೀಜ ಅಧಿನಿಯಮದಡಿ ನ್ಯಾಯಾಲಯದಲ್ಲಿ ಪ್ರಕರಣ ದಾಖಲು ಪಡಿಸಲಾಗಿದೆ. |
| 14 | ಗದಗ್ | ಇಲ್ಲ | | | ಇಲ್ಲ | | | ಇಲ್ಲ | | |
| 15 | ಹಾಸನ | ಇಲ್ಲ | | | ಇಲ್ಲ | | | ಇಲ್ಲ | | |
| 16 | ಹಾವೇರಿ | 0 | 0 | - | 0 | 0 | - | 12 | 12 | ಬೀಜ ಅಧಿನಿಯಮದಡಿ ನ್ಯಾಯಾಲಯದಲ್ಲಿ ಪ್ರಕರಣ ದಾಖಲು ಪಡಿಸಲಾಗಿದೆ. |

| | | | | | | | | | | |
|---|---|---|---|---|---|---|---|---|---|---|
| 17 | ಕಲಬುರ್ಗಿ | 0 | 0 | ಅನ್ವಯಿಸುವುದಿಲ್ಲ | 0 | 0 | ಅನ್ವಯಿಸುವುದಿಲ್ಲ | 0 | 0 | |
| 18 | ಕೊಡಗು* | ಇಲ್ಲ | | | ಇಲ್ಲ | | | ಇಲ್ಲ | | |
| 19 | ಕೋಲಾರ* | ಇಲ್ಲ | | | ಇಲ್ಲ | | | ಇಲ್ಲ | | |
| 20 | ಕೊಪ್ಪಳ | ಇಲ್ಲ | | | ಇಲ್ಲ | | | ಇಲ್ಲ | | |
| 21 | ಮಂಡ್ಯ | ಇಲ್ಲ | | | ಇಲ್ಲ | | | ಇಲ್ಲ | | |
| 22 | ಮೈಸೂರು | ಇಲ್ಲ | ಇಲ್ಲ | ಅನ್ವಯಿಸುವುದಿಲ್ಲ | 1 | ಇಲ್ಲ | ಕ್ರಮಗಳಲ್ಲಿ ವ್ಯತ್ಯಾಸವಾಗಿದ್ದು, ವಿಜ್ಞಾನಿಗಳು ಮತ್ತು ಕೃಷಿ ಇಲಾಖೆಯ ಅಧಿಕಾರಿಗಳಿಂದ ಕ್ಷೇತ್ರ ಪರಿಶೀಲಿಸಿ, ರೈತರು ಅನುಸರಿಸಬೇಕಾದ ನಿರ್ವಹಣಾ ಕ್ರಮಗಳ ಬಗ್ಗ ರೈತರಿಗೆ ಅರಿವು ಮೂಡಿಸಲಾಗಿದೆ. | 5 | ಇಲ್ಲ | ಭತ್ತ ಹಾಗೂ ಬಿ.ಟಿ.ಹತ್ತಿ ಬೆಳೆಯ ಬೇಸಾಯ ಕ್ರಮಗಳಲ್ಲಿ ವ್ಯತ್ಯಾಸವಾಗಿದ್ದು, ವಿಜ್ಞಾನಿಗಳು ಮತ್ತು ಕೃಷಿ ಇಲಾಖೆಯ ಅಧಿಕಾರಿಗಳಿಂದ ಕ್ಷೇತ್ರ ಪರಿಶೀಲಿಸಿ, ರೈತರು ಅನುಸರಿಸಬೇಕಾದ ನಿರ್ವಹಣಾ ಕ್ರಮಗಳ ಬಗ್ಗ ರೈತರಿಗೆ ಅರಿವು ಮೂಡಿಸಲಾಗಿದೆ. |
| 23 | ರಾಯಚೂರು | 0 | 0 | 0 | 1 | 1 | ನ್ಯಾಯಾಲಯದಲ್ಲಿ ಮೊಕದ್ದಮೆ ಹೂಡಲಾಗಿದೆ CC No-0090/2020 Date:17-06-2020 | 0 | 0 | 0 |
| 24 | ರಾಮನಗರ* | ಯಾವುದೇ ದೂರುಗಳು ವರದಿಯಾಗಿರುವುದಿಲ್ಲ. | | | | | | | | |
| 25 | ಶಿವಮೊಗ್ಗ | ಇಲ್ಲ | | | ಇಲ್ಲ | | | ಇಲ್ಲ | | |
| 26 | ತುಮಕೂರು | ಇಲ್ಲ | | | ಇಲ್ಲ | | | ಇಲ್ಲ | | |
| 27 | ಉಡುಪಿ | ಇಲ್ಲ | | | ಇಲ್ಲ | | | ಇಲ್ಲ | | |
| 28 | ಉತ್ತರಕನ್ನಡ | 1 | 1 | ವಿಚಾರಣೆ ಜಾರಿಯಲ್ಲಿರುತ್ತದೆ CC No. 4/2020 | ಇಲ್ಲ | | | ಇಲ್ಲ | | |
| 29 | ವಿಜಯಪುರ | ವರದಿಯಾಗಿರುವುದಿಲ್ಲ | ಇಲ್ಲ | ಇಲ್ಲ | ವರದಿಯಾಗಿರುವುದಿಲ್ಲ | ಇಲ್ಲ | ಇಲ್ಲ | ವರದಿಯಾಗಿರುವುದಿಲ್ಲ | ಇಲ್ಲ | ಇಲ್ಲ |
| 30 | ಯಾದಗಿರಿ | 0 | 0 | – | 0 | 0 | – | 3 | 3 | ಬೀಜ ಅಧಿನಿಯಮದಡಿ ನ್ಯಾಯಾಲಯದಲ್ಲಿ ಪ್ರಕರಣ ದಾಖಲು ಪಡಿಸಲಾಗಿದೆ. |
| | ಒಟ್ಟು | 8 | 8 | | 9 | 8 | | 110 | 78 | |

# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 14 |
| ಸದಸ್ಯರ ಹೆಸರು | ಶ್ರೀ ರಾಜೀವ್ ಪಿ. (ಕುಡಚಿ) |
| ಉತ್ತರಿಸುವ ದಿನಾಂಕ | 01-02-2021 |
| ಉತ್ತರಿಸುವ ಸಚಿವರು | ಉಪ ಮುಖ್ಯಮಂತ್ರಿಗಳು, ಲೋಕೋಪಯೋಗಿ ಇಲಾಖೆ |

| | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | 2020ರ ಸಾಲಿನ ಅಗಸ್ಟ್ ಮತ್ತು ಸೆಪ್ಟಂಬರ್ ತಿಂಗಳಲ್ಲಿ ಕುಡಚಿ ವಿಧಾನ ಸಭಾ ಕ್ಷೇತ್ರದಲ್ಲಾಗಿರುವ ಅತಿಯಾದ ಮಳೆಯಿಂದ ಹಾನಿಗೊಳಗಾಗಿರುವ ರಸ್ತೆ ಮತ್ತು ಸೇತುವೆಗಳೇಷ್ಟು; (ಹಾನಿಗೊಳಗಾಗಿರುವ ಕಿಮೀ ರಸ್ತೆ ಹಾಗೂ ಸೇತುವೆಗಳ ಸಂಪೂರ್ಣ ವಿವರ ನೀಡುವುದು) | 2020ರ ಸಾಲಿನ ಅಗಸ್ಟ್ ಮತ್ತು ಸೆಪ್ಟಂಬರ್ ತಿಂಗಳಲ್ಲಿ ಕುಡಚಿ ವಿಧಾನ ಸಭಾ ಕ್ಷೇತ್ರದಲ್ಲಾಗಿರುವ ಅತಿಯಾದ ಮಳೆಯಿಂದ ಹಾನಿಗೊಳಗಾದ ರಸ್ತೆ ಮತ್ತು ಸೇತುವೆಗಳ ವಿವರವನ್ನು ಅನುಬಂಧ-1 ರಲ್ಲಿ ನೀಡಲಾಗಿದೆ. |
| ಆ) | ಜಿಲ್ಲಾ ರಾಜ್ಯ ಹೆದ್ದಾರಿ ರಸ್ತೆಗಳ ದುರಸ್ತಿ ಕಾಮಗಾರಿಗಳಿಗೆ ಅಗತ್ಯವಿರುವ ಅನುದಾನ ಬಿಡುಗಡೆಗೆ ಸರ್ಕಾರ ಕೈಗೊಂಡಿರುವ ಕ್ರಮಗಳೇನು" | ಜಿಲ್ಲಾ ರಾಜ್ಯ ಹೆದ್ದಾರಿ ರಸ್ತೆಗಳ ದುರಸ್ತಿ ಕಾಮಗಾರಿಗಳಿಗೆ ರೂ:345.00 ಲಕ್ಷಗಳ ಅನುದಾನ ಬಿಡುಗಡೆಯಾಗಿರುತ್ತದೆ. ವಿವರವನ್ನು ಅನುಬಂಧ-2 ರಲ್ಲಿ ನೀಡಲಾಗಿದೆ. |
| ಇ) | ಹಾಗಿದ್ದಲ್ಲಿ ಸದರಿ ಕಾಮಗಾರಿಯನ್ನು ಯಾವಾಗ ಪ್ರಾರಂಭಿಸಲಾಗುವುದು. | ಈಗಾಗಲೇ ವಿಳಂಬಕ್ಕೆ ಆಸ್ಪದ ನೀಡದೆ ಮಳೆಯಿಂದ ಹಾನಿಗೊಳಗಾದ ರಸ್ತೆಗಳನ್ನು ಕೂಡಲೇ ದುರಸ್ತಿಗೊಳಿಸಲು ರೂ.345.00 ಲಕ್ಷಗಳ ಕಾಮಗಾರಿಗಳಿಗೆ ಅನುಮೋದನೆ ನೀಡಲಾಗಿದ್ದು, ಕಾಮಗಾರಿಗಳು ಪ್ರಗತಿಯಲ್ಲಿರುತ್ತವೆ. ಕಾಮಗಾರಿಯ ವಿವರಗಳನ್ನು ಅನುಬಂಧ-2 ರಲ್ಲಿ ನೀಡಲಾಗಿದೆ. |
| ಈ) | ಈ ಕಾಮಗಾರಿಗಳಿಗೆ ಅನುದಾನ ಬಿಡುಗಡೆಯ ವಿಳಂಬಕ್ಕೆ ಕಾರಣಗಳೇನು? (ವಿವರ ನೀಡುವದು) | |

ಲೋಇ 13 ಸಿಕ್ಯೂಎನ್ 2021(ಇ)

(ಗೋವಿಂದ ಎಂ. ಕಾರಜೋಳ)
ಉಪ ಮುಖ್ಯಮಂತ್ರಿಗಳು,
ಲೋಕೋಪಯೋಗಿ ಇಲಾಖೆ

ಅನುಬಂಧ-1

14

ಮಾನ್ಯ ವಿಧಾನ ಸಭೆ ಸದಸ್ಯರಾದ ಶ್ರೀ. ಪಿ. ರಾಜೀವ್ (ಕುಡಚಿ) ರವರ ಚುಕ್ಕೆ
ಗುರುತಿನ/ಗುರುತಿಲ್ಲದ ಪ್ರಶ್ನೆ ಸಂಖ್ಯೆ: 14 ಕ್ಕೆ ಕರಡು ಉತ್ತರಗಳು (ಅನುಬಂಧ-1)

**PROPOSAL FOR RESTORATION OF ROADS & BRIDGES DUE TO FLOOD DAMAGE DURING 2020-21**

| Sl No | Constituency | Name of Road | Length in Km |
|---|---|---|---|
| 1 | 2 | 3 | 4 |
| 1 | Kudachi | ಹಾರೂಗೇರಿ ರಾಯಬಾಗ ನಾಗರಮುನ್ನೋಳಿ ರಸ್ತೆ ಕಿಮೀ 0.00 ರಿಂದ 6.60 ವರೆಗೆ | 6.60 |
| 2 | Kudachi | ಕಾಗವಾಡ ಕಲಾದಗಿ ರಾಹೆ-53 ಕಿಮೀ 24.00 ರಿಂದ 28.00 ಮತ್ತು 31.00 ರಿಂದ 32.55 ರ ವರೆಗೆ ಆಯ್ದ ಭಾಗಗಳಲ್ಲಿ ರಸ್ತೆ ದುರಸ್ಥಿ ಮಾಡುವದು | 5.55 |
| 3 | Kudachi | ರಾಯಬಾಗ ಕಂಕಣವಾಡಿ ಆಯ್ದು ಭಾಗಗಳಲ್ಲಿ ರಸ್ತೆ ಕಿಮೀ. 10.00 ರಿಂದ 16.00 ರ ವರೆಗೆ ದುರಸ್ತಿ ಮಾಡುವುದು. | 6.00 |
| 4 | Kudachi | ರಾಯಬಾಗ ತಾಲೂಕಿನ ಚಿಂಚಲಿ ರೇಲ್ವೆ ಗೇಟನಿಂದ ಸುಟ್ಟಟ್ಟಿ ಕ್ರಾಸ್ ಕಿ.ಮೀ. 2.00 ರಿಂದ 4.50 ರ ವರೆಗೆ ರಸ್ತೆ ಸುಧಾರಣೆ. | 2.00 |
| 5 | Kudachi | ದೇವಾಪೂರಟ್ಟಿ ಕಟಕಬಾವಿ ಮಂಟೂರ ರಸ್ತೆ ಕಿ.ಮೀ 3.30 ರಿಂದ 5.50 | 2.20 |
| 6 | Kudachi | ರಾಯಬಾಗ ಬೆಕ್ಕೇರಿ ಮೊರಬ ರಸ್ತೆ ಕಿಮೀ 7.70 ರಿಂದ 10.90 ರ ವರೆಗೆ | 3.20 |
| 7 | Kudachi | ನಿಲಜಿ ಸುಟ್ಟಟ್ಟಿ ಕುಡಚಿ ರಸ್ತೆ ಕಿಮೀ 5.00 ರಿಂದ 9.90 ರ ವರೆಗೆ | 4.90 |
| 8 | Kudachi | ಅಳಗವಾಡಿ ಸವಸುದ್ದಿ ಬಸ್ತವಾಡ ರಸ್ತೆ ಕಿಮೀ 7.00 ರಿಂದ 10.16 | 3.16 |
| 9 | Kudachi | ಚಿಂಚಲಿ ರೇಲ್ವೇ ಗೇಟ ದಿಂದ ಹಾರೂಗೇರಿ 3.00 ರಿಂದ 7.00 | 4.00 |
| 10 | Kudachi | ಚಿಕ್ಕೋಡಿ ರೇಲ್ವೆ ಸ್ಟೇಶನದಿಂದ ಮುಗಳಖೋಡ ಹಂದಿಗುಂದ ಆಯ್ದು ಭಾಗಗಳಲ್ಲಿ ರಸ್ತೆ 10.00 ರಿಂದ 14.00 ರ ವರೆಗೆ ದುರಸ್ತಿ ಮಾಡುವುದು. | 4.00 |
| 11 | Kudachi | ಮುಗಳಖೋಡ ಹಿಡಕಲ್ ರಸ್ತೆ ಕಿಮೀ. 1.00 ರಿಂದ 3.00 ಆಯ್ದು ಭಾಗಗಳಲ್ಲಿ ದುರಸ್ತಿ ಮಾಡುವುದು. | 2.00 |
| | | ಒಟ್ಟು: | 43.61 |

ಅನುಬಂಧ-2

ಮ ್ಯ ವಿಧಾನ ಸಭೆ ಸದಸ್ಯರಾದ ಶ್ರೀ. ಪಿ. ರಾಜೀವ್ (ಕುಡಚಿ) ರವರ ಚುಕ್ಕೆ ಗುರುತಿನ/ಗುರುತಿಲ್ಲದ ಪ್ರಶ್ನೆ ಸಂಖ್ಯೆ: 14 ಕ್ಕೆ ಕರಡು ಉತ್ತರಗಳು (ಅನುಬಂಧ-2)

| ಕ್ರ ಸಂ | ಮತಕ್ಷೇತ್ರ | ಕಾಮಗಾರಿ ಹೆಸರು | ಅಂದಾಜು ಮೊತ್ತ | ಅಭಿವೃದ್ಧಿಗೆ ನಿಗದಿಪಡಿಸಿದ ಉದ್ದ ಕಿ.ಮೀ | ಕಾಮಗಾರಿಯ ಪ್ರಸ್ತುತ ಹಂತ |
|---|---|---|---|---|---|
| 1 | 2 | 3 | 4 | 5 | 6 |
| **ರಾಜ್ಯ ಹೆದ್ದಾರಿ ರಸ್ತೆಗಳು** | | | | | |
| 1 | ಕುಡಚಿ | ಕಾಗವಾಡ ಕಲಾದಗಿ ರಾಹೆ-53 ಕಿಮೀ 24.00 ರಿಂದ 28.00 ರ ವರೆಗೆ ಆಯ್ದ ಭಾಗಗಳಲ್ಲಿ ರಸ್ತೆ ದುರಸ್ಥಿ ಮಾಡುವದು (ಕಿಮೀ 24.0 ರಿಂದ 24.10, 25.00 ರಿಂದ 25.70) | 45.00 | 0.30 | 133472 ಕೆಲಸ ಪ್ರಗತಿಯಲ್ಲಿದೆ. |
| | | ಒಟ್ಟು ರೂ | **45.00** | **0.30** | |
| **ಜಿಲ್ಲಾ ಮುಖ್ಯ ರಸ್ತೆ ದುರಸ್ತಿ ಕಾಮಗಾರಿಗಳು** | | | | | |
| | | **ರಾಯಬಾಗ ಉಪ ವಿಭಾಗ** | | | |
| 2 | ಕುಡಚಿ | ರಾಯಬಾಗ ಕಂಕಣವಾಡಿ ಆಯ್ದು ಭಾಗಗಳಲ್ಲಿ ರಸ್ತೆ ಕಿಮೀ. 10.00 ರಿಂದ 16.00 ರ ವರೆಗೆ ದುರಸ್ತಿ ಮಾಡುವುದು. (ಕಿಮೀ 11.60 ರಿಂದ 13.00) | 200.00 | 1.40 | 129659 ಕೆಲಸ ಪ್ರಗತಿಯಲ್ಲಿದೆ. |
| 3 | ಕುಡಚಿ | ರಾಯಬಾಗ ತಾಲೂಕಿನ ಚಿಂಚಲಿ ರೇಲ್ವೆ ಗೇಟನಿಂದ ಸುಟ್ಟಟ್ಟಿ ಕ್ರಾಸ್ ಕಿ.ಮೀ. 2.00 ರಿಂದ 4.50 ರ ವರೆಗೆ ರಸ್ತೆ ಸುಧಾರಣೆ. (ಕಿಮೀ 4.24 ರಿಂದ 4.74) | 100.00 | **0.50** | 133154 ಕೆಲಸ ಪ್ರಗತಿಯಲ್ಲಿದೆ.. |
| | | ಒಟ್ಟು ರೂ | **300.00** | **1.90** | |
| | | ವಿಭಾಗದ ಒಟ್ಟು ರೂ | **345.00** | **2.20** | |

# <u>ಕರ್ನಾಟಕ ವಿಧಾನಸಭೆ</u>

| | | |
|---|---|---|
| 1) | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 23 |
| 2) | ಸದಸ್ಯರ ಹೆಸರು | ಶ್ರೀ ಕುಮಾರ ಬಂಗಾರಪ್ಪ ಎಸ್. (ಸೊರಬ) |
| 3) | ಉತ್ತರಿಸಬೇಕಾದ ದಿನಾಂಕ | 01-02-2021 |
| 4) | ಉತ್ತರಿಸಬೇಕಾದ ಸಚಿವರು | ಮಾನ್ಯ ಮೀನುಗಾರಿಕೆ ಹಾಗೂ ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವರು |

| | ಪ್ರಶ್ನೆ | ಉತ್ತರ |
|---|---|---|
| ಅ) | ನಂಜುಂಡಪ್ಪ ವರದಿಯ ಪ್ರಕಾರ ಹಿಂದುಳಿದ ತಾಲ್ಲೂಕಾಗಿರುವ ಸೊರಬ ತಾಲ್ಲೂಕಿನಲ್ಲಿ ಏಷ್ಯಾ ಖಂಡದಲ್ಲಿಯೆ ಅತ್ಯಧಿಕ ಕೆರೆಗಳಿದ್ದು ಮೀನುಗಾರಿಕೆಯಲ್ಲಿ ಮಾತ್ರ ಯಾವುದೇ ಪ್ರಗತಿ ಆಗದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಶಿವಮೊಗ್ಗ ಜಿಲ್ಲೆ, ಸೊರಬ ತಾಲ್ಲೂಕಿನಲ್ಲಿ ಒಟ್ಟು <u>1185</u> ಕೆರೆಗಳಿವೆ. ಇವುಗಳಲ್ಲಿ 40 ಹೆಕ್ಟೇರ್ ವಿಸ್ತೀರ್ಣಕ್ಕಿಂತ ಹೆಚ್ಚು ಅಚ್ಚುಕಟ್ಟು ಪ್ರದೇಶ ಹೊಂದಿರುವ ಸಣ್ಣ ನೀರಾವರಿ ಇಲಾಖೆ ವ್ಯಾಪ್ತಿಗೆ ಒಳಪಡುವ ಕೆರೆಗಳ ಸಂಖ್ಯೆ <u>126</u>.<br><br>40 ಹೆಕ್ಟೇರ್ ವಿಸ್ತೀರ್ಣಕ್ಕಿಂತ ಕಡಿಮೆ ಅಚ್ಚುಕಟ್ಟು ಪ್ರದೇಶ ಹೊಂದಿರುವ ಪಂಚಾಯತ್‌ರಾಜ್ ಇಲಾಖೆ ವ್ಯಾಪ್ತಿಗೆ ಒಳಪಡುವ ಕೆರೆಗಳ ಸಂಖ್ಯೆ 1059. ಈ ಕೆರೆಗಳ ಮೀನು ಪಾಶುವಾರು ಹಕ್ಕಿನ ಗುತ್ತಿಗೆಯನ್ನು ಸಂಬಂಧಿಸಿದ ಗ್ರಾಮ ಪಂಚಾಯತಿಗಳು ವಿಲೇ ಮಾಡುತ್ತಿವೆ. ತಾಲ್ಲೂಕಿನಲ್ಲಿ ಎರಡು ನದಿ ಭಾಗಗಳು (60 ಕಿ.ಮೀ.) ಇವೆ.<br><br>ಸೊರಬ ತಾಲ್ಲೂಕಿನಲ್ಲಿನ ಮೀನು ಕೃಷಿಕರ ಕಲ್ಯಾಣಕ್ಕಾಗಿ ಮೀನುಗಾರಿಕೆ ಇಲಾಖೆಯಿಂದ ಹಮ್ಮಿಕೊಳ್ಳಲಾಗಿರುವ ಯೋಜನೆಗಳ ವಿವರ **<u>ಅನುಬಂಧ-1</u>**ರಲ್ಲಿ ಒದಗಿಸಲಾಗಿದೆ.<br><br>ರಾಜ್ಯ ವಲಯ ಯೋಜನೆಯಡಿ 2021-22 ರ ವಾರ್ಷಿಕ ಯೋಜನೆಯಂತೆ ವಿವಿಧ ಯೋಜನೆಗಳನ್ನು ಅನುಷ್ಠಾನ ಗೊಳಿಸಲಾಗುತ್ತಿದೆ.<br><br>ಮತ್ಸ್ಯಕೃಷಿ ಅಭಿವೃದ್ಧಿಗೆ ಹಾಗೂ ಸ್ಥಳೀಯ ಮೀನು ಕೃಷಿಕರಿಗೆ ಮೀನು ಮಾರಾಟ ಮಾಡಲು ಸಹಕಾರಿಯಾಗಲೆಂದು ಎನ್‌ಎಫ್‌ಡಿಬಿ ಮಾರ್ಗಸೂಚಿ 2018 ರನ್ವಯ ಕೇಂದ್ರ ಸರ್ಕಾರದ ನೀಲಿಕ್ರಾಂತಿ ಯೋಜನೆಯಡಿ 20 ಮಳಿಗೆಗಳ ಮೀನು ಮಾರುಕಟ್ಟೆ ನಿರ್ಮಿಸಲು ಈಗಾಗಲೇ ಜಾಗ ಗುರುತಿಸಿ ಕ್ರಮವಹಿಸಲಾಗುತ್ತಿದೆ.<br><br>ಪ್ರಧಾನ ಮಂತ್ರಿ ಮತ್ಸ್ಯ ಸಂಪದ ಯೋಜನೆಯಡಿ ವಿವಿಧ ಯೋಜನೆಗಳು ಲಭ್ಯವಿದ್ದು, ಆಸಕ್ತ ಮೀನು ಕೃಷಿಕರು / ಮೀನುಗಾರರಿಂದ ಅರ್ಜಿಗಳನ್ನು ಆಹ್ವಾನಿಸಿದ್ದು, ಮೀನುಗಾರಿಕೆ / ಮೀನು ಕೃಷಿ ಅಭಿವೃದ್ಧಿಗೆ ಪ್ರೋತ್ಸಾಹ ನೀಡಲಾಗುತ್ತಿದೆ. |

| | | |
|---|---|---|
| ಆ) | ಸ್ಥಳೀಯವಾಗಿ ಮೀನುಗಾರಿಕೆ ಮಾಡುತ್ತಿದ್ದರೂ ಇದರಿಂದ ಸರ್ಕಾರಕ್ಕೆ ಆದಾಯವಿಲ್ಲದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ? | ಸೊರಬ ತಾಲ್ಲೂಕಿನಲ್ಲಿ ಮೀನುಗಾರಿಕೆಯಿಂದ ಕಳೆದ 6 ವರ್ಷಗಳಲ್ಲಿ ಬಂದ ಆದಾಯದ ವಿವರವನ್ನು ಅನುಬಂಧ-2 ರಲ್ಲಿ ಒದಗಿಸಲಾಗಿದೆ. |

ಸಂಖ್ಯೆ: ಪಸಂಮೀ ಇ-29 ಮೀಇಯೋ 2021

(ಎಸ್. ಅಂಗಾರ)
ಮೀನುಗಾರಿಕೆ ಹಾಗೂ
ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವರು

## ಅನುಬಂಧ-1

ಸೊರಬ ತಾಲ್ಲೂಕಿನಲ್ಲಿ ಮೀನು ಕೃಷಿಕರ ಕಲ್ಯಾಣಕ್ಕಾಗಿ ಇಲಾಖೆಯಿಂದ ಹಮ್ಮಿಕೊಳ್ಳಲಾಗಿರುವ ಯೋಜನೆಗಳ ವಿವರ ಈ ಕೆಳಕಂಡಂತಿದೆ.

| ಕ್ರ.ಸಂ | ಯೋಜನೆಯ ಹೆಸರು | ಯೋಜನೆಯ ವಿವರ |
|---|---|---|
| | **ರಾಜ್ಯ ವಲಯ ಯೋಜನೆಗಳು** | |
| 1. | ಮತ್ಸ್ಯಾಶ್ರಯ | ಈ ಯೋಜನೆಯಡಿ ವಸತಿರಹಿತ ಮೀನುಗಾರರಿಗೆ ಮನೆಗಳ ನಿರ್ಮಾಣ ಮಾಡಲು ಅವಕಾಶ ಕಲ್ಪಿಸಲಾಗುತ್ತಿದೆ. 2018-19ನೇ ಸಾಲಿನಲ್ಲಿ ಸೊರಬ ವಿಧಾನಸಭಾ ಕ್ಷೇತ್ರಕ್ಕೆ 10 ಮನೆಗಳು ಹಂಚಿಕೆಯಾಗಿರುತ್ತವೆ. |
| 2. | ಮೀನುಮರಿ ಖರೀದಿಸಲು ನೆರವು | ಈ ಯೋಜನೆಯಡಿ ಮೀನು ಕೃಷಿಕರಿಗೆ ಮೀನು ಮರಿ ಖರೀದಿಗೆ ಸಹಾಯಧನ ನೀಡಲಾಗುತ್ತಿದೆ. |
| 3. | ಫೈಬರ್‌ಗ್ಲಾಸ್ ಹರಿಗೋಲುಗಳ ಸರಬರಾಜು | ಈ ಯೋಜನೆಯಡಿ ಮೀನುಗಾರರಿಗೆ ಉಚಿತವಾಗಿ ಫೈಬರ್‌ಗ್ಲಾಸ್ ಹರಿಗೋಲುಗಳ ವಿತರಣೆ ಮಾಡಲಾಗುತ್ತಿದೆ. |
| 4. | ಮೀನು ಸಲಕರಣೆ ಕಿಟ್‌ಗಳ ಸರಬರಾಜು | ಈ ಯೋಜನೆಯಡಿ ಮೀನುಗಾರರಿಗೆ ಉಚಿತವಾಗಿ ಮೀನು ಸಲಕರಣೆ ಕಿಟ್‌ಗಳ (ಬಲೆ) ವಿತರಣೆ ಮಾಡಲಾಗುತ್ತಿದೆ. |
| 5. | ರಾಷ್ಟ್ರೀಯ ಕೃಷಿ ವಿಕಾಸ ಮೀನು ಸಲಕರಣೆ ಕಿಟ್‌ಗಳ ವಿತರಣೆ | ಸದರಿ ಯೋಜನೆಯಡಿ ಪ.ಜಾತಿ ಮತ್ತು ಪ.ಪಂ ಹಾಗು ಇತರೆ ವರ್ಗದ ಮೀನುಗಾರರಿಗೆ ಉಚಿತವಾಗಿ ಫೈಬರ್‌ಗ್ಲಾಸ್ ಹರಿಗೋಲುಗಳ ಮತ್ತು ಕಿಟ್‌ಗಳ (ಬಲೆ) ವಿತರಣೆ ಮಾಡಲಾಗುತ್ತಿದೆ. |
| 6. | ಮೀನುಮರಿ ಬಿತ್ತನೆ ಕಾರ್ಯಕ್ರಮ | ಜಲಾಶಯದ/ನದಿ ಭಾಗಕ್ಕೆ ಬಲಿತ ಮೀನುಮರಿ (Advanced fingerlings) ಬಿತ್ತನೆ ಮಾಡಲಾಗುತ್ತಿದೆ. |
| 7. | ಮತ್ಸ್ಯಕೃಷಿ ಆಶಾಕಿರಣ | ಸದರಿ ಯೋಜನೆಯಡಿ ಮೀನು ಕೃಷಿಕರಿಗೆ ಮೀನುಮರಿಖರೀದಿಗೆ ಹಾಗೂ ಮೀನು ಆಹಾರ ಖರೀದಿಗೆ ಸಹಾಯಧನ ನೀಡಲಾಗುತ್ತಿದೆ. |
| 8. | ಸಂಶೋಧನೆ, ವಿಸ್ತರಣೆ, ಪ್ರದರ್ಶನ ಮತ್ತುತರಬೇತಿ | ಸದರಿ ಯೋಜನೆಯಿಂದ ಮೀನುಗಾರಿಕೆ ಅಭಿವೃದ್ಧಿ ಬಗ್ಗೆ ತಾಂತ್ರಿಕ ತರಬೇತಿ, ಪ್ರಾತ್ಯಕ್ಷತೆ, ವಸ್ತು ಪ್ರದರ್ಶನಗಳನ್ನು ಏರ್ಪಡಿಸಲಾಗುತ್ತಿದೆ. ಇಲಾಖೆಯ ಕಾರ್ಯ ಚಟುವಟಿಕೆಗಳ ಬಗ್ಗೆ ಹಸ್ತ ಪ್ರತಿಗಳನ್ನು ಮುದ್ರಿಸಿ ಮಾಹಿತಿ ಹಾಗೂ ಪ್ರಚಾರ ಪಡಿಸಲು ನೀಡಲಾಗುತ್ತಿದೆ. |
| | **ಜಿಲ್ಲಾ ವಲಯ ಯೋಜನೆಗಳು** | |
| 1. | ಜಿಲ್ಲಾ ವಲಯದ ಗಿರಿಜನ ಉಪ ಯೋಜನೆ | ಸದರಿ ಯೋಜನೆಯಡಿ ಪ.ಪಂಗಡದ ಮೀನುಗಾರರಿಗೆ ಉಚಿತವಾಗಿ ಫೈಬರ್‌ಗ್ಲಾಸ್ ಹರಿಗೋಲುಗಳ ಮತ್ತು ಕಿಟ್‌ಗಳ (ಬಲೆ) ವಿತರಣೆ ಮಾಡಲಾಗುತ್ತಿದೆ. |
| 2. | ಜಿಲ್ಲಾ ವಲಯದ ವಿಶೇಷ ಘಟಕ ಯೋಜನೆ | ಜಿಲ್ಲಾ ವಲಯದ ವಿಶೇಷ ಘಟಕ ಯೋಜನೆಯಡಿ ಪರಿಶಿಷ್ಟ ಜಾತಿಯ ಮೀನುಗಾರರಿಗೆ ಉಚಿತವಾಗಿ ಫೈಬರ್ ಗ್ಲಾಸ್ ಹರಿಗೋಲುಗಳ ಮತ್ತು ಕಿಟ್ ಗಳ(ಬಲೆ) ವಿತರಣೆ ಮಾಡಲಾಗುತ್ತಿದೆ. |
| 3. | ಮೀನು ಮಾರುಕಟ್ಟೆ ಮತ್ಸ್ಯಾ ವಾಹಿನಿ(ಮೊಪೆಡ್) ಖರೀದಿಗೆ ಸಹಾಯಧನ ಯೋಜನೆ | ಸದರಿ ಯೋಜನೆಯಡಿ ಮೀನು ಮಾರಾಟ ಮಾಡಲು ಮೀನುಗಾರರಿಗೆ ಮೊಪೆಡ್ ಖರೀದಿಗೆ ಶೇ.25ರಷ್ಟು ಮತ್ತು ಗರಿಷ್ಠ ಹತ್ತು ಸಾವಿರ ರೂಪಾಯಿಗಳ ಸಹಾಯಧನ ನೀಡಲಾಗುತ್ತಿದೆ. |
| 4. | ಪ್ರದರ್ಶನ ಮತ್ತು ತರಬೇತಿ | ಸದರಿ ಯೋಜನೆಯಿಂದ ಮೀನುಗಾರಿಕೆ ಅಭಿವೃದ್ಧಿ ಬಗ್ಗೆ ತಾಂತ್ರಿಕ ತರಬೇತಿ,ಪ್ರಾತ್ಯಕ್ಷತೆ, ವಸ್ತು ಪ್ರದರ್ಶನಗಳನ್ನು ಏರ್ಪಡಿಸಲಾಗುತ್ತಿದೆ. |

## ಅನುಬಂಧ-2

## ಸೊರಬ ತಾಲ್ಲೂಕಿನಲ್ಲಿ ಮೀನುಗಾರಿಕೆ ಇಲಾಖೆಯಿಂದ ಸರ್ಕಾರಕ್ಕೆ ಬಂದ ಆದಾಯದ ವಿವರ

(ಕಳೆದ 06 ವರ್ಷಗಳ ವಿವರ)

| ಕ್ರ.ಸಂ | ವರ್ಷ | ಟೆಂಡರ್ ಕಂ ಹರಾಜು ಮೂಲಕ ವಿಲೇವಾರಿಯಾದ ಕೆರೆಗಳು) | | ಪರವಾನಿಗೆ ಮೂಲಕ ವಿಲೇವಾರಿಯಾದ (ನದಿ ಭಾಗ) | | ಮೀನುಮರಿ ಮಾರಾಟ (ರೂ.ಲಕ್ಷಗಳಲ್ಲಿ) | ಒಟ್ಟು ಆದಾ ಲಕ್ಷಗ |
|---|---|---|---|---|---|---|---|
| | | ಸಂಖ್ಯೆ | ಆದಾಯ (ರೂ.ಲಕ್ಷಗಳಲ್ಲಿ) | ಸಂಖ್ಯೆ | ಆದಾಯ (ರೂ.ಲಕ್ಷಗಳಲ್ಲಿ) | | |
| 1. | 2014-15 | 101 | 7.83 | 8 | 0.08 | 0.066 | 7 |
| 2. | 2015-16 | 93 | 7.12 | 12 | 0.12 | 0.14 | 7 |
| 3. | 2016-17 | 81 | 6.47 | - | - | 0.159 | 6 |
| 4. | 2017-18 | 5 | 0.47 | 11 | 0.11 | 0.132 | 0. |
| 5. | 2018-19 | 107 | 8.85 | 6 | 0.06 | 0.06 | 8 |
| 6. | 2019-20 | 103 | 8.73 | 6 | 0.06 | 0.18 | 8 |

ಷರಾ: ಒಟ್ಟು ಸೊರಬ ತಾಲ್ಲೂಕಿನ ಇಲಾಖೆ ಕೆರೆಗಳ ಸಂಖ್ಯೆ 126

2016-17 ನೇ ಸಾಲಿಗೆ ಬರಗಾಲದ ಪ್ರಯುಕ್ತ ಸರ್ಕಾರವು ಪಾವತಿರಹಿತ ಒಂದು ವರ್ಷ ವಿ ನೀಡಿರುವುದರಿಂದ 2017-18 ನೇ ಸಾಲಿನಲ್ಲಿ ವಿಲೇವಾರಿಯಾದ ಜಲ ಸಂಪನ್ಮೂಲಗಳಿಗೆ ಅ ಗುತ್ತಿಗೆ ಮೊತ್ತ ಪಾವತಿಸಿಕೊಳ್ಳಲಾದ ಕಾರಣ ಸದರಿ ಸಾಲಿಗೆ ವಿಲೇವಾರಿಯಿಂದ ಬಂದ ಆ ಕಡಿಮೆ ಇರುತ್ತದೆ.

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 29

ಮಾನ್ಯ ಸದಸ್ಯರ ಹೆಸರು : ಶ್ರೀ ದೇವಾನಂದ್ ಫುಲಸಿಂಗ್ ಚವಾಣ್ (ನಾಗಠಾಣ)

ಉತ್ತರಿಸುವ ದಿನಾಂಕ : 01-02-2021

ಉತ್ತರಿಸುವ ಮಾನ್ಯ ಸಚಿವರು : ಕೃಷಿ ಸಚಿವರು

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | 2018-19 ಹಾಗೂ 2019-20ನೇ ಸಾಲಿನಲ್ಲಿ ನಾಗಠಾಣ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಬರುವ ವಿಜಯಪುರ ಹಾಗೂ ಚಡಚಣ ತಾಲ್ಲೂಕಿನಲ್ಲಿ ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು ರೈತರಿಗೆ ನೀಡಿರುವ ಬೆಳೆ ವಿಮೆ ಸೌಲಭ್ಯಗಳು ಯಾವುವು; ಸರ್ಕಾರ ಹಾಗೂ ರೈತರು ಪಾವತಿಸಿರುವ ಪ್ರೀಮಿಯಂ ಮೊತ್ತವೆಷ್ಟು; (ವಿವರ ನೀಡುವುದು) | 2018-19 ಹಾಗೂ 2019-20 ನೇ ಸಾಲಿನಲ್ಲಿ ನಾಗಠಾಣ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಬರುವ ವಿಜಯಪುರ ಹಾಗೂ ಚಡಚಣ ತಾಲ್ಲೂಕಿನಲ್ಲಿ ಕರ್ನಾಟಕ ರೈತ ಸುರಕ್ಷ ಪ್ರಧಾನ ಮಂತ್ರಿ ಫಸಲ್ ಬಿಮಾ ಯೋಜನೆಯಡಿ ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು ರೈತರಿಗೆ ನೀಡಿರುವ ಸೌಲಭ್ಯಗಳಿಗೆ ಸಂಬಂಧಿಸಿದಂತೆ ಒಟ್ಟು ಬೆಳೆ ವಿಮಾ ಪ್ರೀಮಿಯಂ ಮೊತ್ತದಲ್ಲಿ ರೈತರು ಆಹಾರ ಮತ್ತು ಎಣ್ಣೆ ಕಾಳು ಬೆಳೆಗಳಿಗೆ ಮುಂಗಾರು ಹಂಗಾಮಿನಲ್ಲಿ 2% ಹಾಗೂ ಹಿಂಗಾರು ಮತ್ತು ಬೇಸಿಗೆ ಹಂಗಾಮಿನಲ್ಲಿ 1.5% ವಿಮಾ ಪ್ರೀಮಿಯಂ ಮೊತ್ತವನ್ನು ಮತ್ತು ತೋಟಗಾರಿಕಾ ಬೆಳೆಗಳಿಗೆ 5% ವಿಮಾ ಪ್ರೀಮಿಯಂ ಮೊತ್ತವನ್ನು ಪಾವತಿಸಿದ್ದು ಉಳಿದ ಪ್ರೀಮಿಯಂ ಮೊತ್ತವನ್ನು ಕೇಂದ್ರ ಹಾಗೂ ರಾಜ್ಯ ಸರ್ಕಾರವು ಶೇ. 50:50ರ ಅನುಪಾತದಲ್ಲಿ ಭರಿಸಿರುತ್ತದೆ.<br><br>ಮುಂಗಾರು 2019ರ ಹಂಗಾಮಿನಲ್ಲಿ ಬಿತ್ತನೆ ನಂತರ ಕಟಾವಿಗೆ ಮೊದಲು ಹವಾಮಾನ ವೈಪರಿತ್ಯದ ಸಂದರ್ಭದಲ್ಲಿ ನೆರೆ ಪೀಡಿತ ಪ್ರದೇಶದಲ್ಲಿ ಹಾನಿಗೊಳಗಾದ ಬೆಳೆಗೆ ಜಿಲ್ಲಾಡಳಿತ ನೀಡಿರುವ ವರದಿಯಂತೆ PMFBY ಪರಿಷ್ಕೃತ ಮಾರ್ಗಸೂಚಿಯನ್ವಯ ಮಧ್ಯಂತರ ಬೆಳೆ ವಿಮಾ ಪರಿಹಾರ ಮೊತ್ತವನ್ನು (On account payment due to mid season adversity) ಅರ್ಹ ರೈತರಿಗೆ ಸಂರಕ್ಷಣೆ ಪೋರ್ಟಲ್ ಮುಖಾಂತರ ಅನುಷ್ಠಾನ ವಿಮಾ ಸಂಸ್ಥೆಯವರು ಇತ್ಯರ್ಥಪಡಿಸಿರುತ್ತಾರೆ. ರೈತ ಫಲಾನುಭವಿಗಳ ಆಧಾರ್ ಸಂಖ್ಯೆ ಬ್ಯಾಂಕ್ ಖಾತೆಗೆ ಲಿಂಕ್ ಆಗದೆ ಇರುವ ಕಾರಣ/ Account reached maximum Credit limit set on account/ A/c Blocked or Frozen/ Inactive Aadhaar ಕಾರಣಗಳಿಂದ ಬಾಕಿ ಇರುವ ವಿಮಾ ಪರಿಹಾರ ಮೊತ್ತವನ್ನು ಅನುಷ್ಠಾನ ವಿಮಾ ಸಂಸ್ಥೆಯವರಿಂದ ಇತ್ಯರ್ಥಪಡಿಸುವ ಕಾರ್ಯ ಪ್ರಕ್ರಿಯೆಯಲ್ಲಿರುತ್ತದೆ.<br><br>2018-19 ಹಾಗೂ 2019-20 ನೇ ಸಾಲಿನಲ್ಲಿ ನಾಗಠಾಣ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಬರುವ ವಿಜಯಪುರ ಹಾಗೂ ಚಡಚಣ ತಾಲ್ಲೂಕಿನಲ್ಲಿ ಸರ್ಕಾರ ಹಾಗೂ ರೈತರು ಪಾವತಿಸಿರುವ ಪ್ರೀಮಿಯಂ ಮೊತ್ತದ ವಿವರವನ್ನು ಅನುಬಂಧ-1 ರಲ್ಲಿ ನೀಡಿದೆ. |

| ಆ) | ರೈತರಿಗೆ ವಿಮೆ ಸೌಲಭ್ಯ ನೀಡುತ್ತಿರುವ ಕಂಪನಿಗಳಾವುವು; ಹಾಗೂ ರೈತರಿಗೆ ಪಾವತಿಸಿರುವ ವಿಮಾ ಮೊತ್ತವೆಷ್ಟು; (ವಿವರ ನೀಡುವುದು) | (see below) |
|---|---|---|

2018-19 ನೇ ಸಾಲಿನಲ್ಲಿ ರೈತರಿಗೆ ವಿಮೆ ಸೌಲಭ್ಯ ನೀಡುತ್ತಿರುವ ವಿಮಾ ಸಂಸ್ಥೆಗಳು:

| ಕ್ರಮ ಸಂಖ್ಯೆ | ವಿಮಾ ಸಂಸ್ಥೆ |
|---|---|
| 1 | ರಿಲಯನ್ಸ್ ಜನರಲ್ ಇನ್ಶೂರೆನ್ಸ್ ಕಂಪನಿ |
| 2 | ನ್ಯೂ ಇಂಡಿಯಾ ಅಸ್ಯುರೆನ್ಸ್ ಕಂಪನಿ ಲಿಮಿಟೆಡ್ |
| 3 | ಯುನೈಟೆಡ್ ಇಂಡಿಯಾ ಇನ್ಶೂರೆನ್ಸ್ ಕಂಪನಿ ಲಿಮಿಟೆಡ್ |
| 4 | ಯೂನಿವರ್ಸಲ್ ಸೋಂಪೂ ಜನರಲ್ ಇನ್ಶೂರೆನ್ಸ್ ಕಂಪನಿ |
| 5 | ಅಗ್ರಿಕಲ್ಚರ್ ಇನ್ಶೂರೆನ್ಸ್ ಕಂಪನಿ |

2018-19 ನೇ ಸಾಲಿನಲ್ಲಿ ಹಾಗೂ 2019 ಮುಂಗಾರು ಹಂಗಾಮಿನಲ್ಲಿ ನಾಗಠಾಣ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಬರುವ ವಿಜಯಪುರ ಹಾಗೂ ಚಡಚಣ ತಾಲ್ಲೂಕಿನಲ್ಲಿ ವಿಮಾ ಸಂಸ್ಥೆಯವರು ರೈತರಿಗೆ ಪಾವತಿಸಿರುವ ಬೆಳೆ ವಿಮಾ ಪರಿಹಾರ ಮೊತ್ತದ ವಿವರವನ್ನು ಅನುಬಂಧ-2 ರಲ್ಲಿ ನೀಡಿದೆ.

2019-20 ನೇ ಸಾಲಿನಲ್ಲಿ ರೈತರಿಗೆ ವಿಮೆ ಸೌಲಭ್ಯ ನೀಡುತ್ತಿರುವ ವಿಮಾ ಸಂಸ್ಥೆಗಳು:

| ಕ್ರಮ ಸಂಖ್ಯೆ | ವಿಮಾ ಸಂಸ್ಥೆ |
|---|---|
| 1 | ಭಾರತೀ ಎಕ್ಸಾ ಜನರಲ್ ಇನ್ಶೂರೆನ್ಸ್ ಕಂಪನಿ |
| 2 | ಬಜಾಜ್ ಅಲಿಯನ್ಸ್ ಜನರಲ್ ಇನ್ಶೂರೆನ್ಸ್ ಕಂಪನಿ |
| 3 | ಅಗ್ರಿಕಲ್ಚರ್ ಇನ್ಶೂರೆನ್ಸ್ ಕಂಪನಿ |
| 4 | ಫ್ಯೂಚರ್ ಜನರಲ್ ಇನ್ಶೂರೆನ್ಸ್ ಕಂಪನಿ |
| 5 | ಯೂನಿವರ್ಸಲ್ ಸೋಂಪೂ ಜನರಲ್ ಇನ್ಶೂರೆನ್ಸ್ ಕಂಪನಿ |
| 6 | ಹೆಚ್.ಡಿ.ಎಫ್.ಸಿ. ಎರ್ಗೋ ಜನರಲ್ ಇನ್ಶೂರೆನ್ಸ್ ಕಂಪನಿ |

2019-20 ಹಿಂಗಾರು ಮತ್ತು ಬೇಸಿಗೆ ಹಂಗಾಮಿನ ಬೆಳೆ ಸಮೀಕ್ಷೆಯ ದತ್ತಾಂಶವನ್ನು ಬೆಳೆ ನೋಂದಣಿಯಾದ ಪ್ರಸ್ತಾವನೆಗಳೊಂದಿಗೆ ಸಂರಕ್ಷಣೆ ತಂತ್ರಾಂಶದಲ್ಲಿ ತಾಳೆ ಮಾಡುವ ಪ್ರಕ್ರಿಯೆಯು ಪ್ರಗತಿಯಲ್ಲಿರುತ್ತದೆ. ತಾಳೆಯಾದ ಪ್ರಸ್ತಾವನೆಗಳಿಗೆ ಬೆಳೆ ಕಟಾವು ಪ್ರಯೋಗಗಳ ವರದಿಯ ಆಧಾರದ ಮೇಲೆ ಬೆಳೆ ವಿಮೆ ಪರಿಹಾರವನ್ನು ಸಂರಕ್ಷಣೆ ತಂತ್ರಾಂಶದಲ್ಲಿ initiate ಮಾಡಲಾಗುವುದು.

| | | |
|---|---|---|
| ಇ) | 2019-20 ನೇ ಸಾಲಿನಲ್ಲಿ ಭೀಮಾ ನದಿ ಪ್ರವಾಹ ಹಾಗೂ ಅತಿವೃಷ್ಟಿಯಿಂದ ಹಾನಿಗೀಡಾದ ಬೆಳೆಗಳ ನಷ್ಟಕ್ಕಾಗಿ ರೈತರಿಗೆ ಪಾವತಿಸಲಾಗಿರುವ ಪರಿಹಾರವೆಷ್ಟು? (ಫಲಾಭವಿಗಳ ಹೆಸರು ಸಹಿತ ವಿವರ ನೀಡುವುದು) | 2019-20ನೇ ಸಾಲಿನಲ್ಲಿ ಭೀಮಾ ನದಿ ಪಾತ್ರದ ಜಿಲ್ಲೆಗಳಲ್ಲಿ ಅತಿವೃಷ್ಟಿಯಿಂದ ಹಾನಿಗೀಡಾದ ಬೆಳೆ ನಷ್ಟಕ್ಕೆ ಇನ್‌ಪುಟ್ ಸಬ್ಸಿಡಿಯನ್ನು ರೈತರ ಬ್ಯಾಂಕ್ ಖಾತೆಗೆ ನೇರವಾಗಿ ಜಮೆ ಮಾಡಲಾಗಿದೆ. ವಿವರ ಕೆಳಕಂಡಂತಿದೆ. |

(ರೂ.ಲಕ್ಷಗಳಲ್ಲಿ)

| ಜಿಲ್ಲೆ | ರೈತರ ಸಂಖ್ಯೆ | ಮೊತ್ತ |
|---|---|---|
| ಕಲಬುರ್ಗಿ | 4201 | 733.63 |
| ರಾಯಚೂರು | 5171 | 1372.39 |
| ವಿಜಯಪುರ | 7648 | 1795.77 |
| ಯಾದಗಿರಿ | 5043 | 1457.44 |

(ಅರ್ಹ ಫಲಾನುಭವಿಗಳ ಹೆಸರು ಸಹಿತ ವಿವರಗಳು https://parihara.karnataka.gov.in/service22/beneficiary.aspx ಅಂತರ್ಜಾಲ ತಾಣದಲ್ಲಿ ಲಭ್ಯವಿರುತ್ತದೆ)

ಸಂಖ್ಯೆ: ಕೃಇ/11/ಕೃಕೈಉ 2021

(ಬಿ.ಸಿ. ಪಾಟೀಲ್)
ಕೃಷಿ ಸಚಿವರು

## ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 148

ಮಾನ್ಯ ವಿಧಾನ ಸಭಾ ಸದಸ್ಯರ ಹೆಸರು : ಶ್ರೀ ಬಸವರಾಜ ಮ. ಮತ್ತಿಮೂಡ (ಗುಲ್ಬರ್ಗಾ ಗ್ರಾಮಾಂತರ)

ಉತ್ತರಿಸುವ ದಿನಾಂಕ : 01-02-2021

ಉತ್ತರಿಸುವ ಮಾನ್ಯ ಸಚಿವರು : ಕೃಷಿ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕಳೆದ ಮೂರು ವರ್ಷಗಳಲ್ಲಿ ಕಲಬುರಗಿ ಜಿಲ್ಲೆಗೆ ಕೃಷಿ ಉಪಕರಣಗಳ ಖರೀದಿಗಾಗಿ ಹಂಚಿಕೆಯಾದ ಅನುದಾನವೆಷ್ಟು; (ವಿಧಾನಸಭಾ ಕ್ಷೇತ್ರವಾರು ವಿವರ ನೀಡುವುದು) | ಕಳೆದ ಮೂರು ವರ್ಷಗಳಲ್ಲಿ ಕಲಬುರಗಿ ಜಿಲ್ಲೆಗೆ ಕೃಷಿ ಉಪಕರಣಗಳ ಖರೀದಿಗಾಗಿ ಹಂಚಿಕೆಯಾದ ಅನುದಾನದ ವಿವರಗಳು ಈ ಕೆಳಕಂಡಂತಿರುತ್ತವೆ: |

ಆರ್ಥಿಕ (ರೂ ಲಕ್ಷಗಳಲ್ಲಿ)

| ಕ್ರ. ಸಂ | ವಿಧಾನ ಸಭಾ ಕ್ಷೇತ್ರ | 2017-18 ರಿಂದ ಡಿಸೆಂಬರ್ 31, 2020 ರವರೆಗೆ. |
|---|---|---|
| 1 | ಅಫಜಲಪೂರ | 1031.48 |
| 2 | ಆಳಂದ | 718.41 |
| 3 | ಚಿಂಚೋಳಿ | 439.10 |
| 4 | ಚಿತ್ತಾಪೂರ | 484.38 |
| 5 | ಗುಲಬರ್ಗಾ ಗ್ರಾಮಾಂತರ | 357.93 |
| 6 | ಗುಲಬರ್ಗಾ ದಕ್ಷಿಣ | 350.07 |
| 7 | ಗುಲಬರ್ಗಾ ಉತ್ತರ | 0.00 |
| 8 | ಜೇವರ್ಗಿ | 722.37 |
| 9 | ಸೇಡಂ | 583.91 |
| | ಒಟ್ಟು | 4687.64 |

| | | |
|---|---|---|
| ಆ) | ಕೃಷಿ ಉಪಕರಣಗಳಿಗಾಗಿ ರೈತರಿಂದ ಬಂದಿರುವ ಬೇಡಿಕೆ ಎಷ್ಟು (ವಿಧಾನಸಭಾ ಕ್ಷೇತ್ರವಾರು ವಿವರ ನೀಡುವುದು) | ಪ್ರಸಕ್ತ ಸಾಲಿನಲ್ಲಿ ಕೃಷಿ ಉಪಕರಣಗಳಿಗಾಗಿ ವಿಧಾನಸಭಾ ಕ್ಷೇತ್ರವಾರು ರೈತರಿಂದ ಬಂದಿರುವ ಬೇಡಿಕೆ ವಿವರ ಈ ಕೆಳಕಂಡಂತಿರುತ್ತವೆ: |

| ಕ್ರ. ಸಂ | ವಿಧಾನ ಸಭಾ ಕ್ಷೇತ್ರ | 2020-21 ನೇ ಸಾಲು | |
|---|---|---|---|
| | | ಭೌತಿಕ (ಸಂಖ್ಯೆಗಳಲ್ಲಿ) | ಆರ್ಥಿಕ (ರೂ ಲಕ್ಷಗಳಲ್ಲಿ) |
| 1 | ಅಫಜಲಪೂರ | 462 | 225.40 |
| 2 | ಆಳಂದ | 446 | 226.38 |
| 3 | ಚಿಂಚೋಳಿ | 509 | 122.05 |
| 4 | ಚಿತ್ತಾಪೂರ | 400 | 90.00 |
| 5 | ಗುಲಬರ್ಗಾ ಗ್ರಾಮಾಂತರ | 450 | 165.62 |
| 6 | ಗುಲಬರ್ಗಾ ದಕ್ಷಿಣ | 458 | 89.50 |
| 7 | ಗುಲಬರ್ಗಾ ಉತ್ತರ | 0 | 0.00 |
| 8 | ಜೇವರ್ಗಿ | 5828 | 425.89 |
| 9 | ಸೇಡಂ | 806 | 223.06 |
| | ಒಟ್ಟು | 9359 | 1567.90 |

| | | |
|---|---|---|
| ಇ) | ಬೇಡಿಕೆ ಸಲ್ಲಿಸಿದ್ದ ಎಲ್ಲಾ ರೈತರಿಗೆ ಕೃಷಿ ಉಪಕರಣಗಳನ್ನು ಪೂರೈಸಲಾಗಿದೆಯೇ; ಇಲ್ಲದಿದ್ದಲ್ಲಿ ಕಾರಣಗಳೇನು; | ಬೇಡಿಕೆ ಸಲ್ಲಿಸಿದ್ದ ರೈತರ ಪೈಕಿ ವಿವಿಧ ಸಹಾಯಧನ ಯೋಜನೆಗಳಡಿ ಲಭ್ಯವಿರುವ ಅನುದಾನದ ಆಧಾರದ ಮೇಲೆ ಈ ಕೆಳಕಂಡಂತೆ ಕೃಷಿ ಉಪಕರಣಗಳನ್ನು ವಿತರಿಸಲಾಗಿದೆ: |

| ಕ್ರ. ಸಂ | ವಿಧಾನ ಸಭಾ ಕ್ಷೇತ್ರ | 2020-21 ನೇ ಸಾಲಿನಲ್ಲಿ | |
|---|---|---|---|
| | | ಭೌತಿಕ (ಸಂಖ್ಯೆಗಳಲ್ಲಿ) | ಆರ್ಥಿಕ (ರೂ ಲಕ್ಷಗಳಲ್ಲಿ) |
| 1 | ಅಫಜಲಪೂರ | 361 | 119.55 |
| 2 | ಆಳಂದ | 242 | 123.48 |
| 3 | ಚಿಂಚೋಳಿ | 296 | 64.05 |
| 4 | ಚಿತ್ತಾಪೂರ | 187 | 71.00 |
| 5 | ಗುಲಬರ್ಗಾ ಗ್ರಾಮಾಂತರ | 258 | 54.62 |
| 6 | ಗುಲಬರ್ಗಾ ದಕ್ಷಿಣ | 351 | 50.38 |
| 7 | ಗುಲಬರ್ಗಾ ಉತ್ತರ | 0 | 0.00 |
| 8 | ಜೇವರ್ಗಿ | 3125 | 131.07 |
| 9 | ಸೇಡಂ | 348 | 80.56 |
| | ಒಟ್ಟು | 5168 | 694.71 |

| | | |
|---|---|---|
| (ಈ) | ಬಾಕಿ ಉಳಿದ ರೈತರಿಗೆ ಕೃಷಿ ಉಪಕರಣಗಳನ್ನು ನೀಡಲು ಅಗತ್ಯವಿರುವ ಅನುದಾನವೆಷ್ಟು; | ಬಾಕಿ ಉಳಿದ ರೈತರಿಗೆ ಕೃಷಿ ಉಪಕರಣಗಳನ್ನು ನೀಡಲು ರೂ. 873.19 ಲಕ್ಷಗಳ ಅನುದಾನದ ಅಗತ್ಯವಿರುತ್ತದೆ. |

